

ಕರ್ನಾಟಕ

# ಲೋಚನ

ಷಾಣ್ಮಾಸಿಕ ವಿದ್ವತ್ ಪತ್ರಿಕೆ

ಸಂಪುಟ : ೩೨, ಸಂಚಿಕೆ : ೦೨

ಜುಲೈ–ಡಿಸೆಂಬರ್ ೨೦೧೮

ಬಿ.ಎಂ.ಶ್ರೀ ಪ್ರತಿಷ್ಠಾನ
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ ಕಲಾಭವನ (ರಿ.)
೩ನೇ ಮುಖ್ಯ ರಸ್ತೆ, ನರಸಿಂಹರಾಜ ಕಾಲೋನಿ
ಬೆಂಗಳೂರು ೫೬೦೦೧೯

ಕರ್ನಾಟಕ

# ಲೋಚನ

ಷಾಣ್ಮಾಸಿಕ ವಿದ್ವತ್ ಪತ್ರಿಕೆ

## ಬಿ.ಎಂ.ಶ್ರೀ. ಪ್ರತಿಷ್ಠಾನದ ಪದಾಧಿಕಾರಿಗಳು

ಪ್ರೊ|| ಎಂ. ಎಚ್. ಕೃಷ್ಣಯ್ಯ
ಗೌರವಾಧ್ಯಕ್ಷರು

ಡಾ|| ಆರ್. ಲಕ್ಷ್ಮೀನಾರಾಯಣ
ಅಧ್ಯಕ್ಷರು

ಡಾ. ವಿಜಯಾ ಸುಬ್ಬರಾಜ್
ಶ್ರೀ ಬಿ. ಆರ್. ರವೀಂದ್ರನಾಥ್
ಕಾರ್ಯದರ್ಶಿಗಳು

ಡಾ. ಎಸ್. ಅನಿಲ್‌ಕುಮಾರ್
ಕೋಶಾಧ್ಯಕ್ಷರು




ಕರ್ನಾಟಕ

# ಲೋಚನ

ಷಾಣ್ಮಾಸಿಕ ವಿದ್ವತ್ ಪತ್ರಿಕೆ

ಸಂಪುಟ : ೩೨, ಸಂಚಿಕೆ : ೦೨
ಜುಲೈ–ಡಿಸೆಂಬರ್ ೨೦೧೮

ಸಂಪಾದಕ
ಡಾ. ಎಚ್.ಎನ್. ಮುರಳೀಧರ



ಬಿ.ಎಂ.ಶ್ರೀ. ಪ್ರತಿಷ್ಠಾನ
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ (ರಿ)
೩ನೆಯ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ
ಬೆಂಗಳೂರು–೫೬೦೦೧೯.
ದೂರವಾಣಿ : ೨೬೬೧೫೮೭೭, ೨೬೬೭೬೭೭೩
ವಿ–ಅಂಚೆ : bmsritrust@gmail.com bmsrilochana@gmail.com

**KARNATAKA LOCHANA**
Half yearly Research Journal
Edited by Dr. H.N. Muralidhara and
Published by B.M.Sri. Prathistana
M.V.Si. P.G. Research Centre
B.M.Sri. Kalabhavana(R)
3rd Main Road
Narasimharaja Colony, Bangalore 560 019.
Ph.No. 080-26615877, 26676773
e-mail
bmsritrust@gmail.com
bmsrilochana@gmail.com

July-Dec 2018 (Vol. 32, No. 2)
Pages: viii + 160

Subscription Details :
**Annual : Rs. 100/-**
**Life : Rs. 1500/-**

ಚಂದಾ ವಿವರ:
ವಾರ್ಷಿಕ : ರೂ. ೧೦೦/-
ಆಜೀವ : ರೂ. ೧೫೦೦/-

Published with Financial Assistance from the Central Institute of Indian Languages (Department of Higher Education, Ministry of Human Resource Development, Government of India)- Manasagangotri, Mysuru-570006 sanctioned vide letter No. 53-4(1)2014-15/KAN/LM/GRNT dated 5th December 2016 under the Little Magazine scheme of Grant-in-Aid.

ಲಕ್ಷ್ಮೀ ಮುದ್ರಣಾಲಯ
LAKSHMI MUDRANALAYA
ISO 9001-2000
ಚಾಮರಾಜಪೇಟೆ, ಬೆಂಗಳೂರು-೧೮
ದೂರವಾಣಿ : ೨೬೬೧ ೩೧೨೩, ೨೬೬೧ ೮೬೫೨

## ಸಂಪಾದಕರ ನುಡಿ...

ಇಂದು ಕನ್ನಡವೆಂಬ ಅಸ್ಮಿತೆ ಮರುವ್ಯಾಖ್ಯಾನಗೊಳ್ಳುತ್ತಿದೆ, ಅಥವಾ ಹಾಗೆ ಮರುವ್ಯಾಖ್ಯಾನಗೊಳ್ಳಲು ನಮ್ಮನ್ನು ಒತ್ತಾಯಿಸುತ್ತಿದೆ. ನುಡಿಯೆನ್ನುವುದು ಸಂವಹನದ ಮಾಧ್ಯಮಗಳಲ್ಲಿ ಒಂದೆನ್ನುವುದು ಆಧುನಿಕ ಮಾರುಕಟ್ಟೆಯ ಸಂದರ್ಭವು ತನ್ನ ಅನುಕೂಲಕ್ಕಾಗಿ ಸೃಷ್ಟಿಸಿಕೊಂಡ ಹುಸಿಗಳಲ್ಲಿ ಒಂದಾಗಿದೆ. ಕನ್ನಡವೆಂಬ ಅಭಿವ್ಯಕ್ತಿಗೆ ಆಳದಲ್ಲಿ ಅಸ್ತಿತ್ವದ ಬೇರುಗಳಿವೆ. ಈ ಅಸ್ತಿತ್ವವೇ ಹಲವು ಹದಿನೆಂಟು ಆಯಾಮಗಳಲ್ಲಿ ಬಹುಮುಖಿಯಾಗಿ ನಮ್ಮೆದುರು ತೆರೆದುಕೊಳ್ಳುತ್ತದೆ. ಈ ಹಿನ್ನೆಲೆಯಲ್ಲಿ ನೋಡಿದಾಗ ಭಾಷಿಕ ಅಧ್ಯಯನವೇ ಇರಲಿ, ಸಾಹಿತ್ಯಕ ಅಧ್ಯಯನವೇ ಇರಲಿ ಅಥವಾ ಶಾಸನ-ಹಸ್ತಪ್ರತಿಗಳ ಅಧ್ಯಯನವೇ ಇರಲಿ, ಈ ಅಸ್ತಿತ್ವದ ಬೇರುಗಳ ಶೋಧದ ಕಡೆಗೆ ನಮ್ಮನ್ನು ಕರೆದೊಯ್ಯುತ್ತದೆ. ಇವೆಲ್ಲವುಗಳ ಮೂಲಕ ನಾವು ಕನ್ನಡವೆಂಬ ಅಸ್ತಿತ್ವದ ಚಹರೆಗಳನ್ನು ಕಟ್ಟಿಕೊಳ್ಳಬೇಕಾಗಿದೆ.

ಎಂದಿನಂತೆ ಈ ಸಂಚಿಕೆ ಕೂಡ ಈ ನಿಟ್ಟಿನಲ್ಲಿ ತನ್ನ ಕೊಡುಗೆಯನ್ನು ನೀಡುತ್ತದೆ ಎಂಬುದು ನಮ್ಮ ನಂಬಿಕೆ. ಈ ಎಲ್ಲ ಲೇಖಕರಿಗೆ ಧನ್ಯವಾದಗಳು. ಹಾಗೆಯೇ ಡಿ.ವಿ.ಜಿ. ಅವರ ಲೇಖನವೊಂದನ್ನು ನನ್ನ ವಿನಂತಿಯ ಮೇರೆಗೆ ಅನುವಾದಿಸಿಕೊಟ್ಟ ಡಾ. ಕೆ. ಸುಂದರರಾಜ್ ಅವರಿಗೆ ನನ್ನ ಕೃತಜ್ಞತೆಗಳು. ಸಂಚಿಕೆಯನ್ನು ಹೊರತರುವಲ್ಲಿ ವಿಶ್ವಾಸದಿಂದ ಸಹಕರಿಸಿದ ಬಿ.ಎಂ.ಶ್ರೀ ಪ್ರತಿಷ್ಠಾನದ ಅಧ್ಯಕ್ಷರಾದ ಡಾ. ಆರ್. ಲಕ್ಷ್ಮೀನಾರಾಯಣ ಅವರಿಗೆ, ಕಛೇರಿಯ ಸಿಬ್ಬಂದಿಗೆ ಹಾಗೂ ಮುದ್ರಿಸಿದ ಲಕ್ಷ್ಮೀ ಮುದ್ರಣಾಲಯದವರಿಗೆ ನಾನು ಆಭಾರಿಯಾಗಿದ್ದೇನೆ.

–ಎಚ್.ಎಸ್. ಮುರಳೀಧರ

## ಲೇಖಕರಿಗೆ ಸೂಚನೆಗಳು...

೧. ಸಾಹಿತ್ಯ-ಸಂಸ್ಕೃತಿಗಳಿಗೆ ಸಂಬಂಧಿಸಿದ ಸಂಶೋಧನೆ ವಿಮರ್ಶೆಗಳ ಅಪ್ರಕಟಿತ ಬರಹಗಳನ್ನು 'ಕರ್ನಾಟಕ ಲೋಚನ' ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಸ್ವೀಕರಿಸಲಾಗುವುದು.

೨. ಲೇಖನಗಳು ನುಡಿ ಅಥವಾ ಬರಹ ತಂತ್ರಾಂಶದಲ್ಲಿ ಬೆರಳಚ್ಚು ಮಾಡಿದವಾಗಿರಬೇಕು ಅಥವಾ ಸ್ಫುಟವಾದ ಕೈಬರಹದಲ್ಲಿರಬೇಕು. ಜೆರಾಕ್ಸ್ ಪ್ರತಿಗಳನ್ನು ಸ್ವೀಕರಿಸಲಾಗುವುದಿಲ್ಲ.

೩. ಲೇಖನಗಳು ಒಪ್ಪಿತವಾದ ಮಾದರಿಯಲ್ಲಿ ಸೂಕ್ತ ಉಲ್ಲೇಖಗಳು ಮತ್ತು ಟಿಪ್ಪಣಿಗಳಿಂದ ಕೂಡಿರಬೇಕು.

೪. ಚಿತ್ರಗಳು, ನಕ್ಷೆಗಳು ಮೊದಲಾದುವನ್ನು ಸ್ಕ್ಯಾನ್ ಮಾಡಿದ ತಂತ್ರಾಂಶದಲ್ಲಿ ನೀಡಬೇಕು.

೫. ಲೇಖಕರು ತಮ್ಮ ವಿಳಾಸ, ದೂರವಾಣಿ ಸಂಖ್ಯೆ ಮತ್ತು ವಿ-ಅಂಚೆಗಳನ್ನು ತಪ್ಪದೆ ನೀಡಬೇಕು.

೬. ಅಸ್ವೀಕೃತ ಬರಹಗಳನ್ನು ಹಿಂದಿರುಗಿಸಲಾಗುವುದಿಲ್ಲ ಮತ್ತು ಈ ಬಗೆಗೆ ಪತ್ರವ್ಯವಹಾರಕ್ಕೆ ಅವಕಾಶವಿರುವುದಿಲ್ಲ.

೭. ಲೇಖನಗಳನ್ನು ಪ್ರತಿಷ್ಠಾನದ ಅಂಚೆವಿಳಾಸಕ್ಕೆ ಅಥವಾ bmsrilochana@gmail.com ಈ ವಿ-ಅಂಚೆಗೆ ಕಳುಹಿಸಬಹುದು.

೮. ಪ್ರಕಟವಾದ ಬರಹಗಳಿಗೆ ಪ್ರತಿಷ್ಠಾನವು ಸಾಂಕೇತಿಕ ಗೌರವ ಸಂಭಾವನೆಯನ್ನು ನೀಡುತ್ತದೆ.

೯. ಲೇಖನದಲ್ಲಿನ ಅಭಿಪ್ರಾಯಗಳು ಲೇಖಕರದೇ ಆಗಿದ್ದು ಪ್ರತಿಷ್ಠಾನದ ನಿಲುವುಗಳನ್ನು ಪ್ರತಿನಿಧಿಸುವುದಿಲ್ಲ.

## ಈ ಸಂಚಿಕೆಯಲ್ಲಿ...

# ಸಮತೋಲಿತ ನುಡಿಜೋಡುಗಳ ಒಪ್ಪ ಓರಣ

◆

ಎಂ.ಜಿ. ವಾರಿ

೧.೧. ತಲೆ ಬರಹದ ಸಂಕ್ಷೇಪ ವಿವರಣೆ.

೨.೧. ಒಪ್ಪ–ಓರಣ ಕುರಿತ ವಿವರಣೆ ಮತ್ತು ವಿಂಗಡಣೆ.

೩.೧. ಅಂದಾಜು ಸಮತೋಲಿತ ನುಡಿಗಳು < ೩.೧.೧. / ೩.೧.೨.

೩.೧.೧. ಉಚ್ಚಾರಣೆ ಸಮತೋಲಿತ ನುಡಿಗಳು.
೩.೧.೨. ಅಕ್ಕರ ಸಮತೋಲಿತ ನುಡಿಗಳು.

೪.೧. ಅಂತ್ಯಪ್ರಾಸದ ನುಡಿಜೋಡುಗಳು < ೪.೨. / ೪.೩.

೪.೨. (ಸಹಜ) ಪ್ರಾಸಾಕ್ಕರ ಜೋಡುನುಡಿಗಳು < ೪.೨.೧. / ೪.೨.೨.

೪.೨.೧. ಸಹಜ ಪ್ರಾಸಾಕ್ಕರ ಜೋಡುನುಡಿಗಳು.
೪.೨.೨. ಪರ್ಯಾಯ ರೂಪದ ಜೋಡುನುಡಿಗಳು.

೪.೩. ರೂಪುಗೊಳ್ಳುವ ಜೋಡುನುಡಿಗಳು < ೪.೩.೧. / ೪.೩.೨.

೪.೩.೧. ಪ್ರಾಸದ ಬನಿಯುಳ್ಳ ಜೋಡುನುಡಿಗಳು.
೪.೩.೨. ರೂಡಿಯ ವಾಕ್ಯಾಂಗದ ಜೋಡುನುಡಿಗಳು.

೫.೧. ಕುಟುಂಬ ಸ್ವರೂಪದ ತದ್ರೂಪ ಜೋ.ನುಡಿಗಳು < ೫.೧.೧. / ೫.೧.೨.

೫.೧.೧. ಪೂರ್ತಿ ತದ್ರೂಪ ನುಡಿಜೋಡುಗಳು.
೫.೧.೨. ಆಂಶಿಕ ತದ್ರೂಪ ನುಡಿಜೋಡುಗಳು.

೬.೧. ಸಾದಿತ ಸಮತೋಲಿತ ಜೋಡುನುಡಿಗಳು < ೬.೨. / ೬.೩.

೬.೨. ಅಕ್ಕರ ಸೇರ್ಪಡೆ < ೬.೨.೧. / ೬.೨.೨.

೬.೨.೧. ವ್ಯಂಜನಾಕ್ಕರ ಸೇರ್ಪಡೆ.
೬.೨.೨. ಸ್ವರಾಕ್ಕರ ಸೇರ್ಪಡೆ.

೬.೩. ಅಕ್ಕರ ಬೇರ್ಪಡೆ < ೬.೩.೧. / ೬.೩.೨.

೬.೩.೧. ವ್ಯಂಜನಾಕ್ಕರ ಬೇರ್ಪಡೆ.
೬.೩.೨. ಸ್ವರಾಕ್ಕರ ಬೇರ್ಪಡೆ.
೬.೪. ತೇಲು ಉಚ್ಚಾರಣೆಯ ಸಮತೋಲನ ಮತ್ತು ಇತರ ಜೋಡುನುಡಿಗಳು.
೭.೧. ಬಳಕೆ ಸ್ವರೂಪದಲ್ಲಿಯ ಲಾಲಿತ್ಯ.
೭.೨. ಗುರುತು ಪದ ಪದರಿನ ವಿಚಕ್ಶಣೆ.
೭.೩. ಜೋಡೆತ್ತಿನ ಸಾತಿದಾರಿ ಪದಗಳಾಗಿ : ಕೆಲವು ಜೋಡುನುಡಿಗಳು.
೭.೪. ಕೊನೆಯಲ್ಲಿ ಪರಾಮರಿಸುವ ಕೆಲವು ಮಾತುಗಳು.

೧.೧. ಜೋಡುನುಡಿಗೆ ಸಂಬಂದಿಸಿದಂತೆ ಈ ತನಕ ಮುನ್ನೂರಕ್ಕೂ ಮೇಲ್ಪಟ್ಟು ಜೋಡುನುಡಿಗಳಿರುವುದು, ಚಾಲ್ತಿಯಲ್ಲಿರುವ ಬಾದಾಮಿ ವಲಯದ ಒಳನುಡಿಯನ್ನು ಜಾಲಾಡಿದರೆ ನಿಕರವಾಗಿ ತಿಳಿಯುತ್ತದೆ. ಇಂತು ಜೋಡುನುಡಿಗಳು ಬಾಶೆಯ ಎರಡೂ ರೂಪಗಳಲ್ಲಿ (ಆಡುನುಡಿ ಮತ್ತು ಶಿಸ್ಟನುಡಿ) ಕಂಡುಬರುವುದು. ಆದರೆ ಶಿಸ್ಟ ನುಡಿಯಲ್ಲಿಯ ಜೋಡುನುಡಿಗಳು ಬಹುತೇಕ ಸ್ತಾವರ ರೂಪಿಯಾದವು. ಅದೇ ಆಡುನುಡಿಯ ಜೋಡುನುಡಿಗಳು ಅನುಕೂಲಸ್ತ ನೀರೆಯ ಹಾಗೆ; ಬಿನ್ನ ಬಿನ್ನ ಚಿತ್ತಾರದ, ರಂಗು ರಂಗಿನ ಸೀರೆಯನ್ನುಡುವ ನೀರೆ, ತನ್ನ (ಚಾಲ್ತಿಯಲ್ಲಿ) ತಾಜಾತನವನ್ನು ಉಳಿಸಿಕೊಂಡು, ಸಮಾಜದ ವಿಭಿನ್ನ ಸ್ತರಗಳಲ್ಲೆಲ್ಲಾ ಹರಿದಾಡುತ್ತಲೆ ಇರುವಳು.

ಇದೀಗ ನುಡಿಯ ಚಹರೆ ಕಡೆಗೆ ಬರೋಣ. 'ಜೋಡು' ಎಂದರೆ ನಿರ್ದಿಸ್ಟ ತಿರುಳಿನೊಂದಿಗೆ, ಒಂದು ಕಟ್ಟಿಗೆ ಒಳಪಡುವ ಹಾಗೆ, ಎರಡೆರಡು ಪದಗಳ ಹೊಂದಿಕೆ

ಆಗಿದೆ. ಇವುಗಳನ್ನು ನುಡಿಜೋಡಿಯ ಅಂಗಪದಗಳೆಂದೂ ಅನ್ನಬಹುದು. ಮತ್ತಸ್ಟು ಒಳಹೊಕ್ಕು ನೋಡಿದಾಗ ಇಲ್ಲಿ ಅವುಗಳನ್ನೆ ಒಂದನೇ ಮತ್ತು ಎರಡನೇ ಅಂಗಪದಗಳೆಂದು ಗುರುತಿಸಲು ಸಾದ್ಯವಿದೆ. ಈ ಎರಡೂ ಅಂಗಪದಗಳು ಬಳಕೆಯಲ್ಲಿ ಮಾತ್ರ ತಮ್ಮ ಪ್ರತ್ಯೇಕತೆಯ ಇರುವಿಕೆಯನ್ನು ಹೊಂದಿರಲು ಅವಕಾಶ ಇದೆ. ಇಸ್ಟಾದರೂ ಎಲ್ಲ ಪ್ರಕಾರದ ಜೋಡುನುಡಿಯ ಅಂಗಪದಗಳೊಳಗೆ ಆಂತರಿಕ ಅವ್ಯಕ್ತ ಬೆಸುಗೆಯ ಕಟ್ಟು ಏರ್ಪಾಡಾಗಿರುವಂತೆ ಚಾಲ್ತಿಯಲ್ಲಿರುತ್ತವೆ. ಇದೆ ವಿಶಯವನ್ನು ಇನ್ನೊಂದು ನಿಟ್ಟಿನಿಂದ ಅಂದರೆ ಆಲಂಕಾರಿಕವಾಗಿ ಹೇಳಿದಾಗ ಇನ್ನಸ್ಟು ತಿಳಿವಿನೊಂದಿಗೆ ಅರಿಯಬಹುದಾಗಿದೆ. ‘ಜೋಡು’ ಎಂದೊಡನೆ ಮೀಟುಗೋಲಾಗಿ ಹೊಳೆಯುವ ಎರಡು ಸಂಗತಿಗಳೆಂದರೆ ಒಂದು (ಚಕ್ಕಡಿಗೆ ಹೂಡುವ) ‘ಜೋಡೆತ್ತು’ ಮತ್ತೊಂದು ‘ಜೋಡಗಾಲ್ಮರಿ’. ಈ ಬಗೆಯಲ್ಲಿ ಒಂದು ರೀತಿ ಜೋಡುನುಡಿ ಅಂಗಪದಗಳಲ್ಲಿ ಒಂದು ಸಾಂಗತ್ಯ ಹೊರಹೊಮ್ಮುತ್ತದೆ. ಮಿಗಿಲಾಗಿ ಇವುಗಳಲ್ಲಿ ಸಮತೆ ಮತ್ತು ಕ್ಶಮತೆಯ ಗುಣವನ್ನೆ ಕಾಣುತ್ತೇವೆ.

೨.೧. ಶಕ್ಯವಿದ್ದಸ್ಟು ಸಮತೋಲನ ಕಾಯ್ದುಕೊಳ್ಳುವಿಕೆಯ ಲಕ್ಕಣ, ಇಂತಹ ಜೋಡುನುಡಿಗಳಲ್ಲಿ ಬಹು ಮುಕ್ಯವಾದುದು. ಈ ಚಹರೆ ಮಾತ್ರ ಒಟ್ಟು ಜೋಡುನುಡಿಗಳ ಹರಹಿನಲ್ಲಿ ಹಲವು ರೀತಿ ಸುಳಿದಾಟ-ಹರಿದಾಟ ಇರುವುದನ್ನು ಕಾಣುತ್ತೇವೆ. ಇವು ಮುಕ್ಯವಾಗಿ ಅಯ್ದು ಬಗೆಗಳಾಗಿವೆ. ಕೇವಲ ಸಮತೋಲಿತ ನುಡಿಗಳಿಗೆ ಅನುಸರಿಸಿ ಹೇಳುವ ಮಾತು ಇದಾಗಿದೆ.

೩.೧. ಅಂದಾಜು ಸಮತೋಲನದ ನುಡಿಗಳು.

೪.೧. (ನಿಖರ<) ನಿಕರ ಸಮತೋಲನದ ನುಡಿಗಳು.

೫.೧. ತದ್ರೂಪ ಸಮತೋಲನದ ನುಡಿಗಳು.

೬.೧. ಸಾದಿತ ಸಮತೋಲನದ ನುಡಿಗಳು.

೬.೪. ತೇಲು ಉಚ್ಚರಿತ ಮತ್ತು ಇತರ ಜೋಡುನುಡಿಗಳು.

ಇವುಗಳ ಸುಳಿದಾಟವನ್ನೇ ಇನ್ನಸ್ಟು ಸ್ಪಸ್ಟವಾಗಿ (ರೇಖಾ<) ರೇಕಾ ನುಡಿಚಿತ್ರ-೧ರಲ್ಲಿ (ಕೊನೆಯ ಪುಟ) ತೋರಿಸಿರುವಂತೆ ಮನಗಾಣಿಸಬಹುದು.

**೩.೧. ಅಂದಾಜು ಸಮತೋಲಿತ ನುಡಿಗಳು** : ಇಲ್ಲಿ ‘ಅಂದಾಜು’ ಪದ ಬಳಕೆಯ ಉದ್ದೇಶವೆಂದರೆ ಗೆರೆ ಕೊರೆದು ಅಳತೆ ಮಾಡುವಂತೆ ನಿಕರತೆಯನ್ನು ಇಲ್ಲಿ ಕಾಣಲಾಗದು, ಎಂದೇ ಅರ್ತ. ಈ ಒಳಗುಂಪಿನ ಜೋಡುನುಡಿಗಳನ್ನು ಮತ್ತೆ ಎರಡು ಬಾಗವಾಗಿ ಕಂಡುಕೊಳ್ಳಬೇಕಾಗಿದೆ.

ಉಚ್ಚಾರಣೆಯ ಸಮತೋಲಿತ ನುಡಿಗಳು. ೩.೧.೧.

ಅಂದಾಜು ಸಮತೋಲಿತ ನುಡಿಗಳು

ಸಹಜ ಅಕ್ಕರ ಸಮತೋಲಿತ ನುಡಿಗಳು ೩.೧.೨

೩.೧.೧. ಉಚ್ಚಾರಣೆಯ ಸಮತೋಲಿತ ನುಡಿಗಳು : ಇಲ್ಲಿ ಅಂಗಪದಗಳ ಉಲಿ ಉಚ್ಚಾರದಲ್ಲಿ ಬಳಕೆಯಾಗುವ ಮಾನದಂಡ ಎಂದರೆ ಚಂದೋರಚನೆಯ ಅಳತೆ ಗುರು ('–') ಲಗು ('U')ಗಳೇ ಆಗಿವೆ.

+ ಇದ್ದೆ-ಬುದ್ದಿ : –U/ –U + ದಗದ-ಬಗಸಿ- UUU/UUU

+ ಉಪ್ಪು-ಕಾರ : –U/ –U + ಸಣದು-ದೊಡದು UUU/UUU

+ ಎಳ್ಳು-ನೀರು : –U/ –U + ಇವತ್ತ್*-ನಾಳೆ UUU/ –U

[*ಇಲ್ಲಿ ಇದನ್ನು 'ಶಿತಿಲತ್ವ' ಅತವಾ 'ತೇಲಿಸಿ' ಉಚ್ಚರಿಸುವಿಕೆ ಎನ್ನುತ್ತೇವೆ.]

+ ಕೆಂಪ-ಲಾಲ : –U/ –U + ಗುಡುಗು-ಸಿಡ್ಲು/ಸಿಡುಲು UUU/ –U

+ ಕಡ್ಡಿ-ಗುಡ್ಡ : –U/ –U + ಜಗಳ-ಜೋಟಿ UUU/ –U

+ ಗಂಟು-ಮೂಟಿ : –U/ –U + ಕಾಲಿ-ಪುಕಟ –U/UUU

+ ಗಂದ-ಗಾಳಿ : –U/ –U + ಕೋರ್ಟು-ಕಚೆರಿ* –U/ UUU

[*ಜಗಣ ವಿನ್ಯಾಸ ಪರಿಸಹರಿಸುವಿಕೆ]

+ ಗೋಲಿ-ಗುಂಡ : –U/ –U + ಗುಂಡ-ಗಜಗ –U/ UUU

+ ಕುಲ-ನೆಲಿ : UU/ UU + ದಾನ-ದರಮ –U/ UUU

+ ಕೊಡು-ತೊಗೊ : UU/ UU + ಬಂದು-ಬಳಗ –U/ UUU

+ ಹೊಲ-ಮನಿ : UU/ UU + ಹಬ್ಬ-ಹುಣವಿ –U/ UUU

+ ತಳ-ಬುಡ : UU/ UU + ಸುಳ್ಳು-ತಗಲು –U/ UUU

**೩.೧.೨. ಅಂಗಪದಗಳ ಅಕ್ಕರ (ಸಂಖ್ಯೆ>) ಸಂಕೆಯಲ್ಲಿ ಸರಿಜೋಡಿ ಎನಿಸುವ ನುಡಿಜೋಡುಗಳು.**

+ ಉಟಾ-ಬಸಿ –೨ ಅಕ್ಕರ + ಅಂಜಿಕಿ-ಅಳುಕು –೩ ಅಕ್ಕರ

+ ಕಸ್ಟ-ಸುಕ –೨ ಅಕ್ಕರ + ಅಳ್ಳಿಟ್ಟು-ತಂಬಿಟ್ಟು –೩ ಅಕ್ಕರ

+ ಕಾಳು-ಕಡಿ –೨ ಅಕ್ಕರ + ಜಳಕ-ಜಾಪತ್ರಿ –೩ ಅಕ್ಕರ

+ ಕುರಿ–ಕ್ವಾಣ –೨ ಅಕ್ಕರ + ಜ್ವಾಪಾನ–ಜತನ –೩ ಅಕ್ಕರ

+ ಗಿಡ–ಗಂಟಿ –೨ ಅಕ್ಕರ + ನಾಚಿಗಿ–ಅಬರು –೩ ಅಕ್ಕರ

+ ತಪ್ಪು–ತಡಿ –೨ ಅಕ್ಕರ + ಬದಕ–ಬಾಗೇವ –೩ ಅಕ್ಕರ

+ ದಿಕ್ಕು–ದಸಿ –೨ ಅಕ್ಕರ + ಬದುಕು–ಬಾಳೇವು –೩ ಅಕ್ಕರ

+ ಮಕ್ಕು–ಮರಿ –೨ ಅಕ್ಕರ + ಬೇಕಾದ್ದ*–ಬ್ಯಾಡಾದ್ದ* –೩ ಅಕ್ಕರ

[* ತೇಲಿಸಿ ಉಚ್ಚರಿಸುವಿಕೆ]

**೪.೧. ನಿಕರ ಸಮತೋಲಿತ ಜೋಡುನುಡಿಗಳು :** ಈ ಬಗೆಯ ನಿಕರತೆಯನ್ನು ಅಳೆಯುವಾಗ ಮೊದಲು ಪ್ರಾಸ ಎಂದರೇನು? ಕನ್ನಡದಲ್ಲಿ ಅದರ ಸ್ತಾನ–ಮಾನ ಎಂತಿದೆ? ಈ ಕುರಿತು ತಿಳಿಯುವ ಅಗತ್ಯವಿದೆ. ನಂತರ ಪ್ರಾಸಕ್ಕೂ ಜೋಡು ನುಡಿಗೂ ಇರುವ ಮದುರ, ಬಂದುರದ ಗಂಟಿನ ನಂಟು ಎಂತಿದೆ, ಎಂದು ತಿಳಿಯಲು ಸಾದ್ಯವಾದೀತು, ಎನ್ನಬೇಕು. ನಿಯತ ಗತಿಯ ಹೆಜ್ಜೆ ಗುರುತುಗಳು, ಆ ಹೆಜ್ಜೆ ಗುರುತಾಗಿ ಬರುವ ಸಮಾನ ವ್ಯಂಜನ ಅತವಾ ಬೇರೆ ಬೇರೆ ವ್ಯಂಜನಾಕ್ಕರಗಳು ಹಾಜರಾದರೆ, ಅದನ್ನು ಸ್ತೂಲವಾಗಿ ಪ್ರಾಸ ಎನ್ನಲಡ್ಡಿಯಿಲ್ಲ. ಇದು ವಿಶೇಶವಾಗಿ ಹಾಡುಗಾರಿಕೆಯಲ್ಲಿ ಕಾಣಿಸಿಕೊಳ್ಳುವ ಪ್ರಾಸದ ವಿಶಯ.

ಆದರೆ ಇಲ್ಲಿ ನಮೂದಾಗುವ ಪ್ರಾಸಬದ್ದ ಜೋಡುನುಡಿಯ ಅಂಗಪದಗಳ ಒಳಸುಳಿಯಲ್ಲಿ ಕಾಣಲಾಗುವ ಒನಪು–ಒಯ್ಯಾರದ ಹೆಜ್ಜೆ ನಡಿಗೆಯ ಗೆಜ್ಜೆ ನಿನದದ ಸಂಗತಿ ಮಾತ್ರ ಸೊಗಸನ್ನು ಸೂಸುವಂತಿದೆ. ಈ ರೀತಿ ನಿಯತಗತಿಯ ಹೆಜ್ಜೆ ನಡಿಗೆಯ ಗೆಜ್ಜೆ ನಿನದವನ್ನೆ 'ಪ್ರಾಸ' ಎಂದರೂ ಸರಿ ಹೋದೀತು!

ಉಚಿತವರಿತ ಇಂತ ಪ್ರಾಸ ಕನ್ನಡದ ಚೆಲುವಿನ ಲಾಲಿತ್ಯಕ್ಕೂ ಕಾರಣವಾಗಿದೆ. ಇದು ಕನ್ನಡದ ಮದುರತೆಯನ್ನು ಹೆಚ್ಚಿಸಿದ ವಿಶಿಸ್ಟ ಲಕ್ಕಣವೆಂದೇ ಈ ಹಿಂದೆ ಎಂಟನೇ ಶತಮಾನದಲ್ಲೆ ಶ್ರೀ ವಿಜಯ*[೧] ಕವಿರಾಜಮಾರ್ಗದಲ್ಲಿ ನಮೂದಿಸಿದ್ದು, ಹೊಸತೇನಲ್ಲ. ಇಂತ ಬೆಡಗುಳ್ಳ ಪ್ರಾಸ ಎನ್ನುವುದು ಜೋಡುನುಡಿಗಳಲ್ಲಿ ಅಲ್ಲಲ್ಲಿ ಮಿಂಚುತ್ತ ಒಂದಿಸ್ಟು ಬೆರಗನ್ನೂ ಉಲಿಯ ಹಿತವನ್ನೂ ಚಿಮ್ಮಿಸುತ್ತದೆ. ಈ ರೀತಿ ಜೋಡುನುಡಿಗಳ ಉಡಿಯಲ್ಲಿ ಪ್ರಾಸಗಳ ವಯ್ಯಾರವೇ ವಯ್ಯಾರ! ಅದನ್ನು ತೆರೆದು ತೋರುವ ಕಾಯಕವೇ ಇಲ್ಲಿದೆ. ಇದೀಗ ಅಂತ್ಯ ಪ್ರಾಸದ ಚೆಲ್ಲಾಟವನ್ನು ನೋಡೋಣ.

(೪.೧._ ಅಂತ್ಯಪ್ರಾಸ – ನುಡಿಜೋಡುಗಳು < ಪ್ರಾ.ಜೋ.ನು. ೪.೨ / ರೂ.ವ.ಜೋ.ನು. ೪.೩.

**೪.೨.** (ಸಹಜ) ಪ್ರಾಸಾಕ್ಕರದ ನುಡಿಜೋಡುಗಳು : ೪.೨.೧. ಇಲ್ಲಿ ಇವೆರಡರಲ್ಲಿ ಇರುವ ಸೂಕ್ಷ್ಮ ಅಂತರವೆಂದರೆ ಸಮತೋಲಿತ ಸಹಜ ಜೋಡುನುಡಿಗಳಲ್ಲಿ

ಬಹುತೇಕವಾಗಿ ನಾಮದಾತುಗಳು ಉಚಿತ ರೀತಿಯಲ್ಲಿ ಬೇರೆ ಬೇರೆ ಆದಂತಹ (ಅತ್ಯಂತ ವಿರಳವಾಗಿ ಕ್ರಿಯಾದಾತುಗಳು ಬರಲು ಸಾಧ್ಯವಿದೆ.) ಪದಗಳು ಅಂಗಪದಗಳಾಗಿ ಕೂಡಿಕೊಂಡು ಜೋಡುನುಡಿಯಾಗಿ ರೂಪುದಳೆಯುತ್ತವೆ.

ಆದರೆ ಈಗಾಗಲೆ ರೂಪುದಳೆದ ನುಡಿಜೋಡು ಉಲಿ ಉಚ್ಚಾರಣೆಯಲ್ಲಿ ಅಲ್ಪ-ಸ್ವಲ್ಪ ಬದಲಾದ ರೂಪದೊಂದಿಗೆ ಕಾಣಿಸಿಕೊಳ್ಳುತ್ತದೆ. ಬೇರು ಮಾತ್ರ ಒಂದೇ. ಆದರೆ ಚಿಗುರಿದ ಟಿಸಿಳುಗಳು ಬೇರೆ ಬೇರೆ ಎಂದು ಆಲಂಕಾರಿಕವಾಗಿ ವಿವರಿಸಬಹುದು. (ನೋಡಿ-೪.೨.೨.) ಈ ರೀತಿ ಬದಲಾದ ರೂಪಗಳು ಎರಡು ಇಲ್ಲವೆ ಮೂರ್‍ನಾಲ್ಕು ರೂಪಗಳ ಅವತಾರವನ್ನು ಪಡೆಯಬಹುದಾಗಿದೆ.

(೪.೨.) ಪ್ರಾಸಾಕ್ಕರದ ಸಹಜ ಜೋಡುನುಡಿಗಳು
- ಸಹಜ ಜೋಡುನುಡಿ (ಏಕವಚನ)೪.೨.೧.
- ಪರ್ಯಾಯ ರೂಪದ ಸಹಜ ಜೋಡುನುಡಿಗಳು (ಬಹುವಚನ) ೪.೨.೨.

**೪.೨.೧. ಸಹಜ (ಸಮತೋಲಿತ) ಪ್ರಾಸಾಕ್ಕರದ ಜೋಡುನುಡಿಗಳು ಇಂತಿವೆ.**

+ ಅಂತು-ಇಂತು- 'ತು'
+ ಅಂಕ-ಡೊಂಕ- 'ಕ'
+ ಅಂದ-ಚಂದ- 'ದ'
+ ಅಡ್ಡ-ತಿಡ್ಡ- 'ಡ್ಡ'
+ ಅದು-ಇದು- 'ದು'
+ ಅನು-ತನು- 'ನು'
+ ಅಪ್ಪಿ-ತಪ್ಪಿ- 'ಪ್ಪಿ'
+ ಅರಿ-ಮರಿ- 'ರಿ'
+ ಕೂಲಿ-ನಾಲಿ- 'ಲಿ'
+ ಕಳ್ಳೆ-ಮಳ್ಳೆ- 'ಳ್ಳೆ'
+ ಚಿಣಿ-ಪಣಿ- 'ಣಿ'

– ತಾಳ-ಮೇಳ- 'ಳ'
– ತೊಳಿ-ಬಳಿ- 'ಳಿ'
– ದಂಡ-ಪಿಂಡ- 'ಡ'
– ದೂರ-ಬಾರ- 'ರ'
– ಮಳಿ-ಬೆಳಿ- 'ಳಿ'
– ಸಂದಿ-ಗೊಂದಿ- 'ದಿ'
– ಹಂಡ-ಬಂಡ- 'ಡ'
– ಹಸಿ-ಬಿಸಿ- 'ಸಿ'
– ಹಳ್ಳ-ಕೊಳ್ಳ- 'ಳ್ಳ'
– ಹಾದಿ-ಬೀದಿ- 'ದಿ'

**೪.೨.೨. ಪರ್ಯಾಯ ರೂಪದ ಸಹಜ ನುಡಿಜೋಡುಗಳು**

ಅಷ್ಟು-ಇಷ್ಟು
- ಅsssಟು-ಈಟು, ಆಟು-ಈಟು,
- ಅಟ-ಇಟ, ಅಟು-ಇಟು,

– ಅದಲಿ-ಬದಲಿ>ಅದ್ಲಿ-ಬದ್ಲಿ
– ಅವಳಿ-ಜವಳಿ>ಅವ್ಳಿ-ಜವ್ಳಿ

– ಅಸಲಿ–ನಕಲಿ>ಅಸ್ಲಿ–ನಕ್ಲಿ
– ಅನ್ನೊದು–ಆಡೂದು>ಅನ್ನುದು–ಆಡುದು
– ಉಲಟ–ಪಲಟ>ಉಲ್ಪ–ಪಲ್ಟ>ಉಲ್ಟಾ–ಪಲ್ಟಾ
– ಅಕರಾಳ–ವಿಕರಾಳ>ಅಕ್ರಾಳ–ವಿಕ್ರಾಳ / ಆರ–ಬಾರ>ಆರ್–ಬಾರ್
– ಆಸ–ಪಾಸ>ಆಸ್–ಪಾಸ್
– ಆಸರ–ಬ್ಯಾಸರ>ಆಸರಾ–ಬ್ಯಾಸರಾ / ಆಸರಿಕೆ–ಬೇಸರಿಕೆ>ಆಸರಕಿ–ಬ್ಯಾಸರಿಕಿ>ಆಸರ್ಕಿ–ಬ್ಯಾಸರ್ಕಿ
– ಉಪರಾಟಿ–ತಿಪರಾಟಿ>ಉಪ್ರಾಟಿ–ತಿಪ್ರಾಟಿ
– ಉರಪಾಟಿ–ತಿರಪಾಟಿ>ಉರ್ಪಾಟಿ–ತಿರ್ಪಾಟಿ
– ಉಳಕಲ–ಬಳಕಲ>ಉಳಕ್ಲ–ಬಳಕ್ಲ
– ಎದರ–ಬದರ>ಎದರ್–ಬದರ್>ಎದ್ರ–ಬದ್ರ
– ಏರ–ಪೇರ>ಏರ್–ಪೇರ್
– ಕನಸು–ಮನಸು>ಕನಸ–ಮನಸ>ಕನಸ್–ಮನಸ್
– ಕೀಸರ–ಬೇಸರ>(ಬಾದಾಮಿ ಒಳನುಡಿ) ಕೀಸರ–ಬ್ಯಾಸರ>ಕೀಸರಾ–ಬ್ಯಾಸರಾ
– (ಚಕ್ಕಳಿ*–ಮುಕಳಿ>)ಚಕಳಿ–ಮುಕಳಿ>ಚಕ್ಳಿ–ಮುಕ್ಳಿ [* ತೇಲಿಸಿ ಉಚ್ಚರಿಸುವಿಕೆ]
– ತಿರಿವು–ಮುರಿವು>ತಿರುವು–ಮುರುವು>ತಿರು–ಮುರು
– ತಿರಗ–ಮುರಗ
  - ತಿರ್ಗ–ಮುರ್ಗ>ತಿರ್ಗಾ–ಮುರ್ಗಾ
  - ತಿರಿಗಿ–ಮುರಿಗಿ>ತಿರ್ಗಿ–ಮುರ್ಗಿ
– ನನ್ನವರು–ತನ್ನವರು>ನನ್ನವ್ರು–ತನ್ನವ್ರು
– ಲಂಡರು–ಬಂಡರು>ಲಂಡ್ರು–ಬಂಡ್ರು
– (ಮಡಕೆ–ಕುಡಿಕೆ>)ಮಡಕೆ–ಕುಡಕೆ>ಮಡಿಕಿ–ಕುಡಿಕಿ
– (ಚಿಳ್ಳೆ (ಆದಂತ) ಮಿಳ್ಳೆ>ಚಿಳ್ಳೆ–ಮಿಳ್ಳೆ>)ಸಿಳ್ಳೆ–ಮಿಳ್ಳೆ>ಸಿಳ್ಳಿ–ಮಿಳ್ಳಿ
– ಹಿಂಬರಿಕೆ–ಮುಂಬರಿಕೆ>ಹಿಂಬರಿಕಿ–ಮುಂಬರಿಕಿ>ಹಿಂಬರ್ಕಿ–ಮುಂಬರ್ಕಿ
– ಹಿರಿಯರು–ಕಿರಿಯರು>ಹಿರೇರು–ಕಿರೇರು>(ಜಗಣ ವಿನ್ಯಾಸ ಪರಿಹಾರ) ಹಿರೆರು–ಕಿರೆರು
– ಹೊರಳಿ–ಮರಳಿ>ಹೊರ್ಳಿ–ಮರ್ಳಿ>ಹೊರ್ಳ–ಮರ್ಳ>ಹೊಳ್ಳ–ಮಳ್ಳ
– ಹೇಳಿಕೆ–ಕೇಳಿಕೆ>ಹೇಳಿಕಿ–ಕೇಳಿಕಿ>ಹೇಳ್ಕಿ–ಕೇಳ್ಕಿ

**೪.೩. ರೂಪುಗೊಳ್ಳುವ ಜೋಡುನುಡಿಗಳು :**
ರೂಪುಗೊಳ್ಳುವ ಜೋಡುನುಡಿಗಳನ್ನು ಮತ್ತೆ ಇಬ್ಬಗೆಯಾಗಿ ಗಮನಿಸಬೇಕಾಗುತ್ತದೆ.

ಅಂಗಪದಗಳು ಪ್ರಾಸದ ಬನಿಯೊಂದಿಗೆ ಜೊತೆಗೂಡುವಿಕೆ. ೪.೩.೧.

(೪.೩.) ರೂಪುಗೊಳ್ಳುವ ಜೋಡುನುಡಿಗಳು



ರೂಡಿಯ ವ್ಯಾಕ್ಯಾಂಗ ಅತವಾ ವಾಗ್ರೂಡಿ. (ಅಡಕಗೊಂಡು) ನುಡಿಜೋಡಾಗಿ ಸ್ರುಶ್ಟಿಗೊಳ್ಳುವಿಕೆ. ೪.೩.೨.

ರೂಪುಗೊಳ್ಳುವ ಜೋಡುನುಡಿಗಳೆಂದರೆ ಸಹಜ ಸಮತೋಲಿತ ನುಡಿಗಿಂತಲೂ ಬೇರೆ ಆದವು, ಎಂಬರ್‍ತ ಬರುವುದು ನಿಜ. ಆದರೆ ಇಲ್ಲಿನ ತಿರುಳಿನ ಆಶಯವೇ ಬೇರೆ ಆಗಿದೆ. ತಲುಪುವ ಗುರಿ ಒಂದೇ. ಆದರೆ ಕೇಂದ್ರದತ್ತ ಚಲಿಸುವ ನಿಟ್ಟು ಬೇರೆ ಬೇರೆಯದಾಗಿದೆ. ಅಂದರೆ ಅಂಗಪದಗಳು ಮಾತ್ರ ಹೊಂದಾಣಿಕೆಯೊಂದಿಗೆ ನಿಕರ ಎನಿಸುವ ಪ್ರಾಸಾನ್ವಯದಿಂದ ಜೋಡುನುಡಿಗಳು ರಚನೆಗೊಳ್ಳುತ್ತವೆ.

ಇದರಂತೆ ಇನ್ನೊಂದು ಮಗ್ಗುಲದಿಂದ ರೂಪುಗೊಳ್ಳುವಿಕೆಯನ್ನು ನೋಡಬೇಕು. ನಮ್ಮ ಈ ತೋಂಡಿ ಸಂಪ್ರದಾಯದ ನುಡಿಜೋಡುಗಳಿಗೆ ಒಂದು ಸ್ಪಶ್ಟ ಪಾರಂಪರಿಕ ಇತಿಹಾಸ ಇದ್ದೆ ಇರಬೇಕು. ಅಯ್ತಿಹಾಸಿಕ ದಾಕಲೆಯ ಕೊರತೆ ಕಾರಣದಿಂದ 'ಎಶ್ಟು ಪ್ರಾಚೀನ' ಎಂದು ತಿಳಿಯಲಾಗದು.[೨] ಆದರೂ ಪ್ರಾಚೀನ ಎನ್ನಬಹುದಾದ ರೀತಿ ಒಂದು ಪರಂಪರೆಯಂತು ಇದೆ, ಎಂಬ ಮಾತನ್ನೂ ಒಪ್ಪಲೇಬೇಕಾಗುತ್ತದೆ.

ಹೀಗೆ ಹಿಂದಿನಿಂದಲೂ ಬಂದಿರುವ ಕೆಲವು ಜೋಡುನುಡಿಗಳಿಗೆ ಒಂದು ಜನಪ್ರಿಯವಾಗಿರುವ ಬಾಶಿಕ ಪರಂಪರೆ ಇರುವಂತೆ ತೋರುತ್ತದೆ. ಇಂತ ತೋಂಡಿ ಸಂಪ್ರದಾಯದ ಕನ್ನಡ ಬಾಶೆಗೆ (ಅಂದರೆ ಲಿಕಿತ ಬಾಶೆಗೆ ಒಂದೂವರೆ ಸಾವಿರ ವರುಶಗಳಶ್ಟು ಪ್ರಾಚೀನತೆ ಇದ್ದರೆ,) ಗ್ರಾಂತಿಕ ಬಾಶೆಗಿಂತಲೂ ಹೆಚ್ಚಿನ ಪ್ರಾಚೀನತೆ ಇರುವುದಂತು ಕಂಡಿತ. ಗ್ರಾಂತಿಕ ಬಾಶೆಯ ಜೊತೆ ಜೊತೆಗೆ ತೋಂಡಿ ಸಂಪ್ರದಾಯದ ಜನಪದ ಕನ್ನಡವೂ ನಿಕಟ ಸಂಪರ್‍ಕದ ಸ್ಪರ್‍ಶವನ್ನು ಉಳಿಸಿಕೊಂಡೆ ಬಂದಿದೆ. ಈ ಕಾರಣದಿಂದಲೆ ಇವತ್ತಿಗೂ ಕನ್ನಡ ತನ್ನ ಜೀವಂತಿಕೆಯ ಉಸಿರಾಟದ ಕಳೆ ಚಿಗುರುತ್ತಲೆ ಇದೆ.

ಈ ರೀತಿಯ ಹೊಸಗನ್ನಡದಲ್ಲಿರುವ ಜನಪ್ರಿಯ ಹೇಳಿಕೆಗಳು, ವಾಕ್ಯಗಳು, ವಾಗ್ರೂಡಿಗಳು, ವಾಕ್ಯಾಂಗಗಳು, ಲವಲವಿಕೆಯ ನುಡಿಗುಟ್ಟುಗಳು, – ಇವೇಲ್ಲ ಕ್ರಮೇಣ ಅಡಕಗೊಳ್ಳುತ್ತಾ ಪ್ರಾಸಾನ್ವಿತ ಜೋಡುನುಡಿಗಳ ಸ್ರುಶ್ಟಿಗೂ ಕಾರಣ ಆಗಿರುವುದು, ಅಚ್ಚರಿಯನ್ನು ಮೂಡಿಸುತ್ತದೆ. ಕೆಲವು ಉದಾಹರಣೆ ಮೂಲಕ ವಿಶಯವನ್ನು ಇನ್ನಶ್ಟು ತಿಳಿಗೊಳಿಸಬಹುದು.

೧. "ಅಪ್ಪ-ಅವ್ವಗ, ಹಿರೆರ್‍ಗೆ, ಗುರುಗೊಳ್ಗೆ, ಯಾವಾಗ್ಲೂ ತಗ್ಗಿ-ಬಗ್ಗಿ ನಡ್ಕೊಂಡಿರಬೇಕು, ತಿಳ್ಕೊ ತಮ್ಮಾ!"

೨. "ಅಂವಾ ಹವ್ವಲ್ಲೊ, ಆ ಲಪುಟಗಿರಿ ಮನಸ್ಯಾ, ಅಂವಾ ಜಗಳಾ ಬಗೆಹರಸಾಕ ಬಂದ್ರ, ಹಗ್ಗ ಹರಿಲಿಲ್ಲ-ಕೋಲ ಮುರಿಲಿಲ್ಲ-ಅನ್ನೂವಾಂಗಾಗತ್ತ!"

೩. "ಈ ಚಮಚಾಗಿರಿ ಮಾಡ್ಕೊಂತ ಅಡ್ಡ್ಯಾಡುದನ್ನ ಬಿಡು; ಇನ್ನು ಮಯ್ಯಾಗ ಬಿಸಿ ರಗತ ಅಯ್ತಿ; ನೀಗಿಸಿಕೊಂಡು ಹೋಗು ಉಮೆದನೂ ಅಯ್ತಿ; ಇನ್ನೂ ಕಾಲ ಮಿಂಚಿಲ್ಲ; ದುಡಿ-ದುಕ್ಬಡು ಅಂತ ನಮ್ ಹಿಂದಿನ ಹಿರೆರು ಹೇಳ್ಕೊಂತ ಬಂದಾರಾ; ಹಾಂಗ ಮಾಡು"

೪(ಅ). "....ಅಹಿತರ್ಕಳ್ ಕೆಟ್ಟರ್ ಮೇಣ್ ಸತ್ತರ್+ಅವಿಚಾರಮ್"[೩]

(೭ನೇ ಶತಮಾನದ ಬಾದಾಮಿ ಕಪ್ಪೆ ಅರಬಟ್ಟ ಶಾಸನದ ಕೊನೆ ಸಾಲಿನ ವಾಕ್ಯ.)

೪(ಆ). "ಹಾಂಗ, ಕಂಡ ಕಂಡವ್ರ ಮ್ಯಾಲೆ, ದಾದಾಗಿರಿ ತೋರ್ಸಾಕ ಹತ್ತೀದಿ ಅಂದ ಮ್ಯಾಲೆ ನಾಳೆ ಏನಾರಾ ಸತ್ರ-ಕೆಟ್ರ (ಯಾವ್ನೂ) ಮೂಸಿ ನೋಡಾಕ ಸಯ್ತ ಬರಾಂಗಿಲ್ಲ!"

(ಇವತ್ತಿನ ಬಾದಾಮಿ ಒಳನುಡಿಯ, ಎಚ್ಚರಿಕೆ ಸ್ವರೂಪದ ಒಂದು ಸಲಹೆ.)

ಇಲ್ಲಿ ಬಳಕೆ ಆಗುವ ವಾಗ್ರೂಢಿಯಾಗಿ ಕಾಣಿಸುವ ೧. ಕೆಟ್ಟರ್ ಮೇಣ್ ಸತ್ತರ್ ಮತ್ತು ೨. ಇವತ್ತಿನ ಜನಪ್ರಿಯ ಜೋಡುನುಡಿ ಆದ 'ಸತ್ರ-ಕೆಟ್ರ' ಎನ್ನುವ ಇವೆರಡು ಮೇಲ್ನೋಟಕ್ಕೆ ಸಮಾನವಾಗಿವೆ, ಎನಿಸುವುದು ನಿಜ. ಆದರೆ ಒಳರಚನೆ ದ್ರುಸ್ಟಿಯಿಂದ ನೋಡಿದಾಗ ಇವೆರಡರ ಬೆಳವಣಿಗೆ ಹಂತದಲಿ ಸ್ವಲ್ಪ ಬೇರೆ ಬೇರೆ ಮಜಲುಗಳಾಗಿರುವುದು, ಕಂಡು ಬರುತ್ತದೆ.

೪(ಅ). ತಿರುಳು : "ಶತ್ರುಗಳು (ಕೆಣಕುವ ಮೂಲಕ) ತಮಗೆ ತಾವೆ ಸಾವನ್ನು ತಂದುಕೊಳ್ಳುತ್ತಾರೆ; ಇಲ್ಲವೆ ಪ್ರಾಣಾಂತಿಕ ಕೆಡುಕನ್ನು ತಂದುಕೊಳ್ಳುತ್ತಾರೆ."

ಪದಗಳ ಒಳರಚನೆ : (ಕೆಡು) ಕೆಟ್ಟ (ಬೂತನ್ಯೂನರೂಪ)+
ಅರ್>ಕೆಟ್ಟರ್
(ಸಾಯು) ಸತ್ತ (ಬೂ.ನ್ಯೂ.ರೂಪ)+
ಅರ್>ಸತ್ತರ್  ಬೂತ ಅರ್ತದ ಕ್ರಿಯಾಪದಗಳು.

೪(ಆ). ತಿರುಳು : ಸಾವು (ಇಲ್ಲವೆ) ರೋಗ-ರುಜಿನ ಇತ್ಯಾದಿಗಳಿಂದ ಬಾದೆ ಅಂದರೆ ದುರವಸ್ತೆಗೆ ಒಳಗಾದರೆ!

ಒಳರಚನೆ : (ಸಾಯು) ಸತ್ತ (ಬೂತ ನ್ಯೂನ ರೂಪ)+ಅರೆ(ಸಂಬವನೀಯ ಕ್ರಿಯಾರ್ತದ ಪ್ರತ್ಯಯ)>ಸತ್ತರೆ(=ಸಾವು ಸಂಬವಿಸಿದರೆ)-ಅಪೂರ್ಣ ಕ್ರಿಯಾಪದ
– (ಕೆಡು) ಕೆಟ್ಟ (ಬೂ.ನ್ಯೂ.ರೂ.)+ಅರೆ(ಸಂ.ಕ್ರಿ.ಪ್ರ)>ಕೆಟ್ಟರೆ (=ಯಾವುದಾದರು ರೀತಿ ಕೆಡುಕು-ಸಂಬವಿಸಿದರೆ)-ಅಪೂರ್ಣ ಕ್ರಿಯಾಪದ
ಜೋಡುನುಡಿಯಾಗಿ ರಚನೆ – ಸತ್ರ-ಕೆಟ್ರ<ಸತ್ತರ-ಕೆಟ್ಟರ<ಸತ್ತರೆ-ಕೆಟ್ಟರೆ[೪]

ಇಲ್ಲಿ ನಾವು ಗಮನಿಸಬೇಕಾದ ಸಂಗತಿ ಎಂದರೆ ಪೂರ್ಣ ಇಲ್ಲವೆ ಅಪೂರ್ಣ ಕ್ರಿಯಾಪದವೇ ಆಗಿರಲಿ, ಅದು ಮುಕ್ಯವಲ್ಲ; ಜೊತೆಗೆ ಅಂಗಪದಗಳಲ್ಲಿ ಯಾವುದು ಮೊದಲು, ಯಾವುದು ನಂತರ ಎನ್ನುವುದೂ ಪ್ರದಾನವಲ್ಲ. ಇದು ಒಂದು ಜನಜನಿತ

ವಾಗ್ರೂಡಿ; ಅವತ್ತಿನಿಂದ (ಅಂದರೆ ೭ನೇ ಶತಮಾನದಿಂದ) ಇವತ್ತಿಗೂ ಬಳಕೆಯಾಗುತ್ತ ಬಂದಿರುವುದು, ಜೊತೆಗೆ ಇಸ್ಟು ವರುಶಗಳ ತೋಂಡಿ ಸಂಪ್ರದಾಯದ ಬಾಶೆಯಲ್ಲಿ ಇವತ್ತಿಗೂ (ಉಳಿದುಕೊಂಡು>) ಉಳಕೊಂಡು ಬಂದಿರುವುದೆ ಬೆರಗಿಗೆ ಕಾರಣ!

**೪.೩.೧. ಅಂಗಪದಗಳು ಪ್ರಾಸದ ಬನಿಯೊಂದಿಗೆ ಜೊತೆಗೂಡುವಿಕೆ:**

ಜೋಡುನುಡಿಗಳ ಸೊಬಗು, ವಿಲಾಸ ಕಾಣಿಸಿಕೊಳ್ಳುವುದು, ಅವುಗಳ ಅಂಗಪದಗಳ ಹೊಂದಾಣಿಕೆಯ ರಚನೆಯಲ್ಲಿ ಎನ್ನಬೇಕು. ಇದನ್ನೆ ಜೋಡುನುಡಿಯು ರೂಪುಗೊಳ್ಳುವಾಗಿನ ಹಂತದಲ್ಲಿ ಕಾಣುತ್ತೇವೆ.

- ಅಂಟೆ-ಪಂಟ>ಅಂಟೆ-ಪಂಟೆ – 'ಟೆ'
- ಅಡಿ-ಬಡ್ಡಿ>ಅಡ್ಡಿ-ಬಡ್ಡಿ – 'ಡ್ಡಿ'
- ಅನ್ನೆ-ಪುಣ್ಣೆ>ಅಣ್ಣೆ-ಪುಣ್ಣೆ – 'ಣ್ಣೆ'
- ಅರಿವು-ಮರೆವು>ಅರಿವು-ಮರಿವು<ಅರುವು-ಮರುವು<ಅರು-ಮರು- 'ರು'
- ಕಠೋರ-ನಿಷ್ಠುರ>ಕಟ್-ನಿಟ್ – 'ಟ್'
- ಕೆಮ್ಮು-ದಮ್ಮು>ಕೆಮ್ಮು-ದಮ್ಮು – 'ಮ್ಮು'
- ಕಯ್ಯಿ-ಬಾಯಿ>ಕಯ್-ಬಾಯ್ – 'ಯ್'
- ಕಾರ್ಯ-ನ್ಯಾರೆ>ಕಾರೆ-ನ್ಯಾರೆ – 'ರೆ'
- ಹಗಲು-ಮುಗಿಲು>ಹಗಲ-ಮುಗಲ – 'ಲ'

ಈ ತನಕ ಅಂತ್ಯ ಪ್ರಾಸಕ್ಕೆ ಕೊಡುವ ಉದಾಹರಣೆ ನೋಡಿದ್ದಾಯಿತು. ಈಗ ಆದಿಪ್ರಾಸಕ್ಕೆ ಒಂದೆರಡು

ಉದಾ – ಜಳ್ಳು-ಚಟ್ಟು>ಜೊಳ್ಳು-ಜೊಟ್ಟು – 'ಜೊ'

– ಕೊಡುವುದು, ತೆಗೆದುಕೊಳ್ಳುವುದು>ಕೊಡು-ತಗೊ>ಕೊಡು-ತೊಗೊ[೬] 'ಒ' ಸ್ವರಮಾತ್ರ

ಪುಸ್ತಕ : ಅರ್ಧವಾರ್ಶಿಕ ಪತ್ರಿಕೆ, ಕರ್ನಾಟಕ ಲೋಚನ, ಜುಲಯ್-ಡಿಸೆಂ. ೨೦೧೪.

**೪.೩.೨.** ಪರಂಪರೆಯಿಂದ ರೂಪುದಳೆದು ಬಂದ ಜೋಡುನುಡಿಗಳು : (ಇಲ್ಲಿ ರೂಡಿಯ ವಾಕ್ಯ ಇಲ್ಲವೆ ವಾಕ್ಯಾಂಗ, ಜೊತೆಗೆ ವಾಗ್ರೂಡಿ) ಇದ್ದಿರುವ (ಇರಬಹುದಾದ) ಬಿದ್ದಿರುವ, (ಅಳಿದರೂ ಒಂದಿಸ್ಟು ನಾಶವಾಗದೆ ಉಳಿದಿರುವ) ಇದ್ದ-ಬಿದ್ದ
– 'ದ್ದ'
– ಇರು>ಇದ್ದ (ಬೂತ ನ್ಯೂನ ರೂಪ)+ಉದು>ಇದ್ದುದು, ಇಲ್ಲ+ದ>ಇಲ್ಲದ, (ಬೂ.ನ್ಯೂ.ರೂ.)
– ಇಲ್ಲದ+ಉದು>ಇಲ್ಲದುದು-ಇಲ್ಲದ್ದು
ಇದ್ದುದು-ಇಲ್ಲದ್ದು / ಇದ್ದದ್ದು-ಇಲ್ಲದ್ದು- 'ದ್ದು' –UU/––U ––U/––U
– ಇರು<ಇದ್ದ+ಅವರು>ಇದ್ದವರು-ಇದ್ದವ್ರು.
ಇಲ್ಲ<ಇಲ್ಲದ+ಅವರು>ಇಲ್ಲದವರು-ಇಲ್ಲದವ್ರು.
ಇದ್ದವ್ರು-ಇಲ್ಲದವ್ರು / ಇದ್ದವ್ರು-ಇಲ್ದವ್ರು- 'ವ್ರು' ––U/–U–U ––U/––U

– 'ಅಳ್ಳಿ'ಯ ಹಾಗೆ (ಪೊಳ್ಳ) 'ಪಳ್ಳ' ಆಗಿ ಇರುವುದು ಅಳ್ಳಿ–ಪೊಳ್ಳು>ಅಳ್ಳಿ–ಪಳ್ಳ>ಅಳ್–ಪಳ್ – 'ಳ್', –/–
ಆಲಂಕಾರಿಕ ಬಳಕೆಯ ವಾಕ್ಯ.
– 'ಆಡೋಣ ಬಾ' ಆಮೇಲೆ ತೆರೆಯ ಮರೆಯಲ್ಲಿ 'ಕೆಡಿಸೋಣ ಬಾ' ಈ ವಾಕ್ಯಾಂಗಗಳೆ ನುಡಿಜೋಡಿಗೆ ಕಾರಣ.
ಆಡೋಣ ಬಾ– ಕೆಡಿಸೋಣ ಬಾ/ಆಡುಂಬಾ–ಕೆಡಿಸುಂಬಾ– 'ಬಾ' ––––/UU––
– 'ಎದ್ದಿದ್ದೇನೆಯೊ, ಬಿದ್ದಿದೇನೆಯೊ'– ಎಂಬ (ಖಬರ>) ಕಬರು ಇಲ್ಲದೆ! ಈ ಪುಟ್ಟ ವಾಕ್ಯಗಳೆ ಅಡಕಗೊಂಡು ನುಡಿಜೋಡಾಗುತ್ತದೆ. ಎದ್ದಿದೇನೆಂಯೊ–ಬಿದ್ದಿದೇನೆಯೊ>ಎದ್ದೆನೊ–ಬಿದ್ದೆನೊ>ಎದ್ದ್ನೊ–ಬಿದ್ದ್ನೊ>ಎದ್ದೂ–ಬಿದೂ>ಎದ್ದು–ಬಿದ್ದು –U/–U 'ದ್ದು'
– ಚಣಾರ್ದದಲ್ಲಿ (ಖಂಡ<) ಕಂಡವನ್ನು ತುಂಡು ಮಾಡುವಿಕೆ–ಈ ವಾಕ್ಯಾಂಗವೇ ಅಡಕಗೊಂಡು ನುಡಿಜೋಡಾಗಿದೆ.
ಕಂಡವನ್ನು ತುಂಡು ಮಾಡು<ಕಂಡ–ತುಂಡ : ಮಾಡು – 'ಡ' –U/–U ಈ ನುಡಿ ಜೋಡುನುಡಿ ನಾಮವಿಶೇಶಣವಾಗಿ ಬಳಕೆ ಆಗುತ್ತದೆ.
– 'ಕಡ್ಡಿ ಇದ್ದದ್ದನ್ನ ಗುಡ್ಡಾ ಮಾಡಿ ಹೇಳಾಂವಾ ಇಂವಾ!' – ಈ ಸಹಜ ವಾಕ್ಯವೇ ಅಡಕಗೊಂಡಿವೆ.
ಕಡ್ಡಿ, ಗುಡ್ಡಾ ಮಾಡು / ಕಡ್ಡಿ–ಗುಡ್ಡ : ಮಾಡು– (ಉತ್ಪ್ರೇಕ್ಶೆ ಅಲಂಕಾರವಾಗಿ ಬಳಕೆ) –U/–U 'ಡ್ಡ'
– ಕಾಲು ಮೇಲೆ ಆಗುವಿಕೆ, ಆ ಮೂಲಕ ಸಾವನ್ನು ಹೊಂದುವ ಜೀವಿಗಳೆಂದರೆ ಪ್ರಾಣಿ, ಪಶು, ಪಕ್ಶಿ, ಕ್ರಿಮಿ, ಕೀಟಗಳಾಗಿವೆ. ಸಾಕು ಪ್ರಾಣಿ, ಪಶು, ಪಕ್ಶಿಗಳು ಸಹಜ ಸಾವಲ್ಲದ ಸಾವನ್ನು ಹೊಂದಿದಾಗ, ದೇಹದ ಬಾರವನ್ನು ತಡೆಯದೆ, ಕಾಲು ಮೇಲಾಗಿ ಸಾಯುವುದು ಸಹಜ.

ಕಾಲು ಮೇಲಾಗುವುದು / ಕಾಲು–ಮೇಲು, ಈ ಅವದಿಯಲ್ಲಿ ಜೋಡುನುಡಿಯು ಮರಾಟಿಗೆ ಪಯಣಿಸಿದೆ, ಅಷ್ಟೆ ಅಲ್ಲಿಯ ದ್ವನಿ ವ್ಯವಸ್ತೆಗೆ ಅನುಸಾರ ಮಹಾಪ್ರಾಣದೊಂದಿಗೆ 'ಫಾಲ್–ಮೇಲ್' ಎಂದಾಗುತ್ತದೆ. ಅದೇ ಉಚ್ಚಾರಣೆಯ ರೂಪಕ (ಆ ಕಾಲದಲ್ಲಿ ರಾಜಕೀಯವಾಗಿ ಮರಾಟರು ಪ್ರಬಲರಾಗಿದ್ದರು. ಆಗ ಮರಾಟಿಗರ ಸಂಸ್ಕೃತಿ ಮತ್ತು ಬಾಶೆಯ[೫] ಪ್ರಬಾವ ಕನ್ನಡಿಗರ ಮೇಲೂ ಆಗುತ್ತಿತ್ತು.) ಮತ್ತೆ ತವರಿನೆಡೆಗೆ ಯಾನ ಮಾಡಿದೆ. ಆಗ ಅಲ್ಪಪ್ರಾಣವಾಗಿದೆ. ಜೊತೆಗೆ 'ಲ' ಕಾರ[೬]'ಳ'ವಾಗಿಯೂ ಪರಿವರ್ತನೆಗೊಂಡಿದೆ. 'ಲಂಕಾ ನಗರದಲಿ ಗಾಳು–ಮೇಳಾಯ್ತು' ಎಂದು ತೊರವೆ ರಾಮಾಯಣದಲ್ಲಿ ಸ್ಪಶ್ಟವಾಗಿ ನಮೂದಾಗಿದೆ.

– ಅನ್ಯರನ್ನು ಯಾವ ಕಾರಣವೂ ಇರದೆ (ಆಡಿಕೊಳ್ಳು) ನಿಂದಿಸುವುದು. ಹಾಗೆಯೇ ತೆರೆಯ ಮರೆಯಲ್ಲಿ ಓರ್ವ ವ್ಯಕ್ತಿ ಕುರಿತು ಇಲ್ಲದ–ಸಲ್ಲದ ಮಕಾರನ್ನು ಹಬ್ಬಿಸಿ (ಆಡುವುದು) ಅವಮಾನಿಸುವುದು; ಇದು ನಮ್ಮ ಸಮಾಜದಲ್ಲಿ ಬೆಳೆದು

ಬಂದ ಕೆಟ್ಟ ಸಂಪ್ರದಾಯ, ಎನ್ನುವಂತೆ ಆಗಿದೆ. ಈ ಚಟುವಟಿಕೆಯನ್ನವಲಂಬಿಸಿ ಜೋಡುನುಡಿಯೊಂದು ರೂಪು ಪಡೆದಿದೆ.

ಅನ್ನುವುದು–ಆಡುವುದು<ಅನ್ನೂದು–ಆಡೂದು<ಅನ್ನುದು–ಆಡುದು. –UU/–UU 'ದು'

– ಮಿಂಚಿ ಹೋದ ಅವಗಡಕ್ಕಾಗಿ ಇಲ್ಲವೆ ತನ್ನ ತಪ್ಪಿನಿಂದಾಗಿ ಉಂಟಾದ (ಘಟನೆ>)ಗಟನೆಗೆ ಬಾಯಿ ಬಾಯಿ ('ಅಯ್ಯೋ!', 'ಯೆಪ್ಪೊ!', 'ಅಯ್ಯಪ್ಪೊ!', 'ಅಯ್ಯಯ್ಯಪ್ಪೊ!'– ಎಂದು) ಬಡಿದುಕೊಳ್ಳುವುದಾಗಲಿ ತನ್ನನ್ನ ತಾನು ನಿಂದಿಸಿಕೊಳ್ತಾ, ಮರುಗುವುದಾಗಲಿ, ಅದರಿಂದ ಪ್ರಯೋಜನವಾಗದು. ನಮ್ಮ ಗಾದೆಯೇ ಇದನ್ನ ಬೊಟ್ಟು ಮಾಡಿ ತೋರಿಸಿದೆ. 'ಮಿಂಚಿ ಹೋದ ಮಾತಿಗೆ ಚಿಂತಿಸಿ ಪಲವಿಲ್ಲ.' ಇದಕ್ಕೆ ಸಂಬಂದಿಸಿ ಈ ನುಡಿ ಮಿಂಚು ಕಾಣಿಸಿದೆ. 'ಅಯ್ಯ ಅಂದ್ರು ಇಲ್ಲ, ಅಪ್ಪ ಅಂದ್ರು ಇಲ್ಲ>ಅಯ್ಯಂದ್ರು ಇಲ್ಲ–ಅಪ್ಪಂದ್ರು ಇಲ್ಲ. ––U/––U

– ಗ್ರಾಮೀಣ ವಲಯದಲ್ಲಿ ಕಚ್ಚಾಟ ಅತವಾ ಜಗಳ ಎರಡು ರೀತಿ ಇರುತ್ತಿತ್ತು. ಒಂದು ಕೇವಲ ಮಾತಿನ ಹಂತದಲ್ಲಿ ಅಷ್ಟೆ. ಇದನ್ನ 'ಬಾಯಿಗೆ ಬಾಯಿ ಹತ್ತು' (ಬಾಯ್–ಬಾಯ್ ಹತ್ತು) ಎನ್ನಲಾಗುವುದು. ಇನ್ನೊಂದು ದಯ್ಹಿಕವಾಗಿ ಹಲ್ಲೆ ಮಾಡುವುದು. ಇದನ್ನೆ ನಮ್ಮವರು ಕಯ್ ಮುಟ್ಟ ಮಯ್ ಮುಟ್ಟ ಬರುವುದು ಎನ್ನಲಾಗಿದೆ. ಇದನ್ನೆ ಈ ರೀತಿಯೂ ವರ್ಣಿಸಲಾಗಿದೆ. ಕಯ್‌ಮುಟ್ಟ–ಬಾಯ್‌ಮುಟ್ಟ : –/– 'ಟ್ಟ'

ತೆಕ್ಕೆ ಬಿದ್ದು ಎಲ್ಲಾ ಅಂಗಗಳ ಮೇಲೆ ದಾಳಿ ಮಾಡುವಂತೆ ಮುಕುರುವುದು; ಈ ವಾಕ್ಯವೆ ಅಡಕಗೊಂಡಿದೆ.

– ತೆಕ್ಕೆ–ಮುಕುರು<ತೆಕ್ಕೆ–ಮುಕ್ರು<ತೆಕ್ಕೆ–ಮುಕ್ಕು / ತೆಕ್ಕಿ–ಮುಕ್ಕಿ : –U/–U 'ಕ್ಕಿ'

– 'ಮುಕಳಿ'ಯ ತೊಗಲು ಪಸಂದಾಗಿ ಒತ್ತಿ ಚಪ್ಪಟೆ (ಚಕ್ಕಳಿ) ಆಗುವ ಹಾಗೆ ಕುಳ್ಳಿರುವ ಒಂದು ಸರಳ ಬಂಗಿ,

ಮುಕಳಿ ಚಕ್ಕ'ಳಿ–ಮುಕಳಿ>ಚಕಳಿ–ಮುಕಳಿ>ಚಕ್ಳಿ–ಮುಕ್ಳಿ*–U/–U [* ತೇಲಿಸಿ ಉಚ್ಚರಿಸುವಿಕೆ]–

– (ಮುಷ್ಠಿ<) 'ಮುಟ್ಟಿ' ಕಾಳಗದದಲ್ಲಿ ಗಟ್ಟಿ ಆದವನು ಗಟ್ಟಿ–ಮುಟ್ಟಿ>ಗಟ್ಟ–ಮುಟ್ಟ : –U/–U 'ಟ್ಟ'

– ಹಗಲು–ರಾತ್ರಿ ಎನ್ನದೆ ಬ್ಯಾನಿ, ಬ್ಯಾಸರಿಕೆ ಪರಿಯ ಅರಿವಿಲ್ಲದೆ, ದುಡಿದುಡಿದು, ಅದರಿಂದ ಶಕ್ತಿಗುಂದಿ 'ಸಣ್ಣಾ'ಗುವುದು. ಈ ರೀತಿ ಮಯ್ ಬಗ್ಗಿಸಿ ಸದಾ ದುಡಿಯುತ್ತ ಸಣ್ಣಾಗಿ, ಒಂದು ದಿನ ತನಗರಿವಿಲ್ಲದ ಬಗೆಯಲ್ಲಿ, ಮಣ್ಣಿನಲ್ಲಿ 'ಮಣ್ಣಾ'ಗಿ ಹೋಗುವುದು. ಜೀವಿ ಒಬ್ಬನನ್ನು ಮನುಶ್ಯನಾಗಿ ಕಾಣದಿರುವ 'ಜೀತ ಪದ್ದತಿ' ಇತ್ತೀಚಿನವರೆಗೂ

ಜೀವಂತವಾಗಿತ್ತು. ಇದೀಗ ಸಂಪೂರ್ಣ ಇಲ್ಲವೆ ಇಲ್ಲ, ಎನ್ನುವ ಹಾಗಿಲ್ಲ.

– ಸಣ್ಣ–ಮಣ್ಣ : (ಆಗು) –U/–U 'ಣ್ಣ'

– ಜಗಳಾ ಹಚ್ಚೂದು, ಚಾಡಿ ಚುಚ್ಚೂದ್ರಾಗ ಆ (ತಗಲಗಾರ್ತಿ>) ತಗಲಗಾತಿ ಹಡಸಿ, ಬಲೆ ಬೆರಿಕಿ ಅದಾಳ! [ಹಚ್ಚೂದು–ಚುಚ್ಚೂದು]

ಹಚ್ಚುದು–ಚುಚ್ಚುದು : –UU/–UU 'ದು'

– ಹೃದಯದ ಅಳಲು ಆಸ್ಫೋಟನಗೊಂಡಾಗ ಅದು ಹೊರಹೊಮ್ಮುವುದು ಎರಡು ಬಗೆಯಲ್ಲಿ ಎನ್ನಬೇಕು. ಒಂದು ಆಂಗಿಕ ಚಲನವಲನದ ಮೂಲಕ ಗೊತ್ತು ಪಡಿಸುವುದು; ಇನ್ನೊಂದು ಆಂಗಿಕ ಚಟುವಟಿಕೆಯೊಂದಿಗೆ ಪೂರಕ ಎನಿಸುವ ರೀತಿ, ದನಿ ಹೊರಡಿಸುವ ಮೂಲಕ ಅಳುವುದು. ಜೊತೆಗೆ ತನ್ನ ಗೋಳನ್ನು ಎದುರಿಗಿರುವವರಲ್ಲಿ ಹಂಚಿಕೊಳ್ಳುವುದು, ಅಂದರೆ ತೋಡಿಕೊಳ್ಳುವುದು. ಇದನ್ನೆ ಈ ಎರಡು ಅಂಗಪದಗಳು ಬೇರೆ ಬೇರೆಯಾಗಿ ಬಿಂಬಿಸುತ್ತವೆ.

ಹೊಯ್ದು+ಕೊಳ್ಳು>ಹೊಯ್ದುಕೊಳ್ಳು>ಹೊಯ್ಕೊಳ್ಳು (=ಅಳುತ್ತ ಬಾಯಿ ಬಡಿದುಕೊಳ್ಳು) ಬಡಿದುಕೊಳ್ಳು<ಬಡಕೊಳ್ಳು–ಅಂಗಾಬಿನಯ.

ಅಳುವುದು>ಅಳೂದು>ಅಳುದು, ಕರೆಯುವುದು>ಕರೂದು>ಕರುದು–ಧ್ವನಿ **ಹೊಮ್ಮುವಿಕೆ,**

–ಹೊಯ್ಕೊ–ಬಡಕೊ>ಹೊಯ್ಕೊ–ಬಡ್ಕೊ : ಹೋಕೊ–ಬಡ್ಕೊ : –U/–U 'ಕೊ'

– ಅಳೂದು–ಕರೂದು>(ಸಮರೂಪಗೊಳ್ಳುವಿಕೆ) ಅಳುದು–ಕರುದು : UUU/ UUU 'ದು'

ಈ ಭಾಗದಲ್ಲಿ ನಮೂದಾಗಬೇಕಾದ ಬೆಳವಣಿಗೆಯ ಹಂತ ಹಂತವಾದ ವಿವರಗಳನ್ನು ಕೊನೆಗೆ ಕೊಡಲಾಗುವ 'ನುಡಿಚಿತ್ರ–೨'ರಲ್ಲಿ ಗಮನಿಸಿ.

**೫.೧. ಕುಟುಂಬ ಸ್ವರೂಪದ ತದ್ರೂಪ ಜೋಡುನುಡಿಗಳು** : ಇದರ ಸಾಮಾನ್ಯ ಲಕ್ಷಣ ಈ ರೀತಿ ಇದೆ.

೧. ಮಾಮೂಲಿ ಜೋಡಿನುಡಿಗಳಂತೆ ಈ ಬಳಗದ ನುಡಿಗಳಲ್ಲೂ ಅಂಗಪದಗಳೆರಡು ಮತ್ತೆ ಅಂತ್ಯಾಕ್ಷರ ಪ್ರಾಸ ಇರುತ್ತದೆ.

೨. ಇಲ್ಲಿ ಬಳಕೆ ಆದ 'ಕುಟುಂಬ ಸ್ವರೂಪದ' ಮತ್ತು 'ತದ್ರೂಪ' ಪದಗಳ ಕುರಿತು ಒಂದಿಷ್ಟು ವಿವರಣೆಯ ಅಗತ್ಯವಿದೆ.

೩. ಇಲ್ಲಿ ಒಟ್ಟು ಹನ್ನೆರಡು ಜೋಡುನುಡಿಗಳನ್ನು ನಮೂದಿಸಲಾಗಿದೆ. ಈ

ಹನ್ನೆರಡರಲ್ಲಿ ಒಂದನ್ನು ಹೊರತು ಪಡಿಸಿದರೆ (ಉದಾ : ಮಾತು–ಕತೆ) ಉಳಿದ ಹನ್ನೊಂದು ನುಡಿಜೋಡುಗಳನ್ನು ತಾತ್ಕಾಲಿಕವಾಗಿ ಒಂದು ವರ್ಗಕ್ಕೆ ಸೇರಿಸಿದರೆ, ಇನ್ನೊಂದನ್ನು (ಪದ ಸ್ವರೂಪದ ದ್ರುಸ್ಟಿಯಿಂದ) ಒಂಟಿಯಾಗಿ ನೋಡಬೇಕಸ್ಟೆ. ಈ ಹನ್ನೊಂದು ನುಡಿಜೋಡುಗಳಲ್ಲಿ ಅಂಗಪದಗಳ ಬೇರಿನ ಹಂತದಲ್ಲಿ ಒಂದೇ ಸ್ವರೂಪದ ಕ್ರಿಯಾದಾತುಗಳಿರುವುದು ಕಂಡು ಬರುತ್ತದೆ. ಆದರೆ ಒಂಟಿಯಾಗಿ ಉಳಿದ ಜೋಡುನುಡಿಯಲ್ಲಿ ಮಾತ್ರ ಎರಡೂ ನಾಮದಾತುಗಳಿವೆ.

ಈ ಹನ್ನೊಂದು ಜೋಡುನುಡಿಗಳಲ್ಲಿರುವ ಬೇರು ಮಾತ್ರ (ಅಂಗಪದವಾಗಿ ಕಾಣಿಸಿಕೊಳ್ಳುವ ಕ್ರಿಯಾದಾತು) ಒಂದೇ. ಆ ಬೇರೊಂದರಿಂದ ಹಲವು ಟಿಸಿಲುಗಳು ಚಿಗುರೊಡೆಯುತ್ತವೆ. ಹಾಗೆಯೇ ಒಂಟಿಯಾಗಿ ಕಾಣಿಸುವ 'ನಾಮಪದ' ಎಂದು ಕರೆಯಲಾಗುವ 'ಮಾತು–ಕತೆ' ಜೋಡುನುಡಿಯೂ ಕ್ರಮೇಣ ಪರಿವರ್ತನೆಗೊಂಡು ಮುಕ್ಯ ವಾಹಿನಿಗೆ ಹರಿದು ಬಂದು ಸೇರಿಕೊಳ್ಳುತ್ತದೆ. ಅಂದರೆ ನಾಮಪದಗಳಾದ 'ಮಾತು', 'ಕತೆ' ಎನ್ನುವ ರೂಪಗಳೂ ನಂತರದಲ್ಲಿ ಕೂಡುಪದಗಳಾಗಿ ಬದಲುಗೊಂಡು (ಮಾತು+ಆಡು>ಮಾತಾಡು, ಇದಕ್ಕೆ ಹೊಂದುವಂತೆ ಎರಡನೆ ಅಂಗಪದವೂ 'ಕಾತಾಡು' ಎಂದಾಗುತ್ತದೆ.) ಕ್ರಿಯಾರ್ತದ ತಿರುಳನ್ನು ಹೊಂದುವುದು, ಒಂದಿಷ್ಟು ಕುತೂಹಲ ಮೂಡಿಸುತ್ತದೆ.

ಒಟ್ಟಾರೆ ಕುಟುಂಬ ಸ್ವರೂಪದ ಜೋಡುನುಡಿಗಳಲ್ಲಿ (ಅವು ಸಹಜ ದಾತುಗಳಾಗಿರಲಿ ಇಲ್ಲವೆ ಕೂಡುಪದಗಳಾಗಿ ಕ್ರಿಯಾರ್ತ ರೂಪ ಪಡೆದಾಗಲಿ) ಒಂದು ಕ್ರಿಯಾರ್ತ ರೂಪದ ಪದಗಳಾಗಿ ಬೇರು ಮಟ್ಟದಲ್ಲಿ ಇರಲೇಬೇಕು. ಈ ಬೇರು ಚಿಗುರೊಡೆದು ಬೇರೆ ಬೇರೆ ಟಿಸಿಲುಗಳು ಕಾಣಿಸಿಕೊಳ್ಳುತ್ತವೆ. ಹಾಗೆಂದು ಈಗಾಗಲೆ ತಿಳಿದಿದೆ. ಈ ಟಿಸಿಲುಗಳನ್ನೆ ಒಂದು ರೀತಿ 'ಪದರೂಪಗಳು' ಎಂದು ಹೆಸರಿಸುತ್ತೇವೆ. ಈ ಬೇರಿನ ಹಂತದ ಅಂಗಪದಗಳನ್ನು ಎರಡು ರೀತಿ ಗುರುತಿಸಬಹುದಾಗಿದೆ.

(೫.೧.) ಕು.ಸ್ವದ. ತ. ಜೋ.ನು.ಗಳು → ಪೂ.ತ.ಜೋ.ನು.ಗಳು. ೫.೧.೧. / ಆ.ತ.ಜೋ.ನು.ಗಳು. ೫.೧.೨.

**೧. ಸಂಪೂರ್ಣ ತದ್ರೂಪ ಜೋಡುನುಡಿಯ ಬೇರುಗಳು :**

೧. ಆಗು–ಹೋಗು ೨. ಕೊಡು–ಬಿಡು ೩. ತಿಳಿ–ಹೊಳಿ ೪. ತೊಳಿ–ಬಳಿ ೫. ಹೊಡಿ–ಬಡಿ ೬ ಹೇಳು–ಕೇಳು ೭ ಮಾತಾಡು–ಕಾತಾಡು–ಕೂಡುಪದ (ಕ್ರಿಯಾರೂಪ) – ಸಹಜ ಕ್ರಿಯಾದಾತುಗಳು.

**೨. ಆಂಶಿಕ ತದ್ರೂಪ ಜೋಡುನುಡಿಯ ಬೇರುಗಳು :**

೧. ಅನ್ನು–ಆಡು ೨. ಉಣ್ಣು–ತಿನ್ನು ೩. ಒದು–ಬರಿ ೪. ದುಡಿ–ದುಕ್ಬಡು ೫. ಹೋಗು–ಬರು – ಪ್ರಾಸಾಕ್ಕರ ಇಲ್ಲದ ಜೋಡುನುಡಿಗಳು.

**೫.೧.೧. ಸಂಪೂರ್ಣ ತದ್ರೂಪ ಜೋಡುನುಡಿಗಳು :** ಇಲ್ಲಿ ನಮೂದಾಗಿರುವ ಹನ್ನೆರಡು ನುಡಿಜೋಡುಗಳನ್ನು ಅರ್ತಯ್ಸಲು ಈ ರೀತಿ ಎರಡು ಬಾಗವಾಗಿ ಮಾಡಲಾಗಿದೆ.

ಮೊದಲ ಹಂತದ ಜೋಡುನುಡಿಗಳಲ್ಲಿ ಅಂತ್ಯಪ್ರಾಸ ಕಡ್ಡಾಯವಾಗಿದೆ. ಇದರಿಂದ ರೂಪುದಳೆವ ಪದರೂಪಗಳಲ್ಲೆಲ್ಲಾ ಮೊದಲಕ್ಕರವನ್ನು ಹೊರತುಪಡಿಸಿದರೆ, ಉಳಿದೆಲ್ಲ ಅಕ್ಕರಗಳಲ್ಲಿ ಸಮಾನತೆ ಇದೆ; ಅಂದರೆ ಅವುಗಳ ಅಂಗಪದಗಳಲ್ಲಿ ಸಂಪೂರ್ಣ ಸಮತೋಲಿತ ರೂಪವನ್ನೆ ಕಾಣಲು ಸಾದ್ಯವಾಗಿದೆ. ಆದರೆ ಎರಡನೇ ಬಾಗದ ಅಯ್ದು ಜೋಡುನುಡಿಯ ಅಂಗಪದಗಳಲ್ಲಿ ಅಂತ್ಯಪ್ರಾಸ ಇಲ್ಲ. ಕಾರಣ ನಂತರದಲ್ಲಿ ರೂಪ ಪಡೆವ ಪದರೂಪಗಳಲ್ಲೆಲ್ಲಾ ಆಂಶಿಕವಾದ (ಅಂದರೆ ಅಂಗಪದಗಳೆರಡರ ಕೊನೆಯ ಒಂದು ಇಲ್ಲವೆ ಎರಡು ಬಹಳವೆಂದರೆ ಅಪರೂಪಕ್ಕೆ ಮೂರಕ್ಕರಗಳಲ್ಲಿ ಮಾತ್ರ) ತದ್ರೂಪದ ರಚನೆಯನ್ನು ನಿರೀಕ್ಶೆ ಮಾಡಬಹುದಾಗಿದೆ. ಇದರಿಂದ ಇವುಗಳನ್ನು ಆಂಶಿಕ ತದ್ರೂಪ ನುಡಿಜೋಡುಗಳು ಎನ್ನಲಡ್ಡಿ ಇಲ್ಲ.

**ಜೋಡುನುಡಿ** **ಒಳತಿರುಳು**

೧. ಆಗು–ಹೋಗು : ಆಗಾಕ–ಹೋಗಾಕ = ಇರುವಿಕೆಯ ಚಲವನವಲನ,
ಆಗುವಾಂಗಿಲ್ಲ–ಹೋಗುವಾಂಗಿಲ್ಲ = ಏನು ಆಗದಿರುವುದು, ವ್ಯರ್ತ.
ಆಗ್ಲಿಲ್ಲ–ಹೋಗ್ಲಿಲ್ಲ = ವ್ಯರ್ತ.

೨. ಕೊಡು–ಬಿಡು : ಕೊಡುದು–ಬಿಡುದು
– ಕೊಡೂದು–ಬಿಡೂದು ಕೊಡುದು–ಬಿಡುದು = ಒಬ್ಬನ ಇಚ್ಚೆಗೆ ಸಂಬಂಧಿಸಿದ ಕಾರ್ಯ–ಕೆಲಸ.
– ಕೊಟ್ಟಂಗಲ್ಲ–ಬಿಟ್ಟಂಗಲ್ಲ = ಡೋಂಗಿ ವರ್ತನೆಯ ಕಾರ್ಯ–ಕೆಲಸ.
– ಕೊಡ್ಲಿಲ್ಲ–ಬಿಡ್ಲಿಲ = ತುಟಿಗೆ ಬೆಣ್ಣೆ ಸವರುವ ಕೆಲಸ.
– ಕೊಡ್ತೀನಿ–ಬಿಡ್ತೀನಿ = ನಾಟಕೀಯ ವರ್ತನೆಯ ಕಾರ್ಯ ಚಟುವಟಿಕೆ.

೩. ತಿಳಿ–ಹೊಳಿ :
– ತಿಳಿಯುದು–ಹೊಳಿಯುದು = ತಿಳಿವಳಿಕೆಯ ಅರಿವು.
– ತಿಳಿಯಾಂಗಿಲ್ಲ–ಹೊಳಿಯಾಂಗಿಲ್ಲ = ಎಟುಕಲಾರದ ಅರಿವು.
– ತಿಳಿಲಿಲ್ಲ–ಹೊಳಿಲಿಲ್ಲ = ಅಲ್ಪ–ಸ್ವಲ್ಪವೂ ನಿಲುಕದ ತಿಳಿವು.

೪. ತೊಳಿ–ಬಳಿ :
– ತೊಳಿಯುದು–ಬಳಿಯುದು = ಒಪ್ಪ–ಓರಣಗೊಳಿಸುವ ಮನೆಗೆಲಸ.
– ತೊಳಿಯಾಂಗಿಲ್ಲ–ಬಳಿಯಾಂಗಿಲ್ಲ = ಅರೆ ಮನಸಿನ ಕಾರ್ಯ ಚಟುವಟಿಕೆ.
– ತೊಳಿಯುವಾಂಗಿಲ್ಲ–ಬಳಿಯುವಾಂಗಿಲ್ಲ = ಅರೆ ಮನಸಿನ ಕಾರ್ಯ ಚಟುವಟಿಕೆ.
– ತೊಳಿಯಾಕ–ಬಳಿಯಾಕ = ಗಟ್ಟಿತನದಿಂದ ಕೂಡಿದ.

೫. ಹೊಡಿ–ಬಡಿ :
– ಹೊಡಿಯುದು–ಬಡಿಯುದು = ದರ್ಪ, ದಬ್ಬಾಳಿಕೆಯ ಟೇಂಕಾರ.
– ಹೊಡಿಯುವಾಂಗಿಲ್ಲ–ಬಡಿಯುವಾಂಗಿಲ್ಲ = ಇಬ್ಬಂದಿತನದ ಸ್ತಿತಿ.
– ಹೊಡಿಯಾಕ–ಬಡಿಯಾಕ = ಹಿಂಸಾತ್ಮಕ ಚಟುವಟಿಕೆ ಉಳ್ಳ.
– ಹೊಡಿಲಿಲ್ಲ–ಬಡಿಲಿಲ್ಲ = ಹಿಂಸೆಯಲ್ಲಿ ತೊಡಗದಿರುವಿಕೆ.

೬. ಹೇಳು-ಕೇಳು :
- ಹೇಳುದು-ಕೇಳುದು = ಜೊತೆಗೂಡಿ ವಿಶಯದ ಚರ್ಚೆ, ಪರಿಶೀಲನೆ.
- ಹೇಳುವಾಂಗಿಲ್ಲ-ಕೇಳುವಾಂಗಿಲ್ಲ = ದರ್ಪ, ಅಹಮಿಕೆಯ ನಡೆ.
- ಹೇಳಾಕ-ಕೇಳಾಕ = ಮಾತು-ಕತೆಯಲ್ಲಿ, ಚರ್ಚೆಯಲ್ಲಿ ಸಮತೆ ಗುಣ ಉಳ್ಳ
- ಹೇಳೋರು-ಕೇಳೋರು = ಹಿರಿಯರು, ತಿಳುವಳಿಕೆ ನೀಡುವವರು.
- ಹೇಳ್ಲಿಲ್ಲ-ಕೇಳ್ಲಿಲ್ಲ>ಹೇಳ್ಳಿಲ್ಲ-ಕೇಳ್ಳಿಲ್ಲ = ತನ್ನ ಮನಸ್ಸಿಗೆ ತೋಚಿದಂತೆ (ನಿರಾಕರಿಸು).

೭. ಮಾತು+ಆಡು>ಮಾತಾಡು, ಕಾತು+ಆಡು>ಕಾತಾಡು, ಈ ರೀತಿ ಕೂಡುಪದಗಳಾಗಿ ಕ್ರಿಯಾ(ಪದ) ರೂಪವನ್ನು ಪಡೆದಿವೆ.
- ಮಾತಾಡು-ಕಾತಾಡು
- ಮಾತಾಡುದು-ಕಾತಾಡುದು = ಮನದೆರೆದ ಬಾವನೆ, ವಿಚಾರ ಹಂಚಿಕೊಳ್ಳುವಿಕೆ.
- ಮಾತಾಡುವಾಂಗಿಲ್ಲ-ಕಾತಾಡುವಾಂಗಿಲ್ಲ = ಅನುಮಾನ ಗೊಂದಲದ ಸೆಳಕು ಮುಸುಕಿದ ವಾತಾವರಣ.
- ಮಾತಾಡಾಕ-ಕಾತಾಡಾಕ = ಮಾತಿನ ಜಾಣ್ಮೆ ಉಳ್ಳವ.
- ಮಾತಾಡ್ಲಿಲ್ಲ-ಕಾತಾಡ್ಲಿಲ್ಲ = ಮನುಶ್ಯ ಸಂಬಂದದ ಎಡಬಿಡಂಗಿ ವಾತಾವರಣ.
- ಮಾತಿಲ್ಲ-ಕತಿಯಿಲ್ಲ = ಮನುಶ್ಯ ಸಂಬಂದದ ಎಡಬಿಡಂಗಿ ವಾತಾವರಣ.
- ಮಾತಾಡಬೇಕು-ಕಾತಾಡಬೇಕು = ವ್ಯಕ್ತಿಯ ಒಳಗಿನ ತುಡಿತ.

೫.೧.೨. ಆಂಶಿಕ ತದ್ರೂಪ ಜೋಡುನುಡಿಗಳು

೧. ಅನ್ನು-ಆಡು
- ಅನ್ನುದು-ಆಡುದು = ಸಲ್ಲದ ಆರೋಪಣೆ ಮಾಡುವಿಕೆ.
- ಅಂದಾಂಗ-ಆಡದಾಂಗ = ಕಾರಣ ಇರದೆ ಆರೋಪಣೆ ಮಾಡದಿರುವಿಕೆ.
- ಅನ್ನುವಾಂಗಿಲ್ಲ-ಆಡುವಾಂಗಿಲ್ಲ = ಆರೋಪಿಸುವಲ್ಲಿಯೂ ಎಡಬಿಡಂಗಿ ಸ್ತಿತಿ.
- ಅನ್ನಾಕ-ಆಡಾಕ = ಆರೋಪಣೆ ಚಟುವಟಿಕೆ ಇರುವ.
- ಅನ್ಲಿಲ್ಲ-ಆಡ್ಲಿಲ್ಲ = ಅಲ್ಲಗಳೆವ ಆರೋಪಣೆ.
- ಅನ್ನಬೇಕು-ಆಡಬೇಕು = ತಿದ್ದಿ ಹೇಳುವಲ್ಲಿ ಎಡಬಿಡಂಗಿತನದ ಮನಸ್ಸಿನ ಸ್ತಿತಿ.

೨. ಉಣ್ಣು-ತಿನ್ನು
- ಉಣ್ಣುದು-ತಿನ್ನುದು = ಸಹಜ ಜಯ್ವಿಕ ಕ್ರಿಯಾ ಚಟುವಟಿಕೆ.
- ಉಣ್ಣಾಕ-ತಿನ್ನಾಕ = ಎಲ್ಲ ರೀತಿ ಸಮ್ರುದ್ದಿಯ ಸ್ತಿತಿ.
- ಉಣ್ಣುವಾಂಗಿಲ್ಲ-ತಿನ್ನುವಾಂಗಿಲ್ಲ = ಮಜಲು ಮಜಲಾಗಿ ತೋರುವ ಜಿಪುಣತನ.
- ಉಣ್ಲೆಲ್ಲ-ತಿನ್ಲಿಲ್ಲ = ಮಜಲು ಮಜಲಾಗಿ ತೋರುವ ಜಿಪುಣತನ.

೩. ಒದು-ಬರಿ
- ಒದುದು-ಬರಿಯುದು = ಮೊದಲ ಹೆಜ್ಜೆಯ ಕಲಿಕೆ.
- ಒದಾಕ-ಬರಿಯಾಕ = ಮೊದಲ ಹೆಜ್ಜೆಯ ಕಲಿಕೆ.
- ಒದುವಾಂಗಿಲ್ಲ-ಬರಿಯುವಾಂಗಿಲ್ಲ = ಕಲಿಕೆಯ ನಿರಾಸಕ್ತಿ ಚಟುವಟಿಕೆ.

- ಒದ್ಲಿಲ್ಲ–ಬರಿಲಿಲ್ಲ = ಕಲಿಕೆ ಇಲ್ಲದಿರುವಿಕೆ.

೪. ದುಡಿ–ದುಕ್ಬಡು

- ದುಡಿಯುದು–ದುಕ್ಬಡುದು = ಬೆವರಿಳಿಯುವ ಪರಿಶ್ರಮದ ಕಾಯಕ.
- ದುಡಿವಾಂಗಿಲ್ಲ–ದುಕ್ಬಡುವಾಂಗಿಲ್ಲ = ಕಾಯಕದಿಂದ ನುಣುಚಿಕೊಳ್ಳುವ ಮಯ್ಗಳ್ಳತನದ ಪ್ರದರ್ಶನ.
- ದುಡಿಲಿಲ್ಲ–ದುಕ್ಬಡಿಲಿಲ್ಲ = ಕಾಯಕದಿಂದ ನುಣುಚಿಕೊಳ್ಳುವ ಮಯ್ಗಳ್ಳತನದ ಪ್ರದರ್ಶನ.
- ದುಡಿಯಾಕ–ದುಕ್ಬಡಾಕ = ಸವಾಲೆಸೆಯಬಹುದಾದ ಗಟ್ಟಿತನ ಹೊಂದಿರುವಿಕೆ.

೫. ಹೋಗು–ಬರು>ಹೊಗು–ಬರು (ಆದಿಸ್ವರ ಸಮತೋಲನ)

- ಹೊಗುದು–ಬರುದು = ಒಂದು ಕೆಲಸ–ಕಾರ್ಯದ ಚಲನವಲನ.
- ಹೊಗುವಾಂಗಿಲ್ಲ–ಬರುವಾಂಗಿಲ್ಲ = ಸರಳ ಅಲ್ಲದ ಒಂದು ಕಾರ್ಯ–ಕೆಲಸ.
- ಹೊಗಾಕ–ಬರಾಕ = ಒಂದು ಚಟುವಟಿಕೆಯ 'ಗತಿ–ಸ್ತಿತಿ'.
- ಹೊಗ್ಲಿಲ್ಲ–ಬರ್ಲಿಲ್ಲ = ಒಂದು ಕ್ರಿಯೆಯನ್ನು ಅಲ್ಲಗಳೆಯುವಿಕೆ.

ಈ ಎಲ್ಲ ಕುಟುಂಬ ವರ್ಗದ ಜೋಡುನುಡಿಗಳಲ್ಲಿ ಕಾಣುವ ಒಳರಚನೆ ಮತ್ತು ಒಳರಚನೆಯಲ್ಲಿ ಇರುವ ಒಂದು ಏಕರೂಪ ಇರುವುದರತ್ತ ಗಮನ ಹರಿಸಬೇಕಿದೆ. ಇಲ್ಲಿ ಒಂದೊಂದು ಜೋಡುನುಡಿಗೆ ಸಂಬಂದಪಟ್ಟಂತೆ ಮೂರು ಇಲ್ಲವೆ ನಾಲ್ಕು (ಅಪರೂಪಕ್ಕೆ ಅಯ್ದು) ಬಿನ್ನ ರೂಪಗಳ ಇರುವಿಕೆಯನ್ನು ಕಾಣಲು ಸಾದ್ಯವಿದೆ. ಈ ಬಿನ್ನ ರೂಪಗಳನ್ನು ವಾಕ್ಯ ರಚನೆಯ ದ್ರುಸ್ಟಿಯಿಂದ 'ಪದರೂಪ'ಗಳೆಂದೆ ಕರೆಯಬೇಕಾಗುತ್ತದೆ. ಹಾಗೆ ನೋಡಿದರೆ ಇತರೆ ಜೋಡುನುಡಿಗಳನ್ನು ಮತ್ತು ಕುಟುಂಬ ವರ್ಗದ ಜೋಡುನುಡಿಗಳಿಗು ಅಲ್ಪ ವ್ಯತ್ಯಾಸ ಇರುವುದು; ಇಲ್ಲಿಯ ಅಂದರೆ ಇತರೆ ಜೋಡುನುಡಿಗಳಲ್ಲಿ ಅಂಗಪದಗಳು ಬಹುತೇಕ ಒಂದೊಂದು ಪದ ಮಾತ್ರವಾಗಿರುತ್ತದೆ. ಆದರೆ ಈ ಕುಟುಂಬ ವರ್ಗದ ಜೋಡುನುಡಿಗಳಲ್ಲಿ ಪದದ ಬದಲಾಗಿ ಅವುಗಳನ್ನು ಪದರೂಪಗಳೆಂದೆ ಕರೆಯಲು ಯೋಗ್ಯವಾಗಿವೆ. ಕಾರಣ ಇಲ್ಲಿ ಕಾಣಿಸುವ ಪದರೂಪದಲ್ಲಿ ಒಂದು ಪದದೊಂದಿಗೆ ಪ್ರತ್ಯಯವೂ ಸೇರಿರುತ್ತದೆ. ಅಸ್ಟೆ ಅಲ್ಲ ಪದಕಂತೆ ಎನ್ನಬಹುದಾದ ರೀತಿ ಎರಡು ಇಲ್ಲವೆ ಮೂರು ಪದಗಳೂ ಸೇರಿರಲು ಸಾದ್ಯವಿದೆ. ಈ ರೀತಿ ಪದರೂಪಗಳ ರಚನೆಯಲ್ಲಿ ಮಾತ್ರ ಸಮತೋಲನದ ಏಕರೂಪ ಹೊಮ್ಮಿರುವುದನ್ನು ಕಾಣುತ್ತೇವೆ. ಇದಕ್ಕೆ ಒಂದು ಜೋಡುನುಡಿಯ ಉದಾಹರಣೆ ಮೂಲಕ ವಿಚಕ್ಶಣೆ ಮಾಡಬಹುದಾಗಿದೆ.

- **ಅನ್ನು–ಆಡು : –ಬೇರು ಮಟ್ಟದ ಕ್ರಿಯಾರೂಪಗಳು**

– ಅನ್ನು+ವ+ಉದು>ಅನ್ನುವುದು, ಅನ್ನೊದು ಅನ್ನುದು, ಅನ್ನುದು–ಆಡುದು,

– ಅನ್ನು–ಅಂದ (ಬೂತನ್ಯೂನ ರೂಪ)+(ಹಾಗೆ<)ಹಾಂಗ>ಅಂದಾಂಗ, ಅಂದಾಂಗ–ಆಡಿದಾಂಗ,

– ಅನ್ನು-ಅನ್ನುವ (ಬವಿಶ್ಯತ್ ನ್ಯೂನರೂಪ)+ಹಾಂಗ+ಇಲ್ಲ>ಅನ್ನುವಾಂಗಿಲ್ಲ, ಅನ್ನುವಾಂಗಿಲ್ಲ-ಆಡುವಾಂಗಿಲ್ಲ,

– ಅನ್ನು+ಅಲು(ಪ್ರತ್ಯಯ)+ಇಲ್ಲ>ಅನ್ಲಿಲ್ಲ, ಅನ್ಲಿಲ್ಲ-ಆಡ್ಲಿಲ್ಲ,

– ಅನ್ನು+ವ+ಉದು>ಅನ್ನುವುದು+ಅಕ್ಕೆ (ಚತುರ್ತಿ ವಿಬಕ್ತಿ ಪ್ರತ್ಯಯ)>ಅನ್ನುವುದಕ್ಕೆ>ಅನ್ನಾಕ, ಅನ್ನಾಕ-ಆಡಾಕ.

– ಅನ್ನು+ಬೇಕು>ಅನ್ನಬೇಕು>ಅನಬೇಕು, ಅನಬೇಕು-ಆಡಬೇಕು.

ಎರಡು ಕ್ರಿಯಾಮೂಲ (ದಾತು) ರೂಪಗಳು ಸೇರಿ ಜೋಡುನುಡಿಗಳು ತಯಾರಾಗುತ್ತವೆ.

ಇದೀಗ ಮತ್ತೊಂದು ಸಂಗತಿಯತ್ತ ಗಮನ ಸೆಳೆಯುವ ಅಗತ್ಯವಿದೆ, ಎಂದು ಹೇಳಬೇಕು. ಇಲ್ಲಿ 'ಮಾತು', 'ಕತೆ'ಗಳೆರಡೂ ನಾಮಪದಗಳೇ ಎರಡೂ ಸೇರಿದಾಗ 'ಮಾತು-ಕತೆ' ಎಂಬ ಒಂದು ಜೋಡುನುಡಿ ಎನಿಸಿಕೊಳ್ಳುತ್ತದೆ. ಇದು ಕುಟುಂಬ ವರ್ಗದ ಸಂಪೂರ್ಣ ಸಮತೋಲಿತ ಜೋಡುನುಡಿಗಳಲ್ಲಿ ಒಂದಾಗಿದೆ. ಈ ನಾಮಪದಗಳನ್ನು ಕ್ರಿಯಾರೂಪ ಪದಗಳಾಗಿ ಮಾಡಲು ಕೂಡುಪದಗಳಾಗಿ ಪರಿವರ್ತಿಸಬೇಕಾಗುತ್ತದೆ. ನಾಮಪದಗಳಿಗೆ ಸಾಮಾನ್ಯವಾಗಿ ಕೆಲವು ಕ್ರಿಯಾಪದಗಳನ್ನು ಅಂದರೆ 'ಆಗು' (ಮಾತಾಗು, ಬೇಕಾಗು, ಸಾಕಾಗು), (ಕೊಳ್ಳು)'ಗೊಳ್ಳು' (ಹಾಡಿಕೊಳ್ಳು, ಬೇಡಿಕೊಳ್ಳು), 'ಬೀಳು (ಗಂಟಬೀಳು, ಅಡ್ಡಬೀಳು) ಹತ್ತಿಬೀಳು<ಹತಬೀಳು=ದುಂಬಾಲುಬೀಳು, ನೆಗೆದು ಬೀಳು-ಸಾಯು ಇತ್ಯಾದಿಗಳನ್ನು ಹತ್ತಿಸುವ ಮೂಲಕ ಕ್ರಿಯಾಪದಗಳಾಗಿ ಬದಲಾಯಿಸಲು ಅವಕಾಶವಿದೆ. ಹಾಗೆ ಇಲ್ಲಿಯ ನಾಮಗಳನ್ನು 'ಆಡು' ಎಂಬ ರೂಪದೊಂದಿಗೆ ಜೊತೆಗೂಡಿಸಿ 'ಮಾತಾಡು', 'ಕಾತಾಡು' ಎನ್ನುವ ಕೂಡುಪದಗಳೆಂದು ಗುರುತಿಸಲಾಗುವ ಕ್ರಿಯಾರೂಪವನ್ನು ನಿರ್ಮಿಸಲಾಗುತ್ತದೆ.[೪] ಈ ಕ್ರಿಯಾರೂಪಗಳೆ ಕ್ರಮೇಣ ವಿವಿಧ ಪದರೂಪಗಳೊಂದಿಗೆ ಕುಟುಂಬ ವರ್ಗದ ಅತವಾ ಕು. ಸ್ವರೂಪದ ಜೋಡುನುಡಿಗಳಾಗಿ ಬಳಕೆ ಆಗುತ್ತವೆ. ಅದನ್ನಿಲ್ಲಿ ನೋಡಬಹುದು.

'ಮಾತು-ಕತೆ' ನಾಮಾರ್ತದ ಜೋಡುನಡಿಯ ಕ್ರಿಯಾರ್ತದ ನುಡಿಜೋಡಾಗಿ 'ಮಾತಾಡು-ಕಾತಾಡು' ಎಂದಾಗುತ್ತದೆ.

– ನಾಕ ಮಂದ್ಯಾಗ ಇದ್ದಾಗ ಮಾತಾಡುದು-ಕಾತಾಡುದು, ಚ್ಯಾಷ್ಟಿ ಮಾಡುದು ಇದ್ದ ಇರಬೇಕಾಗತ್ತ!

(ನಮಗೆ ಬೇಕಾದ ಜನಗಳ ನಡುವೆ ಇರುವಾಗ, ಚರ್ಚೆ, ವಿಚಾರ ವಿನಿಮಯ, ಒಳಭಾವನೆಗಳ ಹೇಳುದು-ಕೇಳುದು, ನಗೆಚಟಾಕೆಯೊಂದಿಗೆ ಮಾತಾಡೋದು ಮಾಮೂಲಾಗಿ ನಡೆದೆ ಇರುತ್ತದೆ.)

– ಮಾತಾಡಾಕ-ಕಾತಾಡಾಕ ಕಲ್ಲ್ಯಾನಿಗಿಂತ ಮಲ್ಲ್ಯಾ ಶಾಣ್ಯಾ ಅದಾನಾ ಅನಬೇಕು. (ಮೋಡಿಗೊಳಿಸುವ ಮಾತಿನ ಕಲೆಗಾರಿಕೆಯಲ್ಲಿ ಕಲ್ಲಪ್ಪನಿಗಿಂತ ಆ ಮಲ್ಲಪ್ಪನೇ ಜಾಣ್ಮೆಗಾರನೆಂದೇ ಹೇಳಬೇಕು.)

- ಅತ್ತಿಸೊಸಿ ಒಂದೊಂದು ದಿಕ್ಕಿಗೆ ಮಕಾ ಮಾಡ್ಕೊಂಡ ಕುಂತಾರಾ, ಒಬ್ಬರಿಗೊಬ್ಬರು ಎದರ-ಬದರ ಬಂದ್ರು, ಮಾತಾಡುವಾಂಗಿಲ್ಲ-
  ಕಾತಾಡುವಾಂತಿಲ್ಲ ಅನ್ನುವಾಂಗಾಗೇತಿ!
  (ಅತ್ತಿ-ಸೊಸೆಯರು ಮುಕ ಉಬ್ಬಿಸಿಕೊಂಡ ಕುಳಿತಿದ್ದಾರೆ, ಅವರ ನಡುವೆ ಮಾತು-ಕತೆ ಇಲ್ಲದಾಗಿದೆ.)
- ಇನ್‌ಮ್ಯಾಲೆ ಹಚ್ಚುದು-ಚುಚ್ಚುದು ಮಾಡಾಕ ಹೋಗ್ಬ್ಯಾಡವಾ, ಅಂತ ಬಯ್ದು ಬುದ್ಧಿ ಮಾತ ಹೇಳಿದ್ದಕ್ಕ, ನನ್ ಜೋಡಿ ಮಾತಾಡ್ಲಿಲ್ಲ-ಕಾತಾಡ್ಲಿಲ್ಲ!
  (ಇನ್ನು ಮುಂದಾದರೂ ಜಗಳಾ ಹಚ್ಚುವ, ಚಾಡಿ ಹೇಳುವ ಕಾರ್ಯವನ್ನೂ ಬಿಟ್ಟು ಬಿಡು, ಎಂದು ಬುದ್ಧಿವಾದ ಹೇಳಿದ್ದಕ್ಕೆ, ನನ್ನ ಜೊತೆ ಮಾತನಾಡುವುದನ್ನೆ ಬಿಟ್ಟಿದ್ದಾಳೆ.)
- ನನಗೂ ಮಾತಾಡ್ಬೇಕು-ಕಾತಾಡ್ಬೇಕು ಅಂತ ಅನಸ್ತು, ಅದಕ್ಕ ಹೊಟ್ಟ್ಯಾಗಿನ ಸಂಗ್ಟಾ ಹೇಳ್ಕೊಂಡ್ಯಾ!

(ನನ್ನೊಳಗೆ ಹೊಯ್ದಾಡುವ ಒಳಸಂಕಟವನ್ನು ಹೊರಚೆಲ್ಲಿಕೊಳ್ಳುವ ತುಡಿತ ತೀವ್ರಗೊಂಡಿತು. ಹೀಗಾಗಿ ಇಸ್ಟು ಮಾತನಾಡಬೇಕಾದ ಪರಿಸ್ತಿತಿ ಬಂದಿತು.)

**೬.೧. ಸಾದಿತ ಸಮತೋಲಿತ ಜೋಡುನುಡಿಗಳು :** ಇನ್ನು ಕೊನೆಯದಾಗಿ ಸಮತೋಲಿತ ಕಾರ‍್ಯ ಚಟುವಟಿಕೆಗೆ ಸಂಬಂದಿಸಿ ಮತ್ತೊಂದು ಸಂಗತಿಯನ್ನು ಇಲ್ಲಿ ನಮೂದಿಸಲೇಬೇಕು. ಎಂದರೆ ಜೋಡುನುಡಿಯ ಅಂಗಪದಗಳೆರಡೂ ಓಲಾಡುವ ತಕ್ಕಡಿಯ ಎರಡು ಪರಡಿಗಳು ಇದ್ದಂತೆ. ಹೀಗೆ ಅತ್ತಿತ್ತ ಓಲಾಡುವ ಪರಡಿಗಳು ಅಂತಿಮವಾಗಿ ಸಮಪಾತಳಿಗೆ ಬಂದು ನಿಲ್ಲುವುದೆ ಆಗಿದೆ. ಇದನ್ನೆ ಸಮತೋಲಿತ ಜೋಡುನುಡಿಗೆ ಹೊಂದಿಕೆ ಆಗುವಂತೆ ರೂಪಕವಾಗಿ ಬಣ್ಣಿಸುತ್ತ ವಿಶಿಸ್ಟ ವಿಚಕ್ಶಣೆಯೊಂದಿಗೆ ವಿವರಿಸಬಹುದು. ಈ ರೀತಿ ಸಮತೋಲನಗೊಳ್ಳುವ ಕ್ರಿಯೆಯಲ್ಲಿ ಉಚಿತವರಿತು ಸಂಗಾತಿ ಪದವೊಂದರ ಹೋಲಿಕೆಯನ್ನಾದರಿಸಿ, ಅಕ್ಕರವೊಂದು ಸೇರ‍್ಪಡೆ ಆಗಲೂಬಹುದು. ಹಾಗೆಯೇ ಅಕ್ಕರವೊಂದು ಕಳಚಿಕೊಳ್ಳಲೂಬಹುದು. ಇದನ್ನೆ ಇಲ್ಲಿ 'ಸಮತೋಲಿತ ಸಾದಿತ ಪದಗಳು', ಎಂದು ಹೆಸರಿಸಬಹುದು.

೬.೧. ಸಾ.ಸ.ಜೋ.ನು. < ಅಕ್ಕರ ಸೇರ‍್ಪಡೆ ೬.೨ / ಅಕ್ಕರ ಬೇರ‍್ಪಡೆ ೬.೩

**೬.೨. ಅಕ್ಕರ ಸೇರ‍್ಪಡೆ :**

ಜೋಡುನುಡಿಯ ಅಂಗಪದಗಳೆರಡೂ ತಕ್ಕಡಿಯ ಎರಡು ಪರಡಿಗಳಿದ್ದಂತೆ, ಎಂದು ಈಗಾಗಲೆ ನೋಡಿದ್ದೇವೆ. ಯಾವುದೆ ವಸ್ತುವನ್ನು ತೂಗಿ ಅಳೆಯುವಾಗ ಎಡಬಾಗದ ಪರಡಿ ಸಮಪಾತಳಿಗೆ ಬರಲು ನಾವು ಅಳತೆಗನುಸಾರವಾಗಿ ಒಂದಿಸ್ಟು ಸೇರಿಸಲೂ ಬಹುದು; ಹೆಚ್ಚೆನಿಸಿದಾಗ ತೆಗೆದು ಹಾಕಲೂಬಹುದು. ಒಟ್ಟಾರೆ ಸಮಪಾತಳಿ ಅಂದರೆ ಸಮತೋಲಿತ ಸ್ತಿತಿಗೆ ಬಂದು ನಿಲ್ಲುವುದೆ ಆಗಿದೆ.




ಅಕ್ಕರ ಸೇರ್ಪಡೆ

**೬.೨.೧. ವ್ಯಂಜನಾಕ್ಕರ ಸೇರ್ಪಡೆ :**

- ಮದುವೆ-ಮುಂಜಿ>ಮದುವೆ-ಮುಂಜುವೆ>(ಬಾದಾಮಿ ಒಳನುಡಿ) ಮದವಿ-ಮುಂಜವಿ.
  ಎರಡಕ್ಕರ/ಎರಡಕ್ಕರ, 'ವಿ' ಅಂತ್ಯಪ್ರಾಸ.
- ತಾಬಡ-ತೋಬ್>(ಬಾ.ಒ.) ತಾಬಡ-ತೋಬಡ್*
  –UU / –UU 'ಡ' ಅಂತ್ಯಪ್ರಾಸ
- (ಕೊಣಬಿಗೆ>) ಕೊಣಮಿಗೆ-ಕಡಚಿ>ಕೊಣಮಿಗೆ-ಕಡಚಿಗೆ>(ಬಾ.ಒ.)
  ಕೊಣಮಿಗಿ-ಕಡಚಿಗಿ* UUUU/ UUUU 'ಗಿ' ಅಂತ್ಯಪ್ರಾಸ.
- ಕಾಳ (ಇಲ್ಲ)-ಸುಂಕ(ಇಲ್ಲ)>ಕಾಳ(ಇಲ್ಲ)-ದೂಳ(ಇಲ್ಲ)
  –U / –U 'ಳ' ಅಂತ್ಯಪ್ರಾಸ.

ಇಲ್ಲಿ ಮೊದಲನೇ ಅಂಗಪದ ಅನುಸಾರ ತಾಳ-ಲಯಗೂಡುವ ಹಾಗೆ ಇಡೀ ಪದವೇ (ಬದಲುಗೊಂಡು) ಸೇರ್ಪಡೆ ಆಗಿದೆ.

- ಅಡಿ-ಬಡ್ಡಿ (ಮೂಲ ರೂಪ)>ಅಡ್ಡಿ-ಬಡ್ಡಿ ಅಂಗಪದಗಳ ಎರಡನೇ ಅಕ್ಕರ ಸಮರೂಪಗೊಂಡಿದೆ.
  –U / –U 'ಡ್ಡಿ' ಅಂತ್ಯಪ್ರಾಸ.

**೬.೨.೨. ಸ್ವರಾಕ್ಕರ ಸೇರ್ಪಡೆ**

- ಕಾತೆ-ಕಿರ್ದಿ (ಮೂಲ ಪದಗಳು)>ಕಾತೆ-ಕೀರ್ದಿ* (ಬಾದಾಮಿ ಒಳನುಡಿ) –U/–U –U/–U [*ತೇಲು ಉಚ್ಚಾರಣೆ]
- ಕೆಮ್ಮು>ದಮ್ಮ ಕೆಮ್ಮು-ದಮ್ಮು- 'ಉ' ಗಿಡ್ಡ ಸ್ವರ ಸೇರ್ಪಡೆ –U/–U –U/–U
- ಮಾತು-ಕತೆ (ನಾಮಾರ್ಥದ ಜೋಡುನುಡಿ)

ಮಾತು+ಆಡು>ಮಾತಾಡು 'ಮಾತಾಡು' ಎಂಬ ಕೂಡುಪದವನ್ನಾದರಿಸಿ ಕಾತಾಡು ಮರುದನಿ ಪದ (Echo word)ಎಂಬಂತೆ ಸ್ರುಶ್ಟಿಗೊಂಡು ಎರಡನೇ ಅಂಗಪದವಾಗಿ ಬಳಕೆ ಆಗುತ್ತದೆ.

ಮಾತು-ಕತೆ (ಮೂಲರೂಪ)>ಮಾತಾಡುದು-ಕಾತಾಡುದು –U/UU ––UU/––UU

**೬.೩. ಅಕ್ಕರ ಬೇರ್ಪಡೆ :**

ಅಕ್ಕರ ಕಳಚಿಕೊಳ್ಳುವಿಕೆ : ತೂಕ ಮಾಡುವ ವಸ್ತು ಬಾರವಾಗಿ ಎಡಬಾಗದ ಪರಡಿ ಕೆಳಗಿಳಿದಾಗ ಸಮತೋಲನಗೊಳಿಸಲು ಅಂದರೆ ಸಮಪಾತಳಿಗೆ ತರಲು (ವ್ಯಾಪಾರಿ) ತೂಕ ಮಾಡುವ ವಸ್ತುವಿನಲ್ಲಿ ಒಂದಿಸ್ಟು ತೆಗೆದು ತನ್ನ ಸರಕು-ಸಾಮಗ್ರಿಯ

ಮಡಿಲಿಗೆ ಹಾಕಿಕೊಳ್ಳುತ್ತಾನೆ. ಹಾಗೆಯೇ ಇಲ್ಲಿಯ ಜೋಡುನುಡಿ ಸಮತೋಲನದ ಚಲನವಲನವು ಕೂಡ....

ಅಕ್ಕರ ಬೇರ್ಪಡೆ : ವ್ಯಂ.ಬೇ. ೬.೩.೧. / ಸ್ವಬೇ. ೬.೩.೨.

**೬.೩.೧. ವ್ಯಂಜನಾಕ್ಕರ ಬೇರ್ಪಡೆ**

- ದಮ್ಮ-ದಣಿವು>ದಮ್ಮ-ದಣೆ – ಎರಡಕ್ಕರ/ಎರಡಕ್ಕರ
- ಬೇಕಾರ್-ಬಿಟ್ಟಿ>ಬೇಕಾ-ಬಿಟ್ಟಿ – ಎರಡಕ್ಕರ/ಎರಡಕ್ಕರ
- ಧೂಮ-ದೂಸರ>ದುಮ್ಮ-ದೂಸ – ಎರಡಕ್ಕರ/ಎರಡಕ್ಕರ –U/–UU < –U/–U
- ಸಿಟ್ಟು-ಸೆಡುವು>ಸಿಟ್ಟು-ಸೆಡು– ಎರಡಕ್ಕರ/ಎರಡಕ್ಕರ
- ಗುರುತು-ಪರಿಚಯ>ಗುರುತು-ಪರಿಚೆ– ಮೂರಕ್ಕರ/ಮೂರಕ್ಕರ
  UUU/UUUU < UUU/UUU

**೬.೩.೨. ಸ್ವರಾಕ್ಕರ ಬೇರ್ಪಡೆ**

ಓದು-ಬರಹ>(ಶಿಸ್ಟನುಡಿ) ಒದು-ಬರ್[**] (ಬಾದಾಮಿ ಒಳನುಡಿ) –U/UUU > UU/UU ಅಂಗಪದಗಳ ಆದಿ ಗಿಡ್ಡಸ್ವರ / ಗಿಡ್ಡಸ್ವರ

ಇಲ್ಲಿ ಮೊದಲನೇ ಅಂಗಪದದಲ್ಲಿದ್ದ ಮೊದಲ ಸ್ವರದ ಕಳಚುವಿಕೆ ಕಂಡುಬಂದರೆ, ಎರಡನೇ ಅಂಗಪದದಲ್ಲಿಯ ಕೊನೆಯ 'ಹ' ಎನ್ನುವ ಅಕ್ಕರದ ಕಳಚುವಿಕೆ ಕಾರ್ಯವೂ ಸಾಂಗವಾಗಿ ಸಾಗುತ್ತದೆ.

ಹೀಗೆ ಶಿಸ್ಟಬಾಶೆ ಬಳಕೆಯ ಜೋಡುನುಡಿಯೊಂದು ಬಾದಾಮಿ ಒಳನುಡಿಯಲ್ಲಿ ಚಾಲ್ತಿಗೊಂಡಾಗ ಎರಡು ಬಗೆಯ ಕಳುಚುವಿಕೆಯ ಕಾರ್ಯ ಏಕಕಾಲಕ್ಕೆ ನಡೆಯುತ್ತದೆ.

- ಕೋರ್ಟು-ಕಚೇರಿ<ಕೋರ್ಟು-ಕಚೆರಿ[೧೦] –U/U–U –U/UUU ಉದ್ದಸ್ವರ<ಗಿಡ್ಡಸ್ವರ
  ಸೋಲು-ಗೆಲುವು>ಸೊಲು-ಗೆಲು : UU / UU 'ಲು' ಅಂತ್ಯಪ್ರಾಸ.

ಇಲ್ಲಿಯೂ ಎರಡು ಬಗೆಯ ಬೇರ್ಪಡೆ ಕ್ರಿಯೆ ನಡೆದಿದ್ದರೂ ಎರಡನೇ ಅಂಗಪದದ ವ್ಯಂಜನ ಬೇರ್ಪಡೆಯ ಕ್ರಿಯೆ ಮುಕ್ಯವಾದುದು.

- ಬಿಲ್-ಕೂಲ್>ಬಿಲ್-ಕುಲ್ 'ಲ್' –/– > –/– ಉದ್ದಸ್ವರ<ಗಿಡ್ಡಸ್ವರ (ಎರಡನೇ ಅಂಗಪದದ ಆದಿ ಅಕ್ಕರ)
- ಆಜೂ-ಬಾಜೂ>ಆಜು-ಬಾಜು 'ಜು' –/– > –U/–U
  ಉದ್ದಸ್ವರ<ಗಿಡ್ಡಸ್ವರ (ಎರಡೂ ಅಂಗಪದಗಳ ಎರಡನೇ ಅಕ್ಕರ)
- ಹಾಲ್-ಚಾಲ್>ಹಲ್-ಚಲ್ 'ಲ್' –/– > –U/–U

ಉದ್ದಸ್ವರ<ಗಿಡ್ಡಸ್ವರ (ಎರಡೂ ಅಂಗಪದಗಳ ಮೊದಲನೇ ಅಕ್ಕರ)

೬.೪. ತೇಲು ಉಚ್ಚಾರಣೆ ಸಮತೋಲನ ಮತ್ತು ಇತರ ಜೋಡುನುಡಿಗಳು.

**ಹಿಂದಿನ (ಮೂಲ)ರೂಪ>ಸಮತೋಲಿತ ರೂಪ ಮಾನದಂಡ ಉದ್ದೇಶಿತ ಯಾನ ಮುಖ್ಯಗುರಿ**

೧. ಕೋರ್ಪು–ಕಚೇರಿ>ಕೋರ್ಟು–ಕಚೆರಿ –U/UUU ಜಗಣ ವಿನ್ಯಾಸ ಪರಿಹಾರ ಸ. ರಚನೆ
೨. ಹಿರೇರು–ಕಿರೇರು>ಹಿರೆರು–ಕಿರೆರು UUU / UUU ಜ.ವಿ.ಪ. ಸ.ರ.
೩. ಹೆದರಿಸು–ಬೆದರಿಸು>ಹೆದರ್ಸು'–ಬೆದರ್ಸು' UUU / UUU ಜ.ವಿ.ಪ. ಸ.ರ.
೪. ಹತ್ತೂದು–ಇಳೂದು>ಹತ್ತು'ದು–ಇಳುದು UUU / UUU ಸ.ಪ.ಸ ಸ.ರ.
೫. ಲಗ್ನ–ಮುಹೂರ್ತ>ಲಗ್ಗ'ನ–ಮೂರ್ತ UUU / –U ಸ.ಪ.ಸ ಸ.ರ.
೬. ಇವತ್ತ–ನಾಳೆ>ಇವತ್ತ'–ನಾಳೆ UUU / –U ಸ.ಪ.ಸ ಸ.ರ.
೭. ಚಕ್ಕಳ–ಮುಕಳಿ>ಚಕ್ಕ'ಳಿ–ಮುಕಳಿ UUU / UUU ಸ.ಪ.ಸ ಸ.ರ.
೮. ಹುರುಪು–ಹುಮ್ಮಸ್ಸು>ಹುರುಪು–ಹುಮ್ಮ'ಸು[೧೦*] UUU / UUU ಸ.ಪ.ಸ ಸ.ರ.
೯. ಬೇಕಾದುದು–ಬೇಡಾದುದು>ಬೇಕಾದ್ದ'–ಬ್ಯಾಡಾದ್ದ' UUU / UUU ಸ.ಪ.ಸ ಸ.ರ.
೧೦. ಖಾತೆ–ಕಿರಿ>ಕಾತೆ–ಕೀರ್ದಿ' –U / –U ಆ.ಸ್ವಸ. ಸ.ರ.
೧೧. ಗಂಡ–ಹೇಂತಿ>ಗಂಡ–ಹೆಂತಿ –U / –U ಆ.ಸ್ವಸ. ಸ.ರ.
೧೨. ಓದು–ಬರಹ>ಒದು–ಬರಿ UU / UU ಆ.ಸ್ವಸ. ಸ.ರ.
೧೩. ಮಾತಾಡೂದು–ಕಾತಾಡೂದು>ಮಾತಾಡುದು–ಕಾತಾಡುದು––UU/––UUಆ.ಸ್ವಸ. ಸ.ರ.
೧೪. ತಾಬಡ–ತೋಬ್>ತಾಬಡ–ತೋಬಡ –UU / –UU ಅಂ.ಪ್ರಾಸ.ಸಮ ಸ.ರ.
೧೫. ಕೊಮಣಗಿ–ಕಡಚಿ>ಕೊಮಣಗಿ–ಕಡಚಗಿ UUUU/UUUU ಅಂ.ಪ್ರಾಸ.ಸಮ ಸ.ರ.
೧೬. ಕಾಳ–ಸುಂಕ>ಕಾಳ–ದೂಳ –U / –U ಅಂ.ಪ್ರಾಸ.ಸಮ ಸ.ರ.
೧೭. ಮದವಿ–ಮುಂಜಿ>ಮದವಿ–ಮುಂಜವಿ ಎರಡಕ್ಕರ/ಎರಡಕ್ಕರ ಅಂ.ಪ್ರಾಸ.ಸಮ ಸ.ರ.

ಈ ಹದಿನೇಳು ಗೋಜಲುಮಯ ಜೋಡುನುಡಿಗಳನ್ನು ಒಂದು ರೀತಿ ನಿಕರತೆಯ ವಿಂಗಡೆಯೊಂದಿಗೆ ನಾಕು ಬಾಗವಾಗಿ ಗುರುತಿಸಿಕೊಳ್ಳಬಹುದಾಗಿದೆ.

೧. ಜಗಣ ವಿನ್ಯಾಸ ಪರಿಹರಿಸಿಕೊಳ್ಳುವಿಕೆ : – ಜ.ವಿ.ಪ. – (೧–೩)
೨. ಸಂಗಾತಿ ಪದದೊಂದಿಗೆ ಸಮತೋಲನಗೊಳ್ಳುವಿಕೆ : – ಸಂ.ಪ.ಸ. – (೪–೯)
೩. ಆದಿಸ್ವರ ಸಮತೋಲನಗೊಳ್ಳುವಿಕೆ : – ಆ.ಸ್ವಸಮ. – (೧೦–೧೩)
೪. ಅಂತ್ಯಪ್ರಾಸ ಸಮತೋಲನಗೊಳ್ಳುವಿಕೆ : – ಅಂ.ಪ್ರಾ.ಸಮ. – (೧೪–೧೭)

**೭.೧. ಬಳಕೆ ಸ್ವರೂಪದಲ್ಲಿಯ ಲಾಲಿತ್ಯ**

ಈ ತನಕ ಬಹುತೇಕ ತಾತ್ವಿಕ ವಿಚಾರ ಚರ್ಚೆಗೆ ಸೀಮಿತಗೊಂಡಂತಾಗಿದೆ. ಇದೀಗ ಸ್ವಲ್ಪ ಪ್ರಾಯೋಗಿಕ ಉದಾಹರಣೆಯೊಂದಿಗೆ ಪಯಣಿಸುತ್ತ, ಜೊತೆಗೆ ವಿಚಕ್ಷಣೆ ಮಾಡುತ್ತ, ಸಮತೋಲನದ ಅಂದ–ಚಂದದ ಕುಂದಣಗಾರಿಕೆಯತ್ತ, ಗಮನ ನೀಡಬಹುದಾಗಿದೆ.

೧. ಮೋಡಿಗಾರ ಪದಗಳಾಗಿ 'ದಮ್ಮ' ಮತ್ತು 'ಗುರುತು' ಪದಗಳು –

ಬಳಕೆಯ ವಯ್ಚಿತ್ರ್ಯ ಬಾದಾಮಿ ಒಳನುಡಿಯಲ್ಲಿ 'ದಮ್/ದಮ್ಮು' ಪದದ ಬಳಕೆ ಇದೆ.

- 'ದಮ್ಮ' ಇದ್ರ ಬಾ ಅನ್ನು ಒಂದ್ ಕಯ್ (ನೋಡಿಯೆ>) ನೋಡೇ (ಬಿಡೂನು>) ಬಿಡುನು!

  (ಸವಾಲೆಸೆಯುವ ಮಾತಿನ ವರಸೆ) 'ದಮ್ಮ'= ಶಕ್ತಿ, ತಾಕತ್ತು.
- 'ದಮ್ಮ ಹತ್ತೇತಿ, (ಸ್ವಲ್ಪ>) ಸಲಪ ತಡಿ.' (ದಮ್ ಹತ್ತು–ನುಡಿಗಟ್ಟು–ಏದುಸಿರಿನಿಂದ ಆಯಾಸಗೊಳ್ಳು.)
- ದಮ್ಮ ಆರಿಸಿಕೊಂಡು ಬರ್ತೀನಿ, ಒಂದ್ ಚೂರ ತಡಿ. (ದಮ್ಮ=ಏದುಸಿರು)

ನುಡಿಜೋಡಿಯಲ್ಲಿ ಬಳಕೆ : 'ದಮ್(>ದಮ್ಮ)–ದಣೆ ಈಗ ಬಂದ್ಯಾ, ಸಲಪಾನೂ ಮಾತಾಡಾಕ ಆಗೂವಲ್ಲು'

(ಒಂದೇ ಸಮನಾದ ಕೆಲಸದಿಂದ ದಣಿವಾಗಿ ಏದುಸಿರು ಬಿಡುವಂತ) ಆಯಾಸ, ಬಳಲಿಕೆ, ಎಂಬುದು ಇಲ್ಲಿಯ ಜೋಡುನುಡಿಯ ತಿರುಳು. ಹೀಗಾಗಿ ದಮ್ಮ, ದಣಿವು, ಪದಗಳೆರಡು ಈ ನುಡಿಜೋಡಿಗಳ ರಚನೆಯಲ್ಲಿವೆ. ದಮ್ಮ–ದಣಿವು–ಎರಡಕ್ಕರ/ಮೂರಕ್ಕರ. ಮೂರಕ್ಕರದ ಅಂಗಪದದಲ್ಲಿ ಅಕ್ಕರವೊಂದು ಕಳಚಿದಾಗ ಸಮತೋಲನ ಸಾಧ್ಯವಾಗುತ್ತದೆ.

ಶಕ್ತಿ, ತಾಕತ್ತು,
- ಆ ಪ್ರಕಾರ 'ದಮ್ಮ–ದಣಿವು'>'ದಮ್ಮ–ದಣೆ'–ಎರಡಕ್ಕರ/ಎರಡಕ್ಕರ
- ಇನ್ನು 'ಕೆಮ್ಮು–ದಮ್ಮು' ಜೋಡುನುಡಿ ನೋಡಿ.

– ದಮ್ಮ → ಶಕ್ತಿ ತಾಕತ್ತು / ಏದುಸಿರು, / ಗೂರಲು ರೋಗ

ದಮ್ಮ – (=ಶಕ್ತಿ, ತಾಕತ್ತು), (=ಉಸಿರು), (=ಗೂರಲು ರೋಗ), ಹೀಗೆ ಈ 'ದಮ್ಮ' ಎನ್ನುವ ಪದಕ್ಕೆ ಮೂರು ತಿರುಳಿದೆ. ಗೂರಲು ರೋಗ, ಹಾಗಾದರೆ 'ಕೆಮ್ಮು–ದಮ್ಮು' ಎನ್ನುವ ನುಡಿಯಾಕೆ ಬೇಕು? ಸಹಜ ಪ್ರಶ್ನೆ ಎತ್ತಬಹುದು. ಇದಕ್ಕೆ ಉತ್ತರ ಸರಳವಾಗಿದೆ. ಬಾಶೆ ಯಾರಪ್ಪನ ಮನೆಯ ಆಸ್ತಿಯೂ ಅಲ್ಲ. ಅದು ಸಮೂಹಕ್ಕೆ ಸೇರಿರುವುದು. ಆ ಪ್ರಕಾರ 'ಕೆಮ್ಮು' ಶ್ವಾಸಕೋಶದ ತಾತ್ಕಾಲಿಕ ತೊಂದರೆಯಿಂದ ಉಂಟಾಗುವ ಶ್ವಾಸಕ್ರಿಯೆಯ ಅಡಚಣೆ. ಹಾಗೆಯೇ ಶ್ವಾಸಕೋಶದ ಬಹುಕಾಲೀನ ತೊಂದರೆಯಿಂದ 'ದಮ್ಮ' (=ಉಬ್ಬಸ ರೋಗ) ತಲೆದೋರುತ್ತದೆ. ಇದು ಸಹ 'ಕೆಮ್ಮಿ'ನ ಹಾಗೆ ಅದರ ಸೋದರ ಸಂಬಂದಿ ತೊಂದರೆ ಈ 'ದಮ್ಮ' ಆಗಿದೆ. ಈ ಜೋಡುನುಡಿ ರಚನೆ ಹೀಗಾಗಿದೆ:

ಕೆಮ್ಮು–ದಮ್ಮ>ಕೆಮ್ಮು–ದಮ್ಮು ಈ ನುಡಿಜೋಡು 'ಗೂರಲು ರೋಗಕ್ಕೆ' ಮಾತ್ರ ಸೀಮಿತವಾಗಿದೆ.

ಇನ್ನು 'ದಮ್ಮ' ಎನ್ನುವ ಪದ ಎರಡೂ ನುಡಿಜೋಡುಗಳಲ್ಲಿ ಬಳಕೆಯಾದ ರೀತಿ ನೋಡಿ.

– ದಮ್ಮ-ದಣಿವು<ದಮ್-ದಣಿ<ದಮ್ಮ-ದಣೆ,-ಸಮತೋಲನ-ಎರಡಕ್ಕರ/ಎರಡಕ್ಕರ
– ಕೆಮ್ಮು-ದಮ್ಮ ಕೆಮ್ಮು-ದಮ್ಮು,- –U/–U 'ಮ್ಮು' ಅಂತ್ಯಪ್ರಾಸ

ಇಲ್ಲಿ 'ದಮ್/ದಮ್ಮ' ಪದ ಎಲ್ಲಿಯೂ ತನ್ನ ಪಾರುಪತ್ಯವನ್ನೆ ತೋರಲು ಹೊರಟಿಲ್ಲ. ಒಂದರಲ್ಲಿ ತನ್ನ ಉಚ್ಚಾರಣೆಯ ಆಕಾರಕ್ಕೆ ತಕ್ಕಂತೆ ಬಾಗುವಂತೆ ಮಾಡಿದೆ. ಇನ್ನೊಂದರಲ್ಲಿ ಮತ್ತೊಂದು ನುಡಿಯ ಆಕಾರಕ್ಕೆ ತಕ್ಕಂತೆ ತನ್ನನ್ನು ತಾನೆ ಬಾಗಿಸಿಕೊಂಡಿದೆ. ಈ ರೀತಿ ಬಾಗುವುದು ಅತವಾ ಬಾಗಿಸಿಕೊಳ್ಳುವಲ್ಲೆ ಜೋಡುನುಡಿಯ ಅಂದ-ಚಂದದ ಸೊಬಗು ನಿರ್ಮಾಣಗೊಳ್ಳುತ್ತದೆ. ಇದೇ ಸಮತೋಲನ ಸ್ರುಶ್ಟಿಯ ವಯ್ಚಿತ್ರ್ಯ ಎನ್ನಬೇಕು.

**೭.೨. ಇನ್ನು 'ಗುರುತು' ಅಂಗಪದದ ವಿಚಕ್ಶಣೆ**

– 'ಗುರುತು' ಪದ ಇವತ್ತಿನ ಬಳಕೆಯಲ್ಲಿ ಉಚ್ಚಾರಣೆಯ ಮೂರು ಪರ್ಯಾಯ ರೂಪಗಳಿಂದ ಜೀವಂತವಾಗಿದೆ.
– ಗುರುತು : (ಗುರ್ತು) "ಅಂವಾ ಯಾರನ್ನೂದ ನನಗೆ ಗುರುತಾಗ್ಲಿಲ್ಲ!"
– ಗೊರ್ತು : "ಅಂವ್ಗ ಇನ್ನುತನಕಾ, ಇಲ್ಲೆ ಏನ್ ನಡಿಯಾಕ ಹತ್ತೇತಿ ಅನ್ನೂದ ಗೊರ್ತ ಆಗುವಲ್ದು!"
– ಗೊತ್ತು : "ಎಲ್ಲಾ ಗೊತ್ತಿದ್ರೂ ತನಗ ಏನೇನು ಗೊತ್ತಿಲ್ಲಾಂತ, ನಾಟಕ ನಡಸಾಕ ಹತ್ಯಾನಾ!"

ಇದೇ ರೀತಿ ಜೋಡುನುಡಿಗಳಲ್ಲೂ ಅವತಾರವೆತ್ತಿರುವುದನ್ನು ಕಾಣ್ತೀವೆ.

೧. ಗುರುತು-ಪರಿಚ(ಯ)<ಗುರುತು-ಪರಿಚ</ಗುರುತು-ಪರಿಚೆ : UUU/UUU
೨. ಗುರ್ತು>ಗೊರ್ತು+ಇಲ್ಲ>ಗೊರ್ತಿಲ್ಲ, ಕೂನು+ಇಲ್ಲ>ಕೂನಿಲ್ಲ, ಅಲ್ಲಗಳೆವ ಜೋಡು ನುಡಿಯಾಗಿ.

ಗೊರ್ತಿಲ್ಲ-ಕೂನಿಲ್ಲ. [ಮರಾಟಿ-ಖಾಣ್=ಗುರುತು, ಕುರುಹು.]

೩. ಗೊತ್ತಿಲ್ಲ-ಗೊನಾಚಾರಿಲ್ಲ. (ಒಬ್ಬನ ಗುಣ ಆಚಾರ ಒಂದೂ ಗೊತ್ತಿಲ್ಲದಿರುವುದು; ಈ ವಾಕ್ಯವೇ ಅಡಕಗೊಂಡು ಈ ಜೋಡುನುಡಿ ರಚನೆಗೊಂಡಿದೆ.)

ಗುಣ+ಆಚಾರ ಇಲ್ಲ ಎಂಬುದು ಗೊರ್ತಿಲ್ಲ<ಗೊತ್ತಿಲ್ಲ, ಗುಣಾಚಾರವಿಲ್ಲ>ಗೊತ್ತಿಲ್ಲ-ಗೊನಾಚಾರಿಲ್ಲ.

ಗೊತ್ತಿಲ್ಲ-ಗುಣಾಚಾರವಿಲ್ಲ-ಎರಡನೇ ಅಕ್ಕರ- ತ/ಣ- ಉಚ್ಚಾರಣೆ ಸುಲಭವಲ್ಲ. ಮೊದಲ ಅಕ್ಕರ : ಗೊ/ಗು

ಗೊತ್ತಿಲ್ಲ-ಗೊನಾಚಾರಿಲ್ಲ-ಎರಡನೇ ಅಕ್ಕರ – ತ/ನ- ಉಚ್ಚಾರಣೆ ಸಲೀಸು. ಮೊದಲ ಅಕ್ಕರ : ಗೊ/ಗೊ

ಇಲ್ಲಿಯ ಎರಡೂ ಅಂಗಪದಗಳಲ್ಲಿಯ ಮೊದಲಕ್ಕರ ಅಂತಿಮವಾಗಿ ಆದಿ ಪ್ರಾಸದೊಂದಿಗೆ 'ಗೊ..../(ಗು<)ಗೊ....' ಎಂದಾಗಿರುವುದು ಸ್ಪಸ್ಟವಾಗಿ ಗೋಚರಿಸುತ್ತದೆ. ಹೀಗೆ 'ಗುರುತು' ಪದ, ಅದರ ಬದಲಾದ ರೂಪ 'ಗೊತ್ತು' ಇವೆರಡೂ ಪದಗಳು ತಮ್ಮ ಯಜಮಾನಿಕೆಯ ಪಾರಮ್ಯವನ್ನೆ ಉಳಿಸಿಕೊಂಡಿವೆ.

ಏನಾದರಾಗಲಿ, ಒಟ್ಟಿನಲ್ಲಿ ಸಮತೋಲನದ ಕಲಾ-ಕುಸುರಿಯ ಕಾರ್ಯ ಸಾಂಗವಾಗಿ ಸಾಗಿದೆ.

**೭.೩. ಜೋಡೆತ್ತಿನ ಸಾತಿದಾರಿ ಅಂಗಪದಗಳಾಗಿ : ಕೆಲವು ಜೋಡುನುಡಿಗಳು**

'ಕಾತೆ-ಕಿರ್ದಿ' ಈ ರೂಪದ ಜೋಡುನುಡಿ ರಚನೆಯು ನಿಯಮಾನುಸಾರವಾಗೇ ಇದೆ. ಅಲ್ಲವೆ! –U/–U

ಕಾತೆ-ಕೀರ್ದಿ*- –U/–U [*ತೇಲಿಸಿ ಉಚ್ಚರಿಸುವಿಕೆ]

ಆದರೆ ಹೀಗೆ ಯಾಕೆ (ಕಾತೆ-ಕಿರ್ದಿ) ಉಳಿಯಲಿಲ್ಲ? ಇದಕ್ಕೆ ಉತ್ತರವಾಗಿ ಈ ರೀತಿ ವಿವರಣೆ ಕೊಡಬೇಕಾಗುತ್ತದೆ. ಕನ್ನಡ ಜೋಡುನುಡಿಯ ಅಂಗಪದಗಳಲ್ಲಿ ಒಂದು ನಿಯಮದ ಕಟ್ಟು-ನಿಟ್ಟಿಗೆ ಒಳಗಾಗದೆ ಅನುಸರಣೆ ಇರುವಂತೆ ತೋರುತ್ತದೆ. (ಇದು ಎಲ್ಲ ನುಡಿಗಳಲ್ಲೂ ಕಡ್ಡಾಯವಲ್ಲ.) ಅಂಗಪದಗಳೆರಡೂ ಸಮಸಂಕೆಯಾದರು ಇರಲಿ ಬೆಸಸಂಕೆಯಾದರೂ ಇರಲಿ ಅವು ಸಮ ಸಮನಾಗಿದ್ದಾಗ ಅಂದರೆ ೨:೨ ಇಲ್ಲವೆ ೩:೩ ರಂತೆ ಸಮ ಪ್ರಮಾಣದ ಅನುಪಾತದಲ್ಲಿ ಇರಬೇಕು. ಹಾಗೆ ಈ ಪ್ರಕಾರ ಅಂಗಪದಗಳ ಮೊದಲಕ್ಕರ ಒಂದೇ ಸ್ವರೂಪದಲ್ಲಿ ಇರಬೇಕು. ಅಂಗಪದಗಳ ಮೊದಲಕ್ಕರಗಳೆರಡೂ (ಬಹುತೇಕವಾಗಿ) ಗಿಡ್ಡಸ್ವರ (ಗಿಡ್ಡಕ್ಕರವನ್ನಾದರೂ ಹೊಂದಿರ ಬೇಕು. ಇಲ್ಲವೆ ಉದ್ದಸ್ವರ/ಉದ್ದಕ್ಕರವನ್ನಾದರೂ ಪಡೆದಿರಬೇಕು. ಇದಕ್ಕೆ 'ಓದು-ಬರಹ>ಒದು-ಬರಿ' ಎಂಬ ಜೋಡುನುಡಿಯೇ ಸಾಕ್ಶಿ ಎನ್ನಬೇಕು. ಇದೆ ಬಗೆಯ ಬದಲಾವಣೆ 'ಕಾತೆ-ಕಿರ್ದಿ'ಯಲ್ಲೂ ಆಗಿದೆ.

ಆ ಪ್ರಕಾರ ಖಾತೆ-ಕಿರ್ದಿ (ಮೂಲ ರೂಪದ ಪದಗಳು ಸೇರಿಕೊಂಡು) ರೂಪ ಕ್ರಮೇಣ ಈ ರೀತಿ ಬದಲಾಗಿದೆ.

ಖಾತೆ-ಕಿರ್ದಿ>ಕಾತೆ-ಕಿರ್ದಿ>ಕಾತೆ-ಕೀರ್ದಿ* : –U/–U<–U/–U[*ತೇಲು ಉಚ್ಚಾರಣೆ]

ಇಲ್ಲಿ ಎರಡನೇ ಅಂಗಪದವಾದ 'ಕಿರ್ದಿ' ಪದವು 'ಕೀರ್ದಿ' ಎಂದು ಬದಲಾಗಿದೆಯಲ್ಲಾ! ಒಂದು ಬಾಶೆಯ ಪದ ಮತ್ತೊಂದು ಬಾಶೆಗೆ ಆಮದಾಗಿ ಬಂದಾಗ ಆ ಬಾಶೆಯ ಜನಪದರು (ತಮ್ಮ ರೂಡಿಯ ಉಚ್ಚಾರಣೆ ನಿಯಮಕ್ಕೆ ಅನುಸಾರ) ಬೇಕಾದ ಹಾಗೆ ಬದಲಿಸಿಕೊಳ್ಳುವ ಸ್ವಾತಂತ್ರ್ಯ ಇದೆ, ಎನ್ನುವುದನ್ನು ನಾವು ಮರೆಯುವಂತಿಲ್ಲ. ಹಾಗೆ 'ಕಿ>ಕೀ' ಎಂದಾಗಿದೆ. ಇಲ್ಲಿ ಪದದ ತಿರುಳು ಮುಕ್ಯ ಅಲ್ಲ. ಸುಗಮ ಉಚ್ಚಾರಣೆಯ ಸೊಗಸು ಸಾದ್ಯವಾಗಿದೆ. ಅದಸ್ಟೆ ಇಲ್ಲಿ ಬೇಕಾಗಿದೆ.[೧೧]

- (ಖಾತೆ>)ಕಾತೆ-ಕಿರ್ದಿ : ಉಚ್ಚಾರಣೆ ಗಡುಸು ಎನಿಸುತ್ತದೆ. –U/ –U
- ಕಾತೆ-ಕೀರ್ದಿ* : ಉಚ್ಚಾರಣೆ (ಸುಖಕರ>) ಸುಕಕರ ಎನಿಸುತ್ತದೆ.–U/–U [*ತೇಲಿಸಿ ಉಚ್ಚರಿಸುವಿಕೆ]

ಇದೇ ರೀತಿ ಕುಟುಂಬ ವರ್ಗದ ಜೋಡುನುಡಿಗಳಲ್ಲಿ ಒಂದಾದ 'ಮಾತು-ಕತೆ' ಎಂಬ ನುಡಿಜೋಡು ಕುರಿತು ಒಳಹೊಕ್ಕು ನೋಡಬೇಕು. ಈ ನುಡಿಜೋಡು ಕ್ರಿಯಾರ್ತದ ನೆಲೆಯಲ್ಲಿ ಕೂಡುಪದವಾಗಿ ಬದಲಾದಾಗ ಹೀಗಾಗುತ್ತದೆ.

ಮಾತು+ಆಡು>ಮಾತಾಡು-ಮೊದಲನೇ ಅಂಗಪದ, ಇದರಂತೆಯೇ

ಕಾತು+ಆಡು>ಕಾತಾಡು?- ಇದು (ಈ ರೂಪ) ಬಳಕೆಯಲ್ಲಿ ಇಲ್ಲ. ಇಷ್ಟಾದರೂ ಇವೆರಡರ ಸಾಂಗತ್ಯದೊಂದಿಗೆ ಸುಮಾರು ನಾಲ್ಕು ಬಗೆಯ ನುಡಿಜೋಡುಗಳು ಇವತ್ತಿಗೂ ಚಾಲ್ತಿಯಲ್ಲಿ ಇವೆ, ಎಂಬುದನ್ನೂ ಈಗಾಗಲೇ ಗಮನಿಸಿದ್ದೇವೆ. (೫.೧.೧. ನೋಡಿ)

ಅಂಗಪದಗಳನ್ನು ಇನ್ನೊಂದು ನಿಟ್ಟನಿಂದ ನೋಡಲು ಜೋಡುನುಡಿ ಆದ 'ದೂಳಿಲ್ಲ-ಕಾಳಿಲ್ಲ' ಬಗೆಗೆ ಒಂದಿಷ್ಟು ಪರಾಮರಿಸಲೇಬೇಕು.

'ನಮ್ ಕಟ್ಟಿ ಮ್ಯಾಲೆ ಕುಂತು, (ಹರಟೆ ಹೊಡೆಯುವ ಪಿಳ ಬಂಟರ ಕುರಿತು) ಮಾತ್ನ ಕುಟ್ಟಿದ್ದ ಕುಟ್ಟಿದ್ದು, ಆದ್ರ ಒಂದ ದೂಳಿಲ್ಲ-ಕಾಳಿಲ್ಲ!'

[ಮಾತನ್ನು<ಮಾತ್ನ, ಕಟ್ಟೆ<ಕಟ್ಟಿ=ಬಂಕ, ಜಗಲಿ, ಪಿಳ್ಳೆ ಬಂಟರು>ಪಿಳ ಬಂಟ್ರು, ಮೇಲೆ>ಮ್ಯಾಲೆ]

ಈ ವಾಕ್ಯದಲ್ಲಿ ಎರಡು ಮುಕ್ಯ ಕ್ರಿಯಾ ಚಟುವಟಿಕೆಗಳ ವಿವರಣೆ ಇದೆ. ಅವೆರಡು ಕ್ರಿಯೆಗಳು, ಇಲ್ಲಿ ರೂಪಕವಾಗಿ ಬಳಕೆ ಆದ ವಿಶಯ ಗಮನ ಸೆಳೆಯುತ್ತದೆ.

೧. ಒಕ್ಕಲಿಗನು ರಾಶಿ ಮಾಡುವ ಕ್ರಿಯೆ ೨. ಕುಟ್ಟುವ ಮೂಲಕ ಹುಗ್ಗಿ ತಯಾರಿಸಲು ಗೋದಿ ಕಾಳನ್ನು ಸಿದ್ದಪಡಿಸುವಿಕೆ.

- ರಾಶಿ ಮಾಡುವ ಕ್ರಿಯೆಯಲ್ಲಿ ಕಾಳು ಮತ್ತು ಸುಂಕವನ್ನು ಬೇರ್ಪಡಿಸುವ ಕಾರ್ಯ ನಡೆಯುತ್ತದೆ.
- ಹಾಗೆಯೇ ಗೋದಿ ಕಾಳನ್ನು ಒಳ್ಳಲ್ಲಿ (ಒರಳು+ಅಲ್ಲಿ>ಒರಳಲ್ಲಿ>ಒರ್ಳಲ್ಲಿ>ಒಳ್ಳಲ್ಲಿ) ಹಾಕಿ ಉದ್ದೇಶಿತ ಕಾರ್ಯಕ್ಕಾಗಿ (ಹುಗ್ಗಿ ಮಾಡಲು) ಕುಟ್ಟುವ ಕ್ರಿಯೆ ನಡೆಯುತ್ತದೆ.

ಈ ಎರಡೂ ಕ್ರಿಯಾ ಚಟುವಟಿಕೆಗಳು ನಿರರ್ತಕ ಆಗುತ್ತಿದೆ, ಎಂಬ ತಿರುಳಿನ ನೆಲೆಯಲ್ಲಿ ಮೇಲಿನ ವಾಕ್ಯದಲ್ಲಿ ಬಳಕೆ ಆಗಿದೆ.

ಕುಟ್ಟುವ ಮೂಲಕ ಕಾಳಿನೊಂದಿಗೆ ತವ್ಡು ಕಾಣಿಸಿಕೊಳ್ಳುತ್ತದೆ. ಮತ್ತೆ ಆ 'ತವುಡ'ನ್ನೆ ಕುಟ್ಟಲು ಹೋದರೆ, ಅದು ಉಪಯೋಗ ಇಲ್ಲದ್ದು; ಈ ನೆಲೆಯಲ್ಲಿ ಈ ನುಡಿಗಟ್ಟನ್ನು ನೋಡಿ.

'ತವುಡು ಕುಟ್ಟು'-ಇದಂತು ಉಪಯೋಗವಿಲ್ಲದ ಕೆಲಸ. ಹಾಗೆಯೇ 'ಮಾತು ಕುಟ್ಟು'[೧೨] ಇದು ಸಹ ಉಪಯೋಗವಿಲ್ಲದ ಕೆಲಸ.

ತವುಡು ಕುಟ್ಟಿದ ಹಾಗೆಯೇ ಮಾತು ಕುಟ್ಟುವುದು ಆಗಿದೆ. ಅದೇ ರೀತಿ ರಾಶಿ ಮಾಡುವ ಕ್ರಿಯೆಯಲ್ಲೂ ಕಾಳಿಲ್ಲ, ಸುಂಕವಿಲ್ಲ ಎನ್ನುವುದಾದರೆ ಅದೂ ಉಪಯೋಗ ವಿಲ್ಲದ್ದು; ಹೀಗೆ ಅಲ್ಲಗಳೆಯುವ ಕ್ರಿಯೆ ಆಗಿ ಈ ಜೋಡುನುಡಿ ರೂಪ ಪಡೆದಿದೆ.
ಸುಂಕಿಲ್ಲ-ಕಾಳಿಲ್ಲ : --U/--U

ಹೀಗಾದಾಗ ನಮ್ಮ ಜನಪದರಿಗೆ ಇದರಲ್ಲಿ ಸೊಗಸಿಲ್ಲ ಎನಿಸಿದೆ. ಅದಕ್ಕಾಗಿ 'ಸುಂಕಿಲ್ಲ' ಪದದ ಬದಲಾಗಿ 'ದೂಳಿಲ್ಲ' ಎಂಬುದನ್ನು ತಂದು ಸರಿ ಹೊಂದಿಸಿದ್ದಾರೆ. ಏಕೆಂದರೆ 'ಸುಂಕ' ಮತ್ತು 'ದೂಳ' ಎರಡೂ ಪದಗಳಲ್ಲಿ ಬಹುತೇಕ ಹೋಲಿಕೆ ಇದೆ. ಎರಡೂ 'ಹುಡಿ'ಯಿಂದ ಕೂಡಿವೆ, ಬಣ್ಣದಲ್ಲಿ ಅಸ್ಟೇನೂ ವ್ಯತ್ಯಾಸ ಇಲ್ಲ. 'ಸುಂಕಿಲ್ಲ-ಕಾಳಿಲ್ಲ' ಎನ್ನುವ ಬದಲು 'ದೂಳಿಲ್ಲ-ಕಾಳಿಲ್ಲ' ಎಂದಾಗ ಪ್ರಾಸದ ಸೊಗಸು ಆಗಮಿಸಿದಂತೆ ಆಗಿದೆ. ಈ ರೀತಿ ಸಮತೋಲಿತ ಕ್ರಿಯೆಯೊಂದಿಗೆ ಪ್ರಾಸದ ಸೊಗಸನ್ನು ಸಾದಿಸಿದಂತಾಗಿದೆ.

-ಸುಂಕಿಲ್ಲ-ಕಾಳಿಲ್ಲ : --U/--U

-ದೂಳಿಲ್ಲ-ಕಾಳಿಲ್ಲ : --U/--U -ಮಾತ್ರೆ ಸಮತೆಯೊಂದಿಗೆ ಪ್ರಾಸದ ಹೊಂದಾಣಿಕೆ ರೂಪುಗೊಂಡಿದೆ.

ಇನ್ನು ಕೊನೆಯದಾಗಿ ಹೇಳಬೇಕಾದುದು ಇಷ್ಟೆ.

ಜೋಡುನುಡಿಯ ಬಹು ಮುಕ್ಯ ಲಕ್ಕಣಗಳಲ್ಲಿ ಒಂದು 'ಸಮತೋಲನವನ್ನು ಕಾಯ್ದುಕೊಳ್ಳುವುದು. ಸಾದ್ಯವಾದಸ್ಟು ಸಮತೋಲಿತ ಗುಣವನ್ನು ಉಳಿಸಿಕೊಳ್ಳುವ ಉಚ್ಚಾರಣೆ ಅಂದರೆ ಬಳಕೆಯಲ್ಲಿ ಸಮತೆ ಮತ್ತು ಕ್ಶಮತೆಯನ್ನು ತೋರ್ಪಡಿಸಿಕೊಳ್ಳುವುದೆ ಆಗಿದೆ.

## ೭.೪. ಕೊನೆಯಲ್ಲಿ ಪರಾಮರ್ಶಿಸುವ ಕೆಲವು ಮಾತುಗಳು

ಈ ಬರವಣಿಗೆಯ ಆರಂಬದಲ್ಲೆ ನಾನು ಎರಡು ರೂಪಕಗಳ ಹೋಲಿಕೆ (ಜೋಡೆತ್ತು, ಜೋಡಗಾಲ್ಮರಿ.) ಕೊಟ್ಟಿದ್ದೆ. ಜೊತೆ ಜೊತೆಗೆ ಎರಡು ಅಂಗಪದಗಳಿರುವಂತೆ, ಅತ್ತಿತ್ತ ತೂಗಾಡುವ ತಕ್ಕಡಿಯೊಂದನ್ನು ರೂಪಕವಾಗಿ ಸೇರಿಸಿ, ಇನ್ನಷ್ಟು ವಿಚಕ್ಶಣೆಯ ವಿವರಣೆಯತ್ತ ಕರೆದೊಯ್ಯುವ ಇರಾದೆ ನನ್ನದು. ಜೊತೆಗೆ ಜೋಡುನುಡಿಯ ಉಚ್ಚಾರಕ್ಕೆ ಸಂಬಂದಿಸಿದ ರೂಪ, ರಚನೆ, ಮತ್ತು ಒಳಾಂತರಂಗದ ಚಲನಾತ್ಮಕ ಗತಿ-ಸ್ತಿತಿಯನ್ನು ಅರಿಯುವ ಯತ್ನವೂ ಇದಾಗಿದೆ.

ಇದೀಗ ತೂಕ ಮಾಡುವ ತಕ್ಕಡಿಯನ್ನೂ ತೆಗೆದುಕೊಂಡರೆ ಅಲ್ಲಿ ಎರಡು ಪರಡಿಗಳಿರುತ್ತವೆ. ಅಂತೆಯೇ ಜೋಡುನುಡಿಯ (ಮೊದಲ ಮತ್ತು ಎರಡನೆಯ) ಅಂಗಪದಗಳು ಎರಡಿವೆ. ಪರಡಿಗಳು ಸ್ವತಂತ್ರವಾಗಿ ಓಲಾಡುತ್ತವೆ, ಎಂದಾದರೂ ಅವೆರಡನ್ನು ಸಮತೂಕದೊಂದಿಗೆ ನಿಯಂತ್ರಿಸುವ, ಸರಿಯಾಗಿ ನಡುವಿನ ಮೇಲ್ಭಾಗದಲ್ಲಿ ತೂಕದ ಒಂದು ಹಿಡಿಕೆ ಇದ್ದೆ ಇರುತ್ತದೆ. ಆ ಹಿಡಿಕೆಯ ನಿಯಂತ್ರಣದಲ್ಲಿ ಎರಡೂ

ಪರಡಿಗಳು (ಮೇಲೆ-ಕೆಳಗೆ) ತೂಗಾಡುತ್ತಲೆ ಇರುತ್ತವೆ. ಅದೇ ರೀತಿ ಇಲ್ಲಿಯ ಅಂಗಪದಗಳು ತಮ್ಮ ಪ್ರತ್ಯೇಕ ಇರುವಿಕೆಯಿಂದ ಬಳಕೆಯಲ್ಲಿ ಇದ್ದಿರಬಹುದು. ಇಷ್ಟಾದರೂ ಒಮ್ಮೆ ಎರಡು ಪದಗಳು (ದಾಂಪತ್ಯ ಸಖ್ಯದೊಂದಿಗೆ) ಜೊತೆಗೂಡಿ ಜೊತೆ ಜೊತೆಯಾಗಿ ಬಳಕೆ ಆಗುವಾಗ ಲೋಕರೂಢಿ ಎನ್ನುವ ಪರಂಪರೆಯು, ಅವುಗಳನ್ನು ನಿಯಂತ್ರಿಸುವ ಹಿಡಿಕೆ ಎನ್ನಬೇಕು. ಈ ಜೋಡುನುಡಿಗಳು ದಿಢೀರನೆ ನಿನ್ನೆ-ಮೊನ್ನೆ ರಚನೆಗೊಂಡು ಬಂದವಂತು ಅಲ್ಲವೆ ಅಲ್ಲ! ಅವುಗಳಿಗೊಂದು ಜನ ಸಮೂಹದ ನಡುವೆ ರೂಪುಗೊಂಡ (ಇನ್ನೂ ರೂಪುಗೊಳ್ಳುತ್ತಲಿರುವ) ಒಂದು ನಿಶ್ಚಿತ ಪರಂಪರೆಯ ಕಟ್ಟು-ಕಟ್ಟಳೆ ಇದ್ದೆ ಇರುತ್ತದೆ.

ಆಧುನೀಕರಣ, ಜಾಗತೀಕರಣ ಹೊಡೆತದ ಸಿಕ್ಕಿನಲ್ಲಿ ಸಿಲುಕಿಯೂ ಇವತ್ತಿಗು ನಮ್ಮ ಹಳ್ಳಿಗರ ಬದುಕಿನ ಬಳಕೆಯ ನುಡಿಯಲ್ಲಿ ತಾಜಾತನ ಉಳ್ಳ ಗರಮ್ ಗರಮ್ ಜೋಡುನುಡಿಗಳು ನಳನಳಿಸುತ್ತ ಇರುತ್ತವೆ. ಈ ಬಗೆಯಲ್ಲಿ ಜೋಡುನುಡಿಯ ಎರಡು ಅಂಗಪದಗಳು ಒಂದರಿಂದ ಇನ್ನೊಂದು ಬಿಟ್ಟಿರಲಾರವು ಎನ್ನುವಂತೆ, ಒಂದು ಬಂದುರವಾದ, ಬಂಧ ಏರ್ಪಟ್ಟಿರುತ್ತದೆ.

ಉದಾಹರಣೆ :

"ಅಂವಾ ನಾಚಿಗಿ-ಅಬರು[೩] ಅನ್ನುದನ್ನ ಬಿಟ್ಟ ನಿಂತಾನಾ!"
"ಅಂವಾ ನಾಚಿಗಿ ಅನ್ನುದನ್ನ ಬಿಟ್ಟ ನಿಂತಾನಾ!"

ಇಲ್ಲಿ ಒಂದನೇ ವಾಕ್ಯದ ತಿರುಳಿನ ಮೊನಚು, ಕಾರವಾದ ವ್ಯಂಗ್ಯದ ತಿವಿತ, ಎರಡನೇ ವಾಕ್ಯದಲ್ಲಿ ಹೊಮ್ಮದೆಂದೆ ಹೇಳಬೇಕು. ಏಕೆಂದರೆ 'ನಾಚಿಗೆ'ಗಿಂತಲೂ ಈ ಬಾಗದಲ್ಲಿ 'ಅಬರು' (=ಗವ್ರವ, ಮರ್‍ಯಾದೆ) ಎಂಬ ಪದ ಇಲ್ಲಿಯ ಆಪ್ತ ವಲಯಕ್ಕೆ ಸೇರಿದುದಾಗಿದೆ. ಈ ಬಗೆಯಲ್ಲಿ ಕನ್ನಡ ಆಡುನುಡಿ ಒಗ್ಗಿಕೊಂಡಿದೆ. ಅಲ್ಲದೆ ಕನ್ನಡದ ಜೀವರಸ ಇರುವುದು, ಇಂತ ಬಳಕೆಯ ಜೋಡುನುಡಿಯಲ್ಲೂ ಅಡಕಗೊಂಡಿದೆ.

ಇದನ್ನೆ ಇನ್ನಷ್ಟು ತಿಳಿಗೊಳಿಸುವ ಅತವಾ ಸ್ಪಸ್ಟಗೊಳಿಸುವ ಕಾರ್‍ಯವನ್ನು ಮಾಡುವ ಇನ್ನೆರಡು ರೂಪಕಗಳಿವೆ. ಬಂಡಿ ಇಲ್ಲವೆ ಚಕ್ಕಡಿಯನ್ನು ಮುನ್ನಾಗಿಸಿಕೊಂಡು ಹೋಗುವ ಜೋಡೆತ್ತುಗಳು. ಉದ್ದೇಶಿತ ಕಾರ್‍ಯ ಚಟುವಟಿಕೆಗಳಿಗೆ ಅವು ತಮ್ಮನ್ನು ತೊಡಗಿಸಿಕೊಂಡಿರುತ್ತವೆ. ಇದಕ್ಕೆ ಆ ಎರಡು ಎತ್ತುಗಳ ಎತ್ತರ, ಹುರುಪು-ಹುಮ್ಮಸಿನ ತಾಕತ್ತು, ಹರೆಯದ ವಯಸ್ಸಿನ ಲವಲವಿಕೆ, ಇವುಗಳಲ್ಲಿ ಶಕ್ಯವಿದ್ದಸ್ಟು, ಸಮತೆಯಿಂದ ಕೂಡಿರುವುದನ್ನೆ ಕಾಣುತ್ತೇವೆ. ಇಂತು ಈ ಅಂಶ ಪಸಂದಾಗಿ (ಸ್ವಲ್ಪ ಹೆಚ್ಚು-ಕಡಿಮೆಯಾಗಿ) ಜೋಡುನುಡಿಗೂ ಹೊಂದಿಕೆಯಾಗುತ್ತದೆ.

ಇನ್ನು ಮೂರನೇ ರೂಪಕ ಜೋಡಗಾಲ್ಮರಿ ಇದು ಏಕಪದವಲ್ಲ; ಇದೊಂದು ದ್ವಿರುಕ್ತಿ ರೂಪದ ಜೋಡುನುಡಿ; ಜೋಡು. ಕಾಲ್ಮರಿ (=ಮೆಟ್ಟು, ಚಪ್ಪಲಿ) ಇವೆರಡೂ ಜೊತೆಯಾಗಿ ಬಳಕೆ ಆಗುತ್ತವೆ. ಕಾಲಿಗೆ ಹೊದಿಕೆಯಾಗಿ ಆಶ್ರಯ ನೀಡುವುದೆ

(ಕಾಲು+[ಮೊರೆ>ಮರೆ>]ಮರಿ>ಕಾಲ್ಮರಿ) ಕಾಲ್ಮರಿ ಆಗಿದೆ. ಜೊತೆ ಜೊತೆಯಾಗಿರುವುದೆ ಜೋಡು! ಈ ರೀತಿ ಕಾಲ್ಮರಿ ನುಡಿಜೋಡು ರೂಪುಗೊಂಡಿದೆ. ಈ ಕಾಲ್ಮರಿ ಮಾತ್ರ ಒಂದೇ ಗಾತ್ರ ಒಂದೇ ಆಕಾರದಲ್ಲಿ ಇರಲಾರವು. ಆದರೆ ಒಂದು ಸಂಗತಿಯನ್ನು ಮರೆಯುವಂತಿಲ್ಲ. ಜೋಡಿ ಆಗಿರುವ ಕಾಲ್ಮರಿ ದೊಡ್ಡದಿರಲಿ ಸಣ್ಣದಿರಲಿ ಎರಡೂ ಚಪ್ಪಲಿ ಜೊತೆ ಜೊತೆಯಾಗಿ ಸಂಪೂರ್ಣ ಓರಗೆಯ ಆಕಾರ ವಯಸುಳ್ಳವು, ಆಗಿರುತ್ತವೆ. ಇಲ್ಲಿ ಜೋಡುನುಡಿಯ ಎರಡೂ ಅಂಗಪದಗಳು ಬಹುತೇಕವಾಗಿ ಓರಗೆಯ [ಸಾಥಿ>ಸಾತಿ(=ಜೊತೆ)+ದಾರ>ಸಾತಿದಾರ=ಜೊತೆಗಾರ, ಒಡನಾಡಿ, ಸಂಗಾತಿ] ಸಾತಿದಾರ(ಗಳೇ) ಆಗಿರುತ್ತವೆ.

ಈ ರೀತಿ ಕೆಲವು ಜೋಡುನುಡಿಗಳು ಅಂಗಪದಗಳ ವಿಶ್ಲೇಶಣೆಗೆ ಒಳಪಡಿಸಿದಾಗ ಹೇಗೆ (ಬರೋಬರಿ>) ಬರಬರಿ ಎನ್ನುವ ರೀತಿ (ರೂಪಕಗಳಾಗಿ) ತಳುಕು-ಮಳುಕು ಹಾಕಿಕೊಂಡಿವೆ ಎನ್ನುವುದೇ ಅಚ್ಚರಿ ತರಿಸುತ್ತದೆ.

ಹಾಗೆಯೇ ಇನ್ನು ಕೊನೆಯದಾಗಿ ಈ ಆರು ನುಡಿ ಜೋಡುಗಳನ್ನು ಒಟ್ಟಿಗೆ ಆಲಿಸುತ್ತಾ, ನೋಡೋಣ.

* ಓದು-ಬರಹ (ಶಿಸ್ಟನುಡಿ)>ಒದು-ಬರಿ (ಬಾದಾಮಿ ಒಳನುಡಿ),

* ಸೋಲು-ಗೆಲುವು (ಶಿ.ನು.)>ಸೊಲು-ಗೆಲು (ಬಾ.ಒ.ನು.),

* ಗಂಡ-ಹೇಂತಿ>ಗಂಡ-ಹೆಂತಿ, (* ಸಂಗಾತಿ ಪದದೊಂದಿಗೆ ಜೊತೆಗೂಡುವಿಕೆ)

* ಕಾತೆ-ಕಿರ್ದಿ>ಕಾತೆ-ಕೀರ್ದಿ*, (* ತೇಲುವ ಉಚ್ಚಾರಣೆ)

* ಕಾಳು-ಸುಂಕ>ಕಾಳು-ದೂಳು, (ಅಲ್ಲಗಳೆವ ಪದವಾಗಿ) ಕಾಳಿಲ್ಲ-ದೂಳಿಲ್ಲ,

* ಮಾತಾಡು-ಕಾತಾಡು,

ಇವುಗಳನ್ನು ಬಿಡಿ ಬಿಡಿಯಾಗಿ ಬೇರೆ ಬೇರೆ ಸನ್ನಿವೇಶದಲ್ಲಿ ಚಿಕಿತ್ಸಕ ದ್ರುಸ್ಟಿಯಿಂದ ನೋಡಿ ಆಗಿದೆ. ಇಲ್ಲಿ ಇವನ್ನು ಒಟ್ಟಾರೆ ಕಣ್ಣನೋಟದ ಜೊತೆಗೆ ಕಿವಿ ನಾದಮಾದುರ್ಯ ಉಂಟು ಮಾಡಬೇಕೆಂಬ ಇರಾದೆ ಇಲ್ಲಿ ಮುಕ್ಯವೆನಿಸಿದೆ. ಇಲ್ಲಿ ಮೊದಲ ಮೂರು ನುಡಿಗಳಲ್ಲಿ ಸಮತೋಲನಗೊಳ್ಳಲು ಒಂದು ಕ್ರಮವನ್ನು (ಅಂದರೆ ಬೇರ್ಪಡೆ ಕ್ರಿಯೆ) ಅನುಸರಿಸಿದರೆ, ಮುಂದಿನ ಮೂರು ನುಡಿಗಳಲ್ಲಿ ಕಿವಿಯ ಆಲಾಪವನ್ನೆ ದ್ರುಸ್ಟಿಯಲ್ಲಿ ಇಟ್ಟುಕೊಂಡಂತೆ- ಎರಡನೇ ಅಂಗಪದ - ತನ್ನ ಸಂಗಾತಿ ಪದದೊಂದಿಗೆ ಮೇಳಗೂಡಿ, ಸ್ರುಸ್ಟಿ ಕ್ರಿಯೆ ಅತಿ ಮುತುವರ್ಜಿಯೊಂದಿಗೆ ಪೂರ್ತಿಗೊಳ್ಳುತ್ತದೆ.

ಇಲ್ಲೆಲ್ಲ ಸಮತೋಲನದ ಲಾಲಿತ್ಯ, ವಯ್ಚಿತ್ರ್ಯ, ವಯ್ಯರಿಗಳನ್ನೆಲ್ಲ ಹೆಡೆಮುರಿ ಕಟ್ಟಿ ರೂಪುಗೊಳಿಸಿದಂತೆ ತೋರುತ್ತದೆ. ಇದೇ ಇಲ್ಲಿ ಮತ್ತೊಂದು ವಿಸ್ಮಯಕ್ಕೆ ಕಾರಣ.

## ನುಡಿ ರೇಖಾಚಿತ್ರ-೧
## ಸಮತೋಲಿತ ಜೋಡುನುಡಿಗಳು



## ನುಡಿಚಿತ್ರ-೨

[ರೂಡಿಯ ವಾಕ್ಯ ಅತವಾ ವಾಕ್ಯಾಂಗ ಜೋಡುನುಡಿಯಾಗಿ ರೂಪುಗೊಳ್ಳುವ (೪.೩.೨.ರಲ್ಲಿ ನಮೂದಾಗಿರುವಂತೆ) ಹಲವು ಮಜಲುಗಳ ಇನ್ನಸ್ಟು ವಿವರವಾದ ರಚನೆಯ ರೂಪಗಳೊಂದಿಗೆ (ಜೋಡುನುಡಿ) ಚಿತ್ರವನ್ನು ಇಲ್ಲಿ ಕೊಡಲಾಗಿದೆ.]

೧. ಆಗ ಅಲ್ಲಿಯೋ, ಈಗ ಇಲ್ಲಿಯೋ–ವಾಕ್ಯಾಂಗ.
–ಆಗಲ್ಲಿಯೋ–ಈಗಿಲ್ಲಿಯೋ --U- / --U-
–ಆಗಲೋ–ಈಗಲೋ(ಅಡಕವಾಗಿ) -U- / -U-
–ಆಗ್ಲೋ–ಈಗ್ಲೋ (ಇನ್ನೂ ಅಡಕವಾಗಿ) -- / --
–ಆಗೊ–ಈಗೊ (ಇ.ಅ.) -U / -U
–ಆಗ–ಈಗ (ಸರ್ವಪದವಾಗಿ ಉಳಿಕೆ) -U / -U

೨. ಆಡೋಣ ಬಾ, ಕೆಡಿಸೋಣ ಬಾ, – ಪುಟ್ಟ ಪುಟ್ಟ ವಾಕ್ಯ.
–ಆಡೂಣು ಬಾ–ಕೆಡಿಸೂಣು ಬಾ : (ಅ) --U- / -U-
–ಆಡುನು ಬಾ – ಕೆಡಿಸುನು ಬಾ : (ಆ) -UU- / UUUU-
–ಆಡುನ್ಬಾ–ಕೆಡಿಸುನ್ಬಾ : (ಅ) --- / UU--
–ಆಡುಂಬಾ–ಕೆಡಿಸುಂಬಾ : (ಇ.ಅ.) --- / UU--

೩. ಒಳರಚನೆ : ೧. ಇರ್+ದ>ಇರ್ದ ಇದ್ದ+ಇರು>ಇದ್ದಿರು
ಬೀಳ್+ದ್>ಬೀಳ್ದ ಬಿದ್ದ+ಇರು>ಬಿದ್ದಿರು
(ಎರಡೂ) > ಕೂಡುಪದ

–ಇದ್ದಿರು+ಅಂತಹ>ಇದ್ದಿರುವಂತಹ (ಅಡಕವಾಗಿ) ಇದ್ದಿರುವ (=ಅಳಿಯದೆ ಉಳಿದ)
–ಬಿದ್ದಿರು+ಅಂತಹ>ಬಿದ್ದಿರುವಂತಹ (ಅಡಕವಾಗಿ) ಬಿದ್ದಿರುವ (=ಅಳಿದರೂ ಒಂದಸ್ಟು ಉಳಿದ)

ನುಡಿ ಒಳರಚನೆ :

೨. ಇದ್ದಿರುವಂತಹ, ಬಿದ್ದಿರುವಂತಹ
– ಇದ್ದಿರುವ–ಬಿದ್ದಿರುವ (ಅಡಕವಾಗಿ) -UUU / -UUU
– ಇದ್ದ–ಬಿದ್ದ ಇದ್ದ–ಬದ್ದ (ಇ.ಅ.) -U / -U

೪. ಇಲ್ಲ+ದ+ಉದು>ಇಲ್ಲದುದು, ಇರ್+ದ+ಉದು>ಇರ್ದುದು,
– ಇಲ್ಲದುದು–ಇರ್ದುದು : -UUU / -UU
– ಇಲ್ಲದ್ದು–ಇದ್ದುದು : --U / -UU
– ಇಲ್ಲದ್ದು–ಇದ್ದದ್ದು : 'ದ್ದು' ಪ್ರಾಸ --U / --U
–ಇಲ್ಲದ್ದ–ಇದ್ದದ್ದ : 'ದ್ದ' ಪ್ರಾಸ --U / --U

(ಇರು<) ಇದ್ದ (ಬೂತ ನ್ಯೂಸ ರೂಪ)+ವ+ಅರು>ಇದ್ದವರು, ಹಾಗೆಯೇ 'ಇಲ್ಲದವರು' ರೂಪವೂ

೫. –ಇದ್ದವರು–ಇಲ್ಲದವರು : -UUU / -UUUU
– ಇದ್ದವ್ರು–ಇಲ್ಲದವ್ರು --U / -U-

– ಇದ್ದವ್ರು-ಇಲ್ಲವ್ರು : --U / --U
೬. (ಏಳು<) ಎದ್ದು (ಬೂ.ನ್ಯೂ.ರೂ.)+ಇರು>ಎದ್ದಿರು, ಬಿದ್ದಿರು-ಕೂಡುಪದಗಳು ಎದ್ದು+ಇದ್ದ>ಎದ್ದಿದ್ದ+ಏನೆ (ಆಕ್ಯಾತ ಪ್ರತ್ಯಯ)+ಓ(ಯೋ) ಬಾವಸೂಚಕ ಅಕ್ಷರ>ಎದ್ದಿದ್ದೇನೆಯೋ
-ಎದ್ದಿದ್ದೇನೋ, ಬಿದ್ದಿದ್ದೇನೆಯೋ, – ಎಂಬ (ಖಬರು<) ಕಬರು(=ಅರಿವು, ಎಚ್ಚರ) ಇಲ್ಲದೆ-ವಾಗ್ರೂಪಗಳು.
-ಎದ್ದಿದ್ದೇನೋ ಬಿದ್ದಿದ್ದೇನೆಯೋ
-ಎದ್ದೆನೋ-ಬಿದ್ದೇನೋ : (ಅಡಕವಾಗಿ) -U- / -U-
-ಎದ್ದ್ನೋ-ಬಿದ್ದ್ನೋ : (ಅ) -- / --
-ಎದ್ದೊ-ಬಿದ್ದೊ : (ಅ)-U / -U
-ಎದ್ದು-ಬಿದ್ದು : (ಅ) -U / -U
೭. ಬೇಕು+ಆಗು>ಬೇಕಾಗು(ಕೂಡು ಪದ), ಬೇಡು+ಆಗು> ಬೇಡವಾಗು< ಬೇಡಾಗು< ಬ್ಯಾಡಾಗು (ಕೂ.ಪ.) ಬೇಕಾದ (ಬೂತನ್ಯೂನ ರೂಪ), ಬೇಡವಾದ (ಬೂತನ್ಯೂನ ರೂಪ)
-ಬೇಕಾದುದು, ಬೇಡವಾದುದು, --UU / -U-UU
-ಬೇಕಾದ್ದು-ಬೇಡವಾದ್ದು : 'ದ್ದು' ಪ್ರಾಸ --U / -U-U
-ಬೇಕಾದ್ದ*-ಬ್ಯಾಡಾದ್ದ* : 'ದ್ದ' ಪ್ರಾಸ --U / --U [* ತೇಲು ಉಚ್ಚಾರಣೆ]
-ಬೇಕಾದ್-ಬ್ಯಾಡಾದ್ : 'ದ್' ಪ್ರಾಸ -- / --
೮. (ಹೊಯ್<)ಹೊಯ್ದು (ಬೂ.ನ್ಯೂ.ರೂ.)+ಕೊಳ್ಳು>ಹೊಯ್ದುಕೊಳ್ಳು, ಬಡಿದುಕೊಳ್-ಕೂಡುಪದಗಳು.
-ಹೊಯ್ದುಕೊಳ್ಳು+ವ+ಉದು>ಹೊಯ್ದುಕೊಳ್ಳುವುದು, ಬಡಿದುಕೊಳ್ಳುವುದು-ಕ್ರಿನ್ನಾಮರೂಪಗಳು.
-ಹೊಯ್ದುಕೊಳ್ಳುವುದು-ಬಡಿದುಕೊಳ್ಳುವುದು. -U-UUU / UUU-UUU
-ಹೋಕೊಳ್ಳೂದು-ಬಡಕೊಳ್ಳುದು: (ಅ) ---U / UU--U
-ಹೋಕೊಳ್ಳುದು-ಬಡಕೊಳ್ಳುದು : (ಅ) --UU / UU-UU
-ಹೋಕೋ-ಬಡಕೋ : (ಅ) -- / UU-
-ಹೋಕೋ-ಬಡ್ಕೋ : (ಅ) -- / --
೮. ಅ.ಅಳುವುದು-ಕರೆಯುವುದು UUUU/UUUUU
-ಅಳೂದು-ಕರೂದು : (ಅ) U-U / U-U
-ಅಳುದು-ಕರುದು : (ಅ) UUU / UUU

■

## ಅಡಿಟಿಪ್ಪಣಿಗಳು

೧. ಅ) "ಪೂರ್ವಾಚಾರ್ಯರ್ ಒಲ್ದು ಕನ್ನಡದೊಳ್ ಖಂಡ ಪ್ರಾಸಮನ್ ಅತಿಶಯಮನ್ ಇದು ಎಂದು ದೇಸಿಯನೆ ನಿರಿಸಿ....."

– ಕವಿರಾಜಮಾರ್ಗ ೧–೭೫ (ನಮ್ಮ ಹಿಂದಿನ ಹಿರಿಯ ಶಾಸ್ತ್ರಕಾರರು ಪ್ರಾಸ ಎನ್ನುವುದೇ ಕನ್ನಡಕ್ಕೆ ವಿಶಿಶ್ಟವಾದುದು, ಎಂದು ದೇಸಿ ಅಂಶವನ್ನೆ ಉಳಿಸಿಕೊಂಡರು.)

ಆ) "ಅತಿಶಯಮ್+ಈ ಕನ್ನಡಕ್ಕೆ ಸತತಂ ಪ್ರಾಸಂ"

(ಪ್ರಾಸ ಎನ್ನುವುದು ಕನ್ನಡದಲ್ಲಿ ವಿಶಿಶ್ಟ ಮತ್ತು ನಿರಂತರವಾದುದು.)

ನಮಗೆ ದೊರೆತ ಮೊಟ್ಟ ಮೊದಲ ಪುಸ್ತಕವೂ ಅಹುದು. ಕನ್ನಡ ಬಾಶೆಯ ಚಲನಾತ್ಮಕ ಗತಿಯ ಹೆಜ್ಜೆ ನಿಸದವನ್ನು ಗುರುತಿಸಿದವನೂ ಶ್ರೀ ವಿಜಯನೆ. ಅದರಲ್ಲೂ ಜೋಡುನುಡಿಗೆ ಸಂಬಂದಿಸಿದಂತೆ ಮಾತನಾಡುವಾಗ ಈ ಪ್ರಾಸದ ವಿಶಯ ಮತ್ತಸ್ಟು ಅರ್‍ತವಂತಿಕೆಯನ್ನು ಪಡೆಯುವಂತಾಗಿದೆ. ಇವತ್ತಿಗೂ ಈ ಪ್ರಾಸ ತನ್ನ ಲಾಲಿತ್ಯ, ಸುಬಗತೆ ಮತ್ತದರ ವಯ್ಯಾರಿಯನ್ನು ಉಳಿಸಿಕೊಂಡೆ ಬರುತ್ತಿದೆ.

೨. ಈ ಜೋಡುನುಡಿಗಳಿಗೆ ಒಂದು ಜನಪದ ಪರಂಪರೆಯ ರೂಡಿ, ಸಂಪ್ರದಾಯ ಇದ್ದೆ ಇದೆ. ಆದರೆ ಈ ಪರಂಪರೆ ಎಸ್ಟು ಪ್ರಾಚೀನ ಎಂದಾಗ ಅದನ್ನು ಗೆರೆ ಕೊರೆದು ಹೇಳುವ ರೀತಿ ಉತ್ತರಿಸಲಾಗದು. ಇಸ್ಟಾದರೂ ಈ ಜೋಡುನುಡಿಗೆ ಪ್ರಾಚೀನತೆಯ ಇತಿಹಾಸ (?) ಇರುವುದಂತು ನಿಜ.

ಅರಮನೆಗೆ ಸೀಮಿತವಾದ ಸಾಹಿತ್ಯ, ಒಮ್ಮೆ ಅದರಿಂದ ಹೊರಬಂದು, ಜನಮುಕಿ ಆಗುವ ರೀತಿ ಜನಪರ ಕಾಳಜಿ ಹೊಂದಿ ಆಡುಬಾಶೆಯತ್ತ ಮುಕದಿರುಹಿದಾಗ, ಬಕುತಿ ಪಂತದ ಸಾಹಿತ್ಯವಾಗಿ ಗಮಗಮಿಸುತ್ತ ಅರಳತೊಡಗಿತು. ಆಗ ಆಡುಬಾಶೆಯ ಅನಿವಾರ್‍ಯ ಅಂಗವೆನಿಸಿದ ಜೋಡುನುಡಿಗಳು ಆಗಾಗ ಅಲ್ಲೊಂದು–ಇಲ್ಲೊಂದು ಇಣುಕತೊಡಗಿದವು.

ಅದರಲ್ಲೂ ವಯ್ಚಾರಿಕ ಬಕುತಿ ಸಾಹಿತ್ಯವಾದ ಶರಣರ ವಚನಗಳು, ಬಾವನಾತ್ಮಕ ಬಕುತಿ ಸಾಹಿತ್ಯವಾದ ದಾಸರ ಕೀರ್‍ತನೆಗಳೇ ಸಾಕ್ಶಿ ಆಗಿವೆ. ಈ ಕುರಿತು ಟಿ. ವಿ. ವೆಂಕಟಾಚಲಶಾಸ್ತ್ರಿ ಅವರ ಶಾಸ್ತ್ರೀಯ ಸಂಪುಟ–೧ ರಲ್ಲಿ "ಕನ್ನಡದ ಯಮಳ ಶಬ್ದಗಳು" ಎಂಬ ಬರಹವನ್ನು ಗಮನಿಸಬೇಕು.

೩. ೭ನೇ ಶತಮಾನದ ಬಾದಾಮಿಯ ಕಪ್ಪೆ ಅರಬಟ್ಟ ಶಾಸನದ ಕೊನೆಯ ಸಾಲೊಂದರಲ್ಲಿ ವಾಗ್ರೂಡಿ ಬಳಕೆ ಆಗಿರುವುದು ಕಾಣಿಸಿಕೊಳ್ಳುತ್ತದೆ. ಇಂತ ವಾಗ್ರೂಡಿ ಕ್ರಮೇಣ ಅಡಕಗೊಂಡು ಜೋಡುನುಡಿ ಆಗಿ, ರೂಪುಗೊಳ್ಳುವ ಸಾದ್ಯತೆ [ನೋಡಿ : ೪.೩.–೪(ಅ)] ಇದೆ, –ಎಂದು ಈಗಾಗಲೆ ಗಮನಿಸಿ ಆಗಿದೆ.

೪. ಸತ್ತರೆ–ಕೆಟ್ಟರೆ>ಸತ್ತರ–ಕೆಟ್ಟರ<ಸತ್ರ–ಕೆಟ್ರ–ಈ ನುಡಿ ರಚನೆ ಕುರಿತು ಒಂದು ಗಮನಿಕೆ.

ಅ) "ಇಲ್ಲಿ 'ಅರೆ' ಪ್ರತ್ಯಯದ ಹಿಂದಿನ ರೂಪಗಳೆ 'ಅಡೆ', 'ಒಡೆ' ಎನ್ನಬೇಕು."

ಕನ್ನಡ ಬಾಶಾ ವ್ಯಾಸಂಗ, ಸಂಗಮೇಶ ಸವದತ್ತಿಮಠ ಮೊ.ಮು. ೨೦೦೩. ಪುಟ : ೧೬೪.

ಆ) 'ಎನ್ನಯ ದೂಸರಿಂ ಪತಿ ಸತ್ತೊಡೆ.....' ಸತ್ತೊಡೆ ಎಂಬ ಕ್ರಿಯಾರೂಪ ಹಿಂದಿನ ಸಮಯದ ಘಟನೆಯನ್ನು ಸೂಚಿಸುವುದಿಲ್ಲ. ಆ ವಾಕ್ಯವನ್ನಾಡಿರುವ ಸಮಯದ ನಂತರ ನಡೆಯಬಹುದಾದ (ಬವಿಶ್ಯತ್ ಕಾಲದ) ಗಳಿಗೆಯೊಂದನ್ನು ಮಾತ್ರವೇ ಅದು (ಷರತ್ತಾಗಿ>) ಶರತ್ತಾಗಿ ಸೂಚಿಸುತ್ತದೆ.

ಪುಸ್ತಕ : 'ಕನ್ನಡ ನುಡಿಯ ಬಗೆಗೆ ಚಿಂತನೆ', ಡಿ.ಎನ್.ಎಸ್.ಭಟ್. ಮು : ೨೦೦೬. ಪು : ೧೧೭

೪. ಇನ್ನೊಂದು (ಮುಖ) ಮುಕದಿಂದಲೂ ಜೊತೆ ಜೊತೆಯಾಗಿ ನಡೆಯುವ ವಿನಿಮಯ ಕ್ರಿಯೆಯನ್ನೆ ಸಹಜವಾಗಿ ಶಿಸ್ಟ ಕನ್ನಡದಲ್ಲಿ 'ಕೊಡು-ಕೊಳು' ಎಂಬ ಜೋಡುನುಡಿಯನ್ನು ಬಳಸಲಾಗುತ್ತದೆ. ಇದು ಒಂದು ರೀತಿ 'ಕೊಡುವುದು-ತೆಗೆದುಕೊಳ್ಳುವುದು' ಎನ್ನುವ ಕ್ರಿಯಾ ಚಟುವಟಿಕೆಯ ಅಡಕ ರೂಪವೇ ಜೋಡುನುಡಿ ಆಗಿದೆ. ಇದರ ಒಳರಚನೆ ರೂಪುಗೊಂಡದ್ದು ಹೀಗೆ.

ಕೊಡುವುದು-ತೆಗೆದುಕೊಳ್ಳುವುದು>ಕೊಡು-ಕೊಳ್ಳು>ಕೊಡು-ಕೊಳು-ಶಿಸ್ಟ ರೂಪವಾಗಿ ಬಳಕೆ.

ಈ ಚಟುವಟಿಕೆಯ ಕ್ರಿಯೆಯು ಬಾದಾಮಿ ಒಳನುಡಿಯಲ್ಲಿ ಈ ಬಗೆಯದಾದ ರೂಪ ಪಡೆಯುತ್ತದೆ.

– ಕೊಡುವುದು (ಕ್ರುನ್ನಾಮ)+ತೆಗೆದುಕೊಳ್ಳು (ಕೂಡುಪದ)ವುದು.

– 'ತೆಗೆದುಕೊಳ್ಳು' ಎಂಬುದರ ಅಡಕರೂಪ 'ತಗೊ/ತೊಗೊ'ಎಂಬ ಎರಡೂ ರೂಪಗಳೂ ಚಾಲ್ತಿಯಲ್ಲಿ ಇವೆ.

– ಕೊಡು-ತಗೊ>ಕೊಡು-ತೊಗೊ UU/UU ಆದಿಪ್ರಾಸ ಸ್ವರ ಸಮರೂಪಗೊಂಡಿದೆ.

– ತೆಗೆದುಕೊಳ್ಳು (ಕೂಡುಪದ)<(ಬಾದಾಮಿ ಒಳನುಡಿಯ ರೂಪ) ತೆಗೆದುಕೊ<ತಗೊ/ತೊಗೊ

ಈ ತೆರನಾದ ಕೂಡುಪದಗಳ ಕುರಿತು ಇನ್ನಸ್ಟು ವಿವರಣೆಗೆ ನೋಡಿ.

ಲೇ : 'ಕನ್ನಡದಲ್ಲಿ ಕೂಡುಪದಗಳು',

ಪುಸ್ತಕ : ಅರ್ದವಾರ್ಶಿಕ ಪತ್ರಿಕೆ, ಕರ್ನಾಟಕ ಲೋಚನ, ಜುಲಯ್-ಡಿಸೆಂ. ೨೦೧೪.

೫, ೬. ಅಯ್ತಿಹಾಸಿಕ ಕಾಲಚಕ್ರದ ಉರುಳುವಿಕೆಯಲ್ಲಿ ಕನ್ನಡಿಗರು ಏರೆತ್ತರದ ಅರಸೊತ್ತಿಗೆಯ (ಸಮ್ರುದ್ದ, ವಯ್ಬವದ) ಕಾಲವನ್ನು (ಸುಮಾರು ೫ನೇ ಶತಮಾನದಿಂದ ಹಿಡಿದು ವಿಜಯನಗರ ಅರಸರ ಕಾಲ ಅಂದರೆ ೧೫ನೇ ಶತಮಾನದವರೆಗೆ) ಅನುಬವಿಸಿದರೆ ಕ್ರಮೇಣ ೧೬, ೧೭ ಮತ್ತು ೧೮ನೇ ಶತಮಾನಗಳಲ್ಲಿ (ಶಿವಾಜಿ ಕಾಲದ) ಮರಾಟರು, ಪೇಶ್ವೆಗಳು ಪ್ರಬಲರಾದರು. ಹೀಗೆ ಕಳೆದು ಹೋದ ಇತಿಹಾಸಕ್ಕೂ, ಸಾಂಸ್ಕೃತಿಕ ಬದುಕಿನ ಇತಿಹಾಸಕ್ಕೂ ತಳುಕು-ಮಳುಕು ಹಾಕಿಕೊಳ್ಳುವ ಕೆಲವು ಸಂಗತಿಗಳಿವೆ. ಇಂತು ದಬ್ಬಾಳಿಕೆಯಿಂದ ಕೂಡಿದ ಮರಾಟರ ಪ್ರಾಬಲ್ಯದ ಕಾಲದಲ್ಲಿ ಮರಾಟರ ಸಂಸ್ಕ್ರುತಿ, (ಕೆಲವೊಮ್ಮೆ ಬಲವಂತದಿಂದ) ಬಾಶಾ ಪ್ರಬಾವ, ಪ್ರಹಾರ ಕನ್ನಡಿಗರ ಮೇಲಾಯಿತು.

ಇದರಿಂದ ಸಂಸ್ಕ್ರುತಿ, ಬಾಶೆಗಳೆರಡರ ನಡುವೆ ಕೊಡು-ಕೊಳುಗೆ ಇಮ್ಮುಕವಾಗಿ ನಡೆಯಿತೆನ್ನಬೇಕು. ಆಗ ವಿರಳವಾಗಿ ಕನ್ನಡದಿಂದ ತೆಗೆದುಕೊಂಡ ಕೆಲವೇ ಕೆಲವು ನುಡಿಗಳು ಮರಾಟಿ ಬಾಶಾ ದ್ವನಿ ವ್ಯವಸ್ತೆಗೆ ಅನುಸಾರ ಹೊಂದಿಕೊಂಡಿದ್ದವು. ಅವುಗಳಲ್ಲಿ 'ಕಾಲು-ಮೇಲು> ಗಾಲ-ಮೇಲ>ಗಾಳ-ಮೇಳ ಎನ್ನುವದು ಒಂದಾಗಿದೆ.

೭. 'ಚಕ್ಕ'ಳ-ಮುಕಳಿ'ಯು ಆರಾಮಾಗಿ ಕುಳಿತುಕೊಳ್ಳುವ ಬಂಗಿ ಎನ್ನಬೇಕು. ಇದನ್ನು ಸರಿಯಾಗಿ ತಿಳಿಯದವರು ಇದೊಂದು ರೀತಿಯ 'ಪದ್ಮಾಸನ' ಎಂದು ಹೇಳುವವರೂ ಇದ್ದಾರೆ. ಆದರೆ ಅದಕ್ಕೂ ಇದಕ್ಕೂ ಇರುವ ವ್ಯತ್ಯಾಸವೆಂದರೆ, ಯಾವ ಆಯಾಸವೂ ಇಲ್ಲದೆ ಕುಳ್ಳಿರುವ, ಬಂಗಿ, 'ಚಕಳಿ-ಮುಕಳಿ'. ಆದರೆ ಪದ್ಮಾಸನದ ಬಂಗಿ ಸ್ವಲ್ಪ ನಮ್ಮ ಯತ್ನವನ್ನು ಬಯಸುತ್ತದೆ. ಕುಳಿತುಕೊಳ್ಳುವಾಗ ಬಲಗಾಲು ಮೇಲ್ಮುಕವಾಗಿರುತ್ತದೆ. ಅದೇ ರೀತಿ ಎಡಗಾಲನ್ನು ನಮ್ಮ ಪ್ರಯತ್ನದಿಂದ ಅಂದರೆ ಕಯ್ಯಿಂದ ಮೇಲೆತ್ತಿ ಇಟ್ಟುಕೊಳ್ಳಬೇಕಾಗುತ್ತದೆ. ಹೀಗೆ 'ಪದ್ಮಾಸನ'ದಲ್ಲಿ ಕಾಲುಗಳೆರಡೂ ಮೇಲ್ಮುಕವಾಗಿದ್ದರೆ, 'ಚಕಳಿ-ಮುಕಳಿ'ಯ ಬಂಗಿಯಲ್ಲಿ ಕಾಲುಗಳೆರಡು ಒಳಮುಕವಾಗಿರುತ್ತವೆ. ಈ ಬಂಗಿ ಕುಳ್ಳಿರಲು ಸಲೀಸು, ಮೇಲೇಳಲು ಸಲೀಸು!

೮. ದ್ರಾವಿಡ ಬಾಶೆಗಳಲ್ಲಿ ಒಂದಾದ ಕನ್ನಡವನ್ನು ಸಂಸ್ಕೃತದಿಂದ ಹುಟ್ಟಿದೆ ಎಂದು. ನಂಬಿದವರು ನಾವು. ಇದು ಬರೀ ನಂಬಿಕೆ ಅಸ್ಟೆ. ಇದರಲ್ಲಿ ಸತ್ಯಾಂಶದ ಹುರುಳಿಲ್ಲ. ಆ ನಂಬಿಕೆ ಎಸ್ಟು ಆಳವಾಗಿ ಬೇರೂರಿದೆ ಎಂದರೆ, ಅದರಿಂದ ಬಿಡಿಸಿಕೊಂಡು ಆಲೋಚಿಸಲು ನಮಗೆ ಸಾದ್ಯವಾಗದೆ ಇರುವುದು, ಕನ್ನಡ ಬಾಶಾ ಇತಿಹಾಸದ ಒಂದು ದುರಂತದ ಕತೆ. ನಮ್ಮಲ್ಲಿ ಪ್ರಗತಿಪರ ಬಾಶಾ ಪಂಡಿತರು ಬಡ್ಕೊಂಡು ಬಡ್ಕೊಂಡು ಅಲವತ್ತುಕೊಂಡರೂ ನಾವೆಲ್ಲ ಕುರಿಗಳಂತೆ ಸಾಗುತ್ತಿರುವುದು, ಮತ್ತೊಂದು ದುರಂತ!!

ಆದರೂ ಈ ಕುರಿತು ಮೊದಲಿಗೆ ಬೆಳಕು ಚೆಲ್ಲುತ್ತ, ಕನ್ನಡದ ವಿಶಿಸ್ಟ ಪದ ರಚನೆಯಲ್ಲಿ 'ಕೂಡುಪದ' ಗಳೆಂದು ಹೆಸರನ್ನು ಕೊಟ್ಟು ಗುರುತಿಸಿದವರೆಂದರೆ ಡಿ. ಎನ್. ಶಂಕರಭಟ್ ಅವರು. ಈ ಕೂಡುಪದಗಳನ್ನೆ ನಾನು ಮತ್ತೊಂದು ದ್ರುಸ್ಟಿಕೋನದಿಂದ ನೋಡುವ ಮೂಲಕ ಆ ಕೂಡುಪದದ ಮತ್ತೊಂದು ಮಗ್ಗುಲಿನ ವಿಶಿಸ್ಟತೆಯನ್ನು ಗುರುತಿಸಲು ಪ್ರಯತ್ನಿಸಿದ್ದೇನೆ.

ನೋಡಿ, ನನ್ನ ಲೇಕನ "ಕನ್ನಡದಲ್ಲಿ ಕೂಡುಪದಗಳು" 'ಲೋಚನ' ಅರ್ದವಾರ್ಶಿಕ ಪತ್ರಿಕೆ ೨೮-೨, ಜುಲೈ, ಡಿಸೆಂಬರ ೨೦೧೪.

೯. 'ತಾಬಡ-ತೋಬ್ ಎಂಬ ಮರಾಟಿ ಜೋಡುನುಡಿ ರೂಪ ಕನ್ನಡಕ್ಕೆ ಆಗಮಿಸಿದಾಗ ಉಚ್ಚಾರಣೆ ದ್ರುಸ್ಟಿಯಿಂದ ಪ್ರಾಸ ಪೂರ್ಣಗೊಳ್ಳುವ ಹಾಗೆ ಪರಿವರ್ತನೆಗೊಳ್ಳುತ್ತದೆ.

(ಮರಾ.) ತಾಬಡ-ತೋಬ್>(ಕನ್ನಡ) ತಾಬಡ-ತೋಬಡ

ಇಲ್ಲಿ ನಾವು ಇನ್ನಸ್ಟು ಸಂಗತಿಯ ಕುರಿತು ಮಾತನಾಡಬೇಕಿದೆ. ಈ ಜೋಡುನುಡಿಗಳ 'ಕೊಡು-ಕೊಳು'ಗೆ ಕನ್ನಡ ಮರಾಟಿ, ಕನ್ನಡ ಸಂಸ್ಕೃತ, ಕನ್ನಡ ಹಿಂದಿ ಮತ್ತು ಕನ್ನಡ ಉರ್ದು, ಇವುಗಳ ನಡುವೆ ನಡೆದಿರುವುದು ಕಂಡುಬರುತ್ತದೆ. ಅವುಗಳಲ್ಲಿ ಮರಾಟಿಯಿಂದ ಬಂದ ಜೋಡುನುಡಿಗಳಲ್ಲಿ ಇದೂ ಒಂದು. ಈ ಜೋಡುನುಡಿಗಳು ಎಲ್ಲಿಂದಲೆ ಬರಲಿ, ಅವು ಕನ್ನಡದಲ್ಲಿ ಮಾತ್ರ ಸಾದ್ಯವಾದಸ್ಟು ಪ್ರಾಸ ಬದ್ದತೆಯನ್ನು ಹೊಂದುವುದು, ಕನ್ನಡದ ವಿಶಿಸ್ಟ ಲಕ್ಶಣವೆಂದೇ ಹೇಳಬೇಕು.

ತಾಬಡ-ತೋಬ್>ತಾಬಡ-ತೋಬಡ-ಅಂತ್ಯಾಕ್ಕರ ಪ್ರಾಸ (ಪೂರ್ತಿಗೊಂಡಿದೆ.)

ಬಿಲ್-ಕೂಲ್ (ಹಿಂದಿ)>ಬಿಲ್-ಕುಲ್-ಎರಡನೇ ಅಂಗಪದದ ಆದಿ ಗಿಡ್ಡಸ್ವರವಾಗಿದೆ.

ಅಂತೆಯೇ ಒಂದು ಮರಾಟಿಯಿಂದ (ತಾಬಡ್-ತೋಬ್), ಇನ್ನೊಂದನ್ನು ಹಿಂದಿಯಿಂದ (ಬಿಲ್-ಕೂಲ್) ತೆಗೆದುಕೊಂಡಿದ್ದೇವೆ. ಇದೇ ರೀತಿ ಇಲ್ಲಿ ಅಗತ್ಯವಾಗಿ ಹೇಳಬೇಕಿರುವ ಮೂರನೇ ನುಡಿಯಲ್ಲಿ (ಕೊಮಣಗಿ-ಕಡಚಿ) ಒಂದೇ ಒಂದು ಪದ ಮಾತ್ರ (ಎರಡನೇ ಅಂಗಪದ) ಮರಾಟಿಯಿಂದ ಆಗಮನವಾಗಿದೆ. ಇಸ್ಟಾದರೂ ಕನ್ನಡದ ದ್ವನಿ ವ್ಯವಸ್ತೆಗನುಸಾರ ಅಂದರೆ ಕನ್ನಡತನವನ್ನು ಬಿಂಬಿಸುವ ಹಾಗೆ ಪ್ರಾಸಾನ್ವಯಗೊಳಿಸಿ, ಬರಮಾಡಿಕೊಳ್ಳಲಾಗಿದೆ. ಈ ಉದಾಹರಣೆಗಳನ್ನೆ ನೋಡಿ.

೧. -ತಾಬಡ-ತೋಬ್> -UU / -
(ಮರಾಟಿ ಮೂಲರೂಪ)
-ತಾಬಡ-ತೋಬಡ -UU/-UU 'ಡ' ಅಂತ್ಯಪ್ರಾಸ (ಡ-ಸೇರ್ಪಡೆಯ ಸಮತೋಲನ)
(ಬದಲಾದ ಕನ್ನಡ ರೂಪ)

೨. -ಕೋಣಬಿಗೆ-ಕಡಚಿ ಕೋಣಬಿಗೆ-ಕಡಚಿಗೆ<(ಬಾದಾಮಿ ಒಳನುಡಿ) ಕೊಣಮಿಗಿ-ಕಡಚಿಗಿ
(ಕ.) - (ಮರಾ) (ಮೂಲಪದ ರೂಪ)
-ಕೊಣಮಿಗಿ-ಕಡಚಿ> UUUU / UUU

-ಕೊಣಮಿಗಿ-ಕಡಚಿಗಿ UUUU / UUUU 'ಗಿ' ಅಂತ್ಯಪ್ರಾಸ (ಸೇರ್ಪಡೆಯ ಸಮತೋಲನ)

೩. -ಬಿಲ್-ಕೂಲ್ (ಹಿಂ.) -/- (ಅಕ್ಕರ ಮಾಪನ) ಗಿಡ್ಡಕ್ಕರ+ವ್ಯಂಜನಾಕ್ಕರ/ಉದ್ದಕ್ಕರ+ವ್ಯಂಜನಾಕ್ಕರ

-ಬಿಲ್-ಕುಲ್ (ಕ.) -/- ಗಿಡ್ಡಕ್ಕರ+ವ್ಯಂಜನಾಕ್ಕರ/ಗಿಡ್ಡಕ್ಕರ+ವ್ಯಂಜನಾಕ್ಕರ

ಒಟ್ಟಾರೆ ಈ ಜೋಡುನುಡಿಗಳು ಎರವಲಾಗಿ ಎಲ್ಲಿಂದಲೆ ಬರಲಿ, ಅವು ಕನ್ನಡದಲ್ಲಿ ಮಾತ್ರ ಶಕ್ಯವಿದ್ದಸ್ಟು ಪ್ರಾಸ ಬದ್ಧತೆಯನ್ನು ಹೊಂದುವುದು ಕನ್ನಡದ ವಿಶಿಸ್ಟ ಲಕ್ಕಣ ಎನಿಸಿದೆ.

೯* 'ಕಡಚಿಗಿ' ಪದದ ಹುಟ್ಟು, ಹರಹನ್ನು ಗಮನಿಸೋಣ (ಕಡಚೀ/ಕಡಚಿ-ಮರಾ)

ಹರವು - ಉತ್ತರ ಕರ್ನಾಟಕದ (ಜೋಳದ) ರೊಟ್ಟಿ ತಯಾರಿಕೆಯಲ್ಲಿ ಬಹು ಮುಕ್ಯ ಸಲಕರಣೆಗಳಲ್ಲಿ ಒಂದು ಈ 'ಕಡಚಿಗಿ'

(ಕೊಮಣೆಗಿ-ಕಡಚಿ>ಕೊಮಣೆಗಿ-ಕಡಚಿಗಿ)

ಬೆಳಗಾವಿ ಪರಿಸರ - ಕಡಚಿ, ಕಡಚಿಗಿ, ಮುಗುಚು ಕಟಿಗಿ, ಕಡತಾರ ರೂಪಗಳಿವೆ.

ವಿಜಯಪುರ ವಲಯ - ಕಡಚಿಗಿ

ಗುಲ್ಬರ್ಗ ವಲಯ - 'ಕಡಚಗಿ'

ರಾಯಚೂರು ವಲಯ - ಕಡಚಿಗಿ, ಇದರೊಂದಿಗೆ 'ಚುಚಕ' ಎಂಬ ಪದ ಬಳಕೆಯೂ ಇದೆ.

ಬಾದಾಮಿ ಪರಿಸರ - ರೊಟ್ಟಿ ಕಟಿಗಿ, ಮುಗುಚು (ಸಮರೂಪ ಪಡೆದಿದೆ) ಕಟಿಗಿ. ಇಸ್ಟಾದರೂ ಹಾರುವರು ಮಾತ್ರ (ಎಲ್ಲೆ ಇದ್ದರೂ) ಕಡಚಿ, ಕಡಚಿಗಿ ಎಂಬ ರೂಪಗಳೆರಡನ್ನೆ ಬಳಸುತ್ತಾರೆ.

ಈ ವಿಶಯಕ್ಕೆ ಸಂಬಂದಿಸಿ ಇನ್ನು ಹೆಚ್ಚಿನ ವಿವರಣೆಗಾಗಿ ಈ ಪುಸ್ತಕಗಳನ್ನು ಗಮನಿಸಿ.

೧. ಬಾಂಧವ್ಯ (ಕನ್ನಡ-ಮರಾಠಿ)

ಸಂಪಾದನೆ : ರಾಜಶೇಖರ ಇಚ್ಚಂಗಿ, ಕನ್ನಡ ಜಾಗೃತಿ ಪುಸ್ತಕ ಮಾಲೆ -೩೩, ಚಿಂಚಣಿ, ಚಿಕ್ಕೋಡಿ, ಜಿ. ಬೆಳಗಾವಿ.

೨. ಭಾಷಿಕ ಬೃಹತ್ ಕರ್ನಾಟಕ - ಡಾ. ಎಂ. ಚಿದಾನಂದಮೂರ್ತಿ, ಸಪ್ನ ಬುಕ್ ಹೌಸ್, ಬೆಂಗಳೂರು.

೯** - ಓದು-ಬರಹ>ಒದು-ಬರಿ

ಇಲ್ಲಿಯ 'ಒದು-ಬರಿ' ಎಂಬ ನುಡಿಜೋಡು ಮೇಲ್ನೋಟಕ್ಕೆ ಕ್ರಿಯಾದಾತು ಎನಿಸೀತು!

ಇರಬಹುದಾದ ರಚನೆ ಇಂತಿದೆ.

(ಒದು+ಉ+ಉದು>) ಒದೂದು - (ಬರಿ+ಉ+ಉದು>) ಬರಿಯೂದು

ಓದೂದು-ಬರಿಯೂದು>ಒದುದು-ಬರಿಯುದು-ಕ್ರುನ್ನಾಮ

ಈ ಕ್ರುನ್ನಾಮವೇ ಅಡಕಗೊಂಡು 'ಒದು-ಬರಿ' ಆಗಿದೆ.

-ಓದು-ಬರಹ : (ಶಿಸ್ಟ ಬಾಶೆ) ನಾಮರೂಪ

-ಒದು(ದು)-ಬರಿ(ಯುದು) : (ಆಡುಬಾಶೆ) ಕ್ರುನ್ನಾಮ ರೂಪ

೧೦. ಕನ್ನಡ ಇನ್ನೊಂದು ವಿಶಿಷ್ಟ ಲಕ್ಷಣವೆಂದರೆ ಮೂಲ ಕನ್ನಡ ಪದಗಳಲ್ಲಿ ಜಗಣ ವಿನ್ಯಾಸ ಇಲ್ಲದೆ ಇರುವುದು. ಹಾಗೇನಾದರು ಆ ವಿನ್ಯಾಸದ ಪದಗಳು ಕನ್ನಡದಲ್ಲಿ ಕಂಡು ಬಂದರೆ ಅವು ಅನ್ಯಬಾಶೆಯಿಂದ ಎರವಲು ಪಡೆದ ಪದಗಳೆಂದೆ, ನಾವು ತಿಳಿಯಬೇಕಾಗುತ್ತದೆ. ಅನ್ಯಬಾಶೆಯಿಂದ ಬರಮಾಡಿಕೊಂಡ ಜಗಣ ವಿನ್ಯಾಸದ ಪದಗಳು ಬಳಕೆಯಲ್ಲಿ ನಿಕಟ ಸಂಪರ್ಕ ಏರ್ಪಟ್ಟಂತೆಲ್ಲ ಅವುಗಳ ವಿನ್ಯಾಸದಲ್ಲಿ ಬದಲುಗೊಳ್ಳುವ ಸಾಧ್ಯತೆಗಳೆ ಹೆಚ್ಚು, ಅವುಗಳಲ್ಲಿ ಈ ನುಡಿಯ (ಕೋರ್ಟು-ಕಚೇರಿ) ಎರಡನೇ ಅಂಗಪದವಾದ ಕಚೇರಿ<ಕಚೆರಿ ಎಂದು ಬದಲಾಗುವುದುಂಟು.

೧೦* 'ಹುಮ್ಮಸ್ಸು' ಎಂಬ ರೂಪವು (ಅಲ್ಪ-ಸ್ವಲ್ಪ ಎನಿಸಿದ) ಬೇರೆ ಬೇರೆ ಉಚ್ಚಾರಣೆಯ ಪದರುಗಳೊಂದಿಗೆ ಬೇರೆ ಬೇರೆ ಪರಿಸರದ ಹಂತಗಳಲ್ಲಿ ಬಳಕೆ ಆಗುತ್ತದೆ.

– ಹುಮ್ಮಸ್ಸು-ಶಿಸ್ಟ ಪದವಾಗಿ ಮಾತ್ರ ಬಳಕೆಯ ರೂಪ

– ಹುಮ್ಮಸು – ಬಾದಾಮಿ ಒಳನುಡಿಯಲ್ಲಿ ಮಾತ್ರ ಬಳಕೆಯ ರೂಪ.

– ಹುಮ್ಮ*ಸು – ಜೋಡುನುಡಿಯಲ್ಲಿ (ಎರಡನೇ ಅಂಗ ಪದವಾಗಿ) ಮಾತ್ರ ಬಳಕೆಯ ರೂಪ [*ತೇಲಿಸಿ ಉಚ್ಚರಿಸುವಿಕೆ.]

೧೧. ಕಿರ್ದಿ, ಖಿರ್ದಿ, ಖಿರದಿ=ದಿನವಹಿಲೆಕ್ಕಪತ್ರ, ಮರಾ : ಕಿರ್ದಿ, ಪಾರ : ಕರ್ದ್.

ಖಾತೆ, ಕಾತೆ=ಕಿರ್ದಿ ಪುಸ್ತಕದಲ್ಲಿ ನಮೂದಾಗಿರುವ ಜಮಾ-ಖರ್ಚಿನ ಬಾಗ, ಮರಾ : ಖಾತೇ, ಹಿಂ: ಖಾತಾ, ಪಾರ : ಖತ್,

–ಖಾತೆ-ಕಿರ್ದಿ<ಕಾತೆ-ಕಿರ್ದಿ- –U/–U ಕಾತೆ-ಕಿರ್ದಿ<ಕಾತೆ-ಕೀರ್ದಿ* [* ತೇಲು ಉಚ್ಚಾರಣೆ]

ಈ ಜೋಡುನುಡಿ ಅಕ್ಕರಗಳ ಉಚ್ಚಾರಣಾ ಮಾಪುಗೋಲು ಅನುಸಾರ ಸರಿಯಾಗಿದೆ. ಹಾಗಾದರೆ ಮತ್ತೇಕೆ ಈ ಬದಲಾವಣೆ? ಇದಕ್ಕೆ ಕಾರಣ ಇಷ್ಟೆ, ಕನ್ನಡ ಜೋಡುನುಡಿ ನಿಯಮಾನುಸಾರ (ಅತ್ಯಂತ ನಿಕರ ಜೋಡುನುಡಿ ಆಗಿದ್ದಾಗ) ಅಂಗಪದಗಳ ಮೊದಲ ಮತ್ತು ಎರಡನೇ ಸ್ವರಾಕ್ಕರಗಳು ಒಂದೇ ನಮೂನೆಯದಾಗಿರಬೇಕು. ಹಾಗೆಂದರೆ ಎರಡೂ ಗಿಡ್ಡಕ್ಕರ ವಾಗಿರಬೇಕು (ಉದಾ : ಓದು-ಬರಹ<ಒದು-ಬರಿ) ಇಲ್ಲವೆ ಆ ಎರಡೂ ಉದ್ದಕ್ಕರವಾಗಿರಬೇಕು. (ಆ ಪ್ರಕಾರ ಇದೀಗ ಪರಾಮಮರಿಸಲು ಕಯ್ಗೆ ಎತ್ತಿಕೊಂಡಿರುವ ಜೋಡುನುಡಿಯೇ ಸಾಕ್ಶಿ. 'ಕಾತೆ-ಕಿರ್ದಿ'ಯು ಕಾತೆ-ಕೀರ್ದಿ ಎಂದಾಗಿದೆ.) ಹಾಗಾದಾಗ ಇಲ್ಲೊಂದು ಮತ್ತೆ ಪ್ರಶ್ನೆ ಉದ್ಬವಿಸುತ್ತದೆ. ಎರಡನೆ ಅಂಗಪದದ ಎರಡನೇ ಅಕ್ಕರ ಒತ್ತಕ್ಕವಾಗಿದೆಯಲ್ಲಾ! ಇದಕ್ಕೆ ಉತ್ತರ ಬಹು ಸರಳ. ಎರಡನೇ ಅಂಗಪದದ ಮೊದಲಕ್ಕರ ಉದ್ದಸ್ವರವಾಗಿ ಬದಲುಗೊಂಡಾಗ ಎರಡನೇ ಅಕ್ಕರದ ಒತ್ತು ಇದ್ದು ಇಲ್ಲದಂತೆ ವರ್ತಿಸುತ್ತದೆ. ಇದನ್ನೆ ವ್ಯಾಕರಣದ ಪರಿಬಾಷೆಯಲ್ಲಿ 'ತೇಲಿಸಿ ಉಚ್ಚರಿಸುವಿಕೆ' ಎನ್ನುತ್ತೇವೆ.

೧೨. ಇಲ್ಲಿ ನನ್ನ ಆಸಕ್ತಿ ಕುತೂಹಲಕ್ಕೆ ಮೀಟಿಗೋಲಾಗಿ ಪರಿಣಮಿಸುವ ಪದ ಒಂದರ ಬಗ್ಗೆ ಒಂದಿಷ್ಟು ಯೋಚಿಸುವ ಅಗತ್ಯವಿದೆ. ಇದಕ್ಕೆ ಮುಖ್ಯವಾದ ಕಾರಣ ಒಂದಿದೆ. ಆ ಪದವೇ 'ಮಾತು ಕುಟ್ಟು' ಎನ್ನುವುದು. ಇದರ ರಚನೆ ಹೀಗಿದೆ.

– ಮಾತನ್+ಕುಟ್ಟು>ಮಾತುಂಗುಟ್ಟು, ಮಾತುಗುಟ್ಟು-ಹಳಗನ್ನಡ ರೂಪ.

– ಮಾತುಕುಟ್ಟು-ನುಡಿಗಟ್ಟು-ಸದ್ಯದ ಚಾಲ್ತಿ ರೂಪ (=ಹರಟು, ಹರಟೆ ಹೊಡಿ)

ಪ್ರಾಚೀನ ಕಾಲದಿಂದಲೂ ನಮ್ಮ ಜಾನಪದ ಪರಂಪರೆಯಲ್ಲಿ ಕುಟ್ಟುವ ಮತ್ತು ಬೀಸುವ ಹಾಡುಗಳು ಬಹು ಜನಪ್ರಿಯತೆಯನ್ನು ಪಡೆದಿದ್ದವು. ಈ ಕುಟ್ಟುವ ಕ್ರಿಯೆಗೆ ಅನುಸಾರ ಈ ಪದ ರೂಪಕವಾಗಿ ರೂಪವಳೆದು, ಇವತ್ತಿನವರೆಗೂ ಚಾಲ್ತಿಯಲ್ಲಿರುವುದು, ಒಂದು ವಿಶಿಶ್ಟ ಸಂಗತಿ. ನಮ್ಮ ಈ ಬಾಗದಲ್ಲಿ ಇವತ್ತಿಗೂ ಹಬ್ಬ-ಹುಣ್ಣಿವೆಗಳಲ್ಲಿ 'ಹುಗ್ಗಿ' ಎನ್ನುವುದು ಊಟದ ಸಂದರ್ಬದಲ್ಲಿ ಒಂದು ಜನಪ್ರಿಯ

ತಿನಿಸು. ಈ ಹುಗ್ಗಿಯ ತಯಾರಿಕೆಯ ಮುಂಚಿತವಾಗಿ ಗೋದಿಯನ್ನು (ಎರಡ್ನೂರು ತಾಸು) ನೆನೆಹಾಕಿ, ಆಮೇಲೆ ನೆರಳಲ್ಲಿ ಒಣಗು ಹಾಕಲಾಗುತ್ತದೆ. ಬಳಿಕ ಆ ಗೋದಿಯನ್ನು ಒಳ್ಳಲ್ಲಿ (<ಒರಳು) ಹಾಕಿ ಕುಟ್ಟುತ್ತಾರೆ. ಆಗ ನೆನೆದ ಗೋದಿಯ ಮೇಲ್ಪದರ ಬಿಚ್ಚಿಕೊಳ್ಳುತ್ತದೆ. (ಆ ಬಿಚ್ಚಿಕೊಂಡ ಮೇಲ್ಪದರನ್ನೆ 'ತವುಡು' ಎನ್ನುತ್ತೇವೆ. ಈ ತವುಡಿನಲ್ಲೆ ನಿಜವಾದ ಸತ್ವ, ಸಾರ ಇರುವುದು. ಇದನ್ನೆ ಕ್ರಮೇಣ ದನಗಳಿಗೆ ತಿನಿಸುವ 'ಹರಗ'ದಲ್ಲಿ ಸೇರಿಸಲಾಗುತ್ತದೆ.) ಆಗ ಕುಟ್ಟಿದ ಗೋದಿ ಬೇಯಿಸಿ, ಹುಗ್ಗಿ ತಯಾರುಗೊಳ್ಳಲು ಅನುಕೂಲವಾಗುತ್ತದೆ.

ಈ ರೀತಿ ಮೊದಲ ಹಂತದಲ್ಲಿ ಗೋದಿ ಕುಟ್ಟಿದಾಗ ಹೊರ ಬರುವ 'ತವುಡ'ನ್ನೆ ಮತ್ತೆ ಕುಟ್ಟಲು ಹೋದರೆ! ಅದು ಗುಡ್ಡಕ್ಕೆ ಕಲ್ಲು ಹೊತ್ತುಕೊಂಡು ಹೋದಂತಾಗುತ್ತದೆ. ಪ್ರಯೋಜನ ಇಲ್ಲದ್ದು, ಎಂಬ ತಿರುಳಿನೊಂದಿಗೆ 'ತವುಡು ಕುಟ್ಟು' ಎಂಬ ನುಡಿಗಟ್ಟು ಪದ ಪ್ರಯೋಗ ಇದೆ. ಈ ಪ್ರಯೋಗದ ಆದಾರದ ಮೇಲೆ 'ಮಾತುಕುಟ್ಟು' ಪದ ನಿರ್ಮಾಣಗೊಂಡಿದೆ.

ಹಳಗನ್ನಡ ವಾಕ್ಯವೊಂದರ ಪ್ರಯೋಗ ಇಂತಿದೆ.

೧. ಮೂಗುವಟ್ಟಿರೆ ನೃಪನ್ ಮಾತುಗುಟ್ಟಿದನ್.

೨. ಬರಿ ಮಾತುಗುಟ್ಟಿ ಪೋಪಿರೆ ಗಂಡರ್.

(ಕೇಶಿರಾಜನ 'ಶಬ್ದಮಣಿದರ್ಪಣ' ಸೂತ್ರ : ೧೭೮)

ಇಲ್ಲಿ ಎರಡನೇ ವಾಕ್ಯದಲ್ಲಿ 'ಮಾತುಕುಟ್ಟು' ಎಂಬುದು ಅರ್ತ ಅತವಾ ಯಾವುದೇ ತಿರುಳಿಲ್ಲದೆ ಮಾತಾಡುವ ಪಿಳಬಂಟರನ್ನು (ಪಿಳ್ಳೆ ಬಂಟರು<ಪಿಳಬಂಟ್ರು) ತರಾಟೆಗೆ ತೆಗೆದುಕೊಳ್ಳುವುದೆ ಆಗಿದೆ. ಇಂತ ಸವಕಲು ರೂಪಗಳನ್ನು 'Dead Metaphone' ಎಂದು ಕರೆಯುವದುಂಟು. ಆದರೆ ಈ ಪದ ಹಾಗಲ್ಲ. ಇವತ್ತು ಇದು ಜೀವಂತಿಕೆಯೊಂದಿಗೆ ಬಳಕೆ ಇದೆ. ಕಾರಣ ಜೀವಂತ ನಳನಳಿಸುವ ರೂಪಕ ಎಂದೇ ಹೇಳಬೇಕಾಗುತ್ತದೆ.

೧೩. ಕನ್ನಡದಲ್ಲಿ ನಾಚು (=ಸಿಗ್ಗಾಗು, ಲಜ್ಜೆಗೊಳ್ಳು) ಎಂಬುದು ಒಂದು ಕ್ರಿಯಾದಾತು ಆಗಿ ಬಳಕೆ ಇದೆ. ನಾಚು+(ಪದ ಪ್ರತ್ಯಯ) ಇಕೆ>ನಾಚಿಕೆ<ನಾಚಿಗೆ<ನಾಚಗಿ. ಈ ನಾಚಗಿ ಎನ್ನುವುದು ವ್ಯಕ್ತಿ ರೂಪವಾದ ಒಂದು ಬಾವ ಸ್ತಿತಿಯನ್ನು ಬಿಂಬಿಸುತ್ತದೆ. ಆದರೆ ಈ ನುಡಿಯ (ನಾಚಗಿ=ಅಬರು) ಎರಡನೇ ಅಂಗಪದವಾದ (ಆಬರೂ (ಪಾರ) (ಮರಾ) ಅಬ್ರು (ಕ) ಅಬರು) 'ಅಬರು' ಎನ್ನುವುದು ಈ ಬಾಗದಲ್ಲಿ ಬಾವನಾತ್ಮಕವಾಗಿ ಹೆಚ್ಚು (ಕರುಳು ಸಂಬಂದಿ ಪದವಾಗಿ) ಚಾಲ್ತಿಯಲ್ಲಿರುವ ಪದ ಆಗಿದೆ. ಈ ಪದ ಮಾತ್ರ ವ್ಯಕ್ತಿಯ ಒಳ ಮತ್ತು ಹೊರಗಿನ ಬಾವನೆಯ ಒಟ್ಟು ಮೊತ್ತವನ್ನೆ ಇದು ಪ್ರತಿಬಿಂಬಿಸುತ್ತದೆ. ಇದನ್ನು ಮೇಲ್ವರ್ಗದ ಮರ್ಯಾದೆ ಎಂದು ಕರೆದರೆ, ಇದನ್ನೆ ಕೆಳ ಸಮುದಾಯದ ಜನರೆಲ್ಲ ಈ 'ಅಬರು'ವನ್ನು ತಬ್ಬಿಕೊಂಡು ತಮ್ಮದಾಗಿಸಿಕೊಂಡಿದ್ದಾರೆ. ಕಾರಣ 'ನಾಚಿಗಿ'ಗಿಂತಲೂ 'ನಾಚಿಗಿ–ಅಬರು' ಅಲ್ಲಗಳೆಯುವ ನುಡಿಯಾಗಿ ಹೆಚ್ಚು ಪರಿಣಾಮಕಾರಿ ಆಗಿ ಬಳಕೆ ಇದೆ.

# ಕಿಟೆಲ್ಲನ ಕನ್ನಡ – ಇಂಗ್ಲಿಷ್ ನಿಗಂಟು



**ಬಸವರಾಜ ಕೋಡಗುಂಟಿ**

ರೆವರೆಂಡ್ ಪರ್ಡಿನಾಂಡ್ ಕಿಟೆಲ್ ಕನ್ನಡ ಶಾಸ್ತ್ರಸಾಹಿತ್ಯದಲ್ಲಿ ಕಾಣುವ ಬಹುದೊಡ್ಡ ಹೆಸರು. ಆಧುನಿಕಪೂರ್ವ ಕಾಲದಲ್ಲಿ ಕಿಟೆಲ್ ಅವರು ಹಲವು ಕ್ಷೇತ್ರಗಳಲ್ಲಿ ಹಲವಾರು ಕೆಲಸಗಳನ್ನು ಮಾಡಿದ್ದಾರೆ. ಹಸ್ತಪ್ರತಿಗಳ ಸಂಗ್ರಹ, ಸಂಪಾದನೆ, ಪ್ರಕಟಣೆಗಳು, ಸಾಹಿತ್ಯ ರಚನೆ, ಶಾಸ್ತ್ರಕ್ಕೆ ಸಂಬಂದಿಸಿದ ಕೆಲಸಗಳು ಹೀಗೆ ಹಲವು. ಶಾಸ್ತ್ರದಲ್ಲಿ ವ್ಯಾಕರಣ ಮತ್ತು ನಿಗಂಟು ಕ್ಷೇತ್ರಗಳಲ್ಲಿ ಹೆಚ್ಚಿನ ಕೆಲಸ ಮಾಡಿದ್ದಾರೆ. ಕಿಟೆಲ್ಲರ ಈ ಎಲ್ಲ ಕೆಲಸಗಳನ್ನು ಪರಿಚಯಿಸುವ ಹಲವಾರು ಪ್ರಯತ್ನಗಳು ಆಗಿವೆ. ಕೆಲವು ಪುಸ್ತಕಗಳು, ಪಿಎಚ್.ಡಿ. ಅಧ್ಯಯನ ಮತ್ತು ಹಲವಾರು ಲೇಕನಗಳು ಬಂದಿವೆ. ಈ ಬರವಣಿಗೆಗಳು ಕಿಟೆಲ್ಲರ ಬದುಕು ಮತ್ತು ಅವರ ಕೆಲಸಗಳನ್ನು ಪರಿಚಯಿಸುವಂತವು ಆಗಿವೆ. ಇನ್ನು ಕೆಲವು ನೇರವಾಗಿ ಅವರ ನಿಗಂಟಿನ ಕೆಲಸದ ಪರಿಚಯ ಮಾಡುವಹಲವು ಲೇಖನಗಳು ಬಂದಿವೆ. ಆದರೆ ಹೆಚ್ಚಿನ ಬರವಣಿಗೆಗಳು ಕಿಟೆಲ್ ನಿಗಂಟಿನ ಸೂಕ್ಶ್ಮ ಪರಿಚಯಕ್ಕೆ ಇಳಿಯುವುದಿಲ್ಲ. ಇಂತದೊಂದು ಪ್ರಯತ್ನದ ಆಶಯದೊಂದಿಗೆ ಈ ಲೇಕನ ಮಾಡುತ್ತಿದ್ದೇನೆ. ಆದ್ದರಿಂದ ಈಗಿನ ಬರವಣಿಗೆಗೆ ರಚನೆಯನ್ನು ತುಸು ಬಿನ್ನವಾದ ರೀತಿಯಲ್ಲಿ ಹಾಕಿಕೊಂಡಿದೆ. ಕಿಟೆಲ್ಲ ನಿಗಂಟನ್ನು ಪರಿಚಯಿಸಿಕೊಳ್ಳುತ್ತಾ ಒಂದು ನಿಗಂಟನ್ನು ತಯಾರಿಸುವುದು ಎಂತಾ ಮಹತ್ವದ ಕೆಲಸ ಎಂಬುದನ್ನು ತಿಳಿದುಕೊಳ್ಳುವುದು ಈ ಬರಹದ ಆಶಯವಾಗಿದೆ.

ಒಬ್ಬ ನಿಗಂಟುಕಾರ ಕೇವಲ ಪದಗಳ ಒಡನಾಡಿಯಾಗಿರಲು ಸಾದ್ಯವಿಲ್ಲ. ಪದಗಳು ಎಂದರೆ ಅವು ದ್ವನಿಗಳ ರಚನೆ, ಪದಗಳ ಒಳಗೆ ಒಳರಚನೆ ಇರುತ್ತದೆ, ಹಾಗಾಗಿ ನಿಗಂಟುಕಾರ ಆ ಭಾಷೆಯ ದ್ವನಿವ್ಯವಸ್ತೆ ಮತ್ತು ಆಕ್ರುತಿಮಾ ವ್ಯವಸ್ತೆಯ ಪರಿಚಯ ಹೊಂದಿರಬೇಕು. ಅದರಂತೆ ಪದಗಳು ವಾಕ್ಯದಲ್ಲಿ ಬಳಕೆಯಾಗುವಾಗ ಅವುಗಳ ವರ್ತನೆ ಕಂಡುಬರುತ್ತದೆ. ಆದ್ದರಿಂದ ಆ ಬಾಶೆಯ ವಾಕ್ಯವಿಗ್ನಾನದ ಪರಿಚಯವೂ ಇರಬೇಕು. ಪದಗಳು ಅರ್ತವನ್ನು ಹೊಂದಿವೆ. ಅಲ್ಲಿಗೆ ಆ ಬಾಶೆಯ ಅರ್ತವಿಗ್ನಾನದ

ಪರಿಚಯ ಬೇಕು. ಹೀಗೆ ಒಬ್ಬ ನಿಗಂಟುಕಾರ ಆ ಬಾಶೆಯ ಸಮಗ್ರ ವ್ಯಾಕರಣದ ಪರಿಚಯವನ್ನು ಹೊಂದಿರಬೇಕು. ಮುಂದುವರೆದು ಪ್ರತಿಯೊಂದು ಬಾಶೆಯ ಪದಗಳು ಆಯಾ ಬಾಶಿಕ ಸಮುದಾಯದ ಸಮಾಜ, ಸಂಸ್ಕೃತಿಗಳನ್ನು ಪ್ರತಿನಿಧಿಸುತ್ತಿರುತ್ತದೆ. ಹಾಗಾಗಿ ನಿಗಂಟುಕಾರ ಆ ಸಮಾಜದ ಸಂಸ್ಕೃತಿ, ದರ‍್ಮ ಮೊದಲಾದವನ್ನೂ ತಿಳಿದುಕೊಂಡಿರಬೇಕು. ಪ್ರತಿಯೊಂದು ಬಾಶೆಯ ಪದಗಳು ಆ ಬಾಶೆ ಬದುಕಿರುವ ಪರಿಸರವನ್ನು ಪ್ರತಿಪಲಿಸುತ್ತಿರುತ್ತವೆ, ಆ ಪ್ರದೇಶದ ಇತಿಹಾಸವನ್ನು ತಮ್ಮೊಳಗೆ ದಾಕಲಿಸಿಕೊಂಡಿರುತ್ತವೆ, ಅಲ್ಲಿನ ರಾಜಕೀಯ ವ್ಯವಸ್ತೆಯನ್ನು ಒಳಗೊಂಡಿರುತ್ತವೆ. ನಿಗಂಟುಕಾರ ಈ ಎಲ್ಲವನ್ನೂ ತಿಳಿದುಕೊಂಡಿರಬೇಕು. ಇಲ್ಲದಿದ್ದರೆ ಸಮರ‍್ಪಕವಾದ ನಿಗಂಟೊಂದರ ತಯಾರಿಕೆ ಸಾದ್ಯವಿಲ್ಲವಾಗುತ್ತದೆ. ಇಶ್ಟು ಮಾತ್ರವಲ್ಲದೆ ಆ ಪದಗಳು ಆ ಬಾಶೆಯ ಸಾಹಿತ್ಯದಲ್ಲಿ, ಸಂಶೋದನೆಗಳಲ್ಲಿ ಬಳಕೆಯಾಗಿರುತ್ತವೆ. ಹಾಗಾಗಿ ಆ ಬಾಶೆಯ ಸಾಹಿತ್ಯವನ್ನೊಳಗೊಂಡು ಎಲ್ಲ ಬಗೆಯ ಬರಹದ ವಲಯಗಳ ಅರಿವು ನಿಗಂಟುಕಾರರಿಗೆ ಇರಬೇಕು. ಆ ಬಾಶೆ ಬಳಕೆಯಾಗುವ ಎಲ್ಲ ವಲಯಗಳ ಪರಿಚಯೂ ಇರಬೇಕು. ಒಟ್ಟಾರೆಯಾಗಿ ಆ ಬಾಶಿಕ ಸಮುದಾಯಕ್ಕೆ ಸೇರುವ, ಆ ಸಮುದಾಯ ಬಾಗಿಯಾಗುವ, ಅನುಬವಿಸಿರುವ, ತಿಳಿದುಕೊಂಡಿರುವ ಎಲ್ಲ ವಲಯಗಳ ಅರಿವೂ ನಿಗಂಟುಕಾರರಿಗೆ ಇರಬೇಕು. ಆಗ ಮಾತ್ರ ಒಂದು ಒಳ್ಳೆಯ ನಿಗಂಟನ್ನು ಆ ಬಾಶೆಗೆ ತಯಾರಿಸಲು ಸಾದ್ಯ. ಈ ಎಲ್ಲ ವಿಚಾರಗಳನ್ನು ಗಮನದಲ್ಲಿ ಇಟ್ಟುಕೊಂಡು ಕಿಟೆಲ್ ತನ್ನ ನಿಗಂಟಿನ ತಯಾರಿಕೆಯಲ್ಲಿ ಎಶ್ಟು ಯಶಸ್ವಿಯಾಗಿದ್ದಾನೆ ಎಂಬುದನ್ನು ತಿಳಿದುಕೊಳ್ಳುವುದು ಈ ಲೇಕನದ ಮಹತ್ವದ ಆಶಯ. ಇದು ಮುಂದುವರೆದು ಮುಂದೆ ಕನ್ನಡ ನಿಗಂಟು ಕ್ಶೇತ್ರಗಳಲ್ಲಿ ಆಗಬೇಕಿರುವ ಹಲವು ಕೆಲಸಗಳಿಗೆ ಮಾಡಿಕೊಳ್ಳಬೇಕಾದ ತಯಾರಿಗೆ ದಾರಿತೋರುವುದಾದರೆ ಒಳಿತು.

ನಿಗಂಟು ರಚನೆ ಬಾರತದ ಹಳೆಯ ಗ್ನಾನಶಿಸ್ತುಗಳಲ್ಲಿ ಒಂದು. ವೇದಗಳ ಬಾಶೆಯ ಉಚ್ಚರಣೆಯನ್ನು ಕಾಪಿಡುವ ಪ್ರಯತ್ನದ ಬಾಗವಾಗಿ ನಿಗಂಟು, ವ್ಯಾಕರಣ, ಚಂದಸ್ಸು ಮೊದಲಾದವು ವೇದಾಂಗಗಳಾಗಿ ಬೆಳೆದವು. ವೇದಗಳಲ್ಲಿ ಬಳಕೆಯಾಗಿರುವ ಎಲ್ಲ ಪದಗಳನ್ನು ಗುಂಪಿಸಿ ಆ ಪದಗಳಿಗೆ ಇರುವ ಅರ‍್ತವನ್ನು ವಿವರಿಸುವ ಪ್ರಯತ್ನವನ್ನು ಮಾಡಲಾಯಿತು. ಇದುವೆ ಯಾಸ್ಕನ ನಿರುಕ್ತ. ಇದುವೆ ಮುಂದೆ ನಿಗಂಟುವಿಗ್ನಾನ ಬೆಳವಣಿಗೆಗೆ ಮೂಲವಾಯಿತು. ಆನಂತರ ಇತಿಹಾಸದ ಉದ್ದಕ್ಕೂ ಬಿನ್ನ ಕಾಲಗಟ್ಟಗಳಲ್ಲಿ ಹಲವು ನಿಗಂಟುಗಳು ಬಂದಿವೆ. ಕನ್ನಡದ ಸಂದರ‍್ಬದಲ್ಲಿಯೂ ಹಲವಾರು ನಿಗಂಟುಗಳು ಬಂದಿವೆ. ಸದ್ಯದ ತಿಳುವಳಿಕೆ ಪ್ರಕಾರ ರನ್ನಕಂದ ಹೆಸರಿನಲ್ಲಿ ಸಿಕ್ಕಿರುವ ಕೆಲವು ಕಂದಗಳು ಕನ್ನಡದ ಹಳೆಯ ನಿಗಂಟು. ಕನ್ನಡದಲ್ಲಿ ಪಾರಂಪರಿಕ ಕಾಲದ ಹಲವಾರು ನಿಗಂಟುಗಳು ಬಂದಿವೆ. ಈ ಎಲ್ಲ ನಿಗಂಟುಗಳನ್ನು ಎನ್. ಬಸವಾರಾದ್ಯ ಅವರು ಒಂದೆಡೆ ಸಂಗ್ರಹಿಸಿ ಕೊಟ್ಟಿದ್ದಾರೆ. ಪ್ರಾಚೀನ ಕಾಲದಲ್ಲಿ ನಿಗಂಟಿನ ತಯಾರಿಕೆಯಲ್ಲಿ ಅಕಾರಾದಿಯನ್ನು ಬಳಸುತ್ತಿರಲಿಲ್ಲ. ಬದಲಿಗೆ ವಿಶಯವಲಯ ಆದರಿಸಿ ನಿಗಂಟನ್ನು ತಯಾರಿಸಲಾಗುತ್ತಿತ್ತು. ಮನುಶ್ಯರ ಮಿದುಳಿನಲ್ಲಿ ಪದಗಳನ್ನು ನೆನಪಿಟ್ಟುಕೊಳ್ಳುವ ಕ್ರಮವೂ ಹೀಗೆ ಇರಬೇಕು.

ಅಂದರೆ, ದೇಹ ಒಂದು ವಲಯ ಎಂದುಕೊಳ್ಳುವುದಾದರೆ ದೇಹಕ್ಕೆ ಸಂಬಂದಿಸಿದ ಎಲ್ಲ ಪದಗಳನ್ನು ಒಂದೆಡೆ ಕೊಡುವುದು. ಪಾರಂಪರಿಕ ನಿಗಂಟುಗಿಳಿಗೆ ಅತ್ಯಂತ ಮುಖ್ಯವಾದ ಉದ್ದೇಶವೆಂದರೆ ಸಾಹಿತ್ಯ ಮತ್ತು ಶಾಸ್ತ್ರ ಅಧ್ಯಯನ ಮಾಡುವವರಿಗೆ ಅನುಕೂಲವಾಗುವುದು.

ಬ್ರಿಟೀಶ್ ಕಾಲದಲ್ಲಿ ಬಾಶೆಯ ಅದ್ಯಯನ, ವ್ಯಾಕರಣ ರಚನೆ ಅದರಂತೆ ನಿಗಂಟುಗಳ ತಯಾರಿಕೆ ಈ ಎಲ್ಲವೂ ಅಂದಿನ ಕಾಲದ ಅವಶ್ಯಕತೆಗೆ ತಕ್ಕಂತೆ ವ್ಯಾಪಕವಾಗಿ ಬೆಳೆದವು. ನಿಗಂಟಿನ ತಯಾರಿಕೆಗೆ ಇದ್ದ ಉದ್ದೇಶಗಳು, ನಿಗಂಟು ತಯಾರಿಕೆ ರಚನೆ ಮೊದಲಾದವೆಲ್ಲವೂ ಬದಲಾದವು. ಯುರೋಪಿನ ಪರಂಪರೆಯಿಂದ ಅಕಾರಾದಿಯನ್ನು ಇಲ್ಲಿಗೆ ತರಲಾಯಿತು. ಅದರಂತೆ ಅಂದಿನ ಕಾಲದ ಶಿಕ್ಶಣಕ್ಕೆ ಮತ್ತು ಆಡಳಿತಕ್ಕೆ ಅನುಕೂಲವಾಗುವ ರೀತಿಯಲ್ಲಿ ನಿಗಂಟುಗಳ ರಚನೆಯಲ್ಲಿ ಬದಲಾವಣೆಗಳು ಆದವು.

ಆಧುನಿಕ ಕಾಲದಲ್ಲಿ ನಿಗಂಟುಗಳ ರಚನೆಯ ಉದ್ದೇಶಗಳು ಇನ್ನೂ ವ್ಯಾಪಕವಾಗಿದ್ದು ನಿಗಂಟು ಇಂದು ಸಮಾಜದ ಬಹುತೇಕ ವಲಯಗಳಿಗೆ ವ್ಯಾಪಿಸಿಕೊಂಡಿದೆ. ಎರಡು ಬಾಶೆಗಳ ನಡುವಿನ ಆರ್ತಿಕ, ರಾಜಕೀಯ, ಸಾಂಸ್ಕೃತಿಕ ಸಂಬಂಧಗಳು ವ್ಯಾಪಕವಾಗಿ ಬೆಳೆದಿವೆ. ಹೊಸಕಾಲದ ಶಿಕ್ಶಣ ವ್ಯವಸ್ತೆ, ಸೇವಾವಲಯ, ವ್ಯಾಪಾರ, ವಲಸೆ ಮೊದಲಾದ ಹಲವಾರು ಕಾರಣಗಳಿಂದ ಬಿನ್ನ ಬಾಶಿಕ ಸಮುದಾಯಗಳು ಪ್ರತಿದಿನ ಎದುರಾಗುತ್ತಿವೆ. ಹೀಗಾಗಿ ನಿಗಂಟಿನ ಅವಶ್ಯಕತೆ ಎಲ್ಲೆಡೆ ಬೆಳೆಯುತ್ತಿದೆ. ನಿಗಂಟು ಅದ್ಯಯನ ಇಂದು ಒಂದು ಸ್ವತಂತ್ರ ಅಧ್ಯಯನ ಶಾಕೆಯಾಗಿ ತನ್ನದೆ ಪರಿಬಾಶೆ, ಪರಿಕಲ್ಪನೆ ಮತ್ತು ಸಿದ್ಧಾಂತಗಳನ್ನು ಹೊಂದಿ ವಿಗ್ನಾನಿಕವಾಗಿ ಬೆಳೆದಿದೆ. ಕಿಟೆಲ್ ಈ ಆಧುನಿಕ ಬೆಳವಣಿಗೆಗಳಿಗಿಂತ ತುಸು ಮೊದಲೆ ತನ್ನ ನಿಗಂಟನ್ನು ತಯಾರಿಸಿದ್ದನು. ಹೊಸಗಾಲದ ಬೆಳವಣಿಗೆಗಿಂತ ಮೊದಲೆ ನಿಗಂಟನ್ನು ತಯಾರಿಸಿದ್ದರೂ ಕಿಟೆಲ್ಲನ ನಿಗಂಟು ಹೆಚ್ಚು ವಿಗ್ನಾನಿಕವಾಗಿಯೆ ಇದೆ. ಇದನ್ನು ಈ ಬರವಣಿಗೆಯಲ್ಲಿ ಪರಿಚಯ ಮಾಡಿಕೊಡುವ ಪ್ರಯತ್ನ ಮಾಡಲಾಗಿದೆ.

ಕನ್ನಡದಾಗ ಕಿಟೆಲ್ ನಂತರ ಮಹತ್ತರವಾದ ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ-ಕನ್ನಡ ನಿಗಂಟು ಎಂಟು ಸಂಪುಟಗಳಲ್ಲಿ ಮತ್ತು ಮಯ್ಸೂರು ವಿಶ್ವವಿದ್ಯಾಲಯದ ಇಂಗ್ಲೀಶ್-ಕನ್ನಡ ನಿಗಂಟು ನಾಲ್ಕು ಸಂಪುಟಗಳಲ್ಲಿ ಬಂದಿವೆ. ಇವುಗಳ ಹೊರತಾಗಿ ಹಲವಾರು ನಿಗಂಟುಗಳು ಬಂದಿವೆ. ಆದರೆ, ಕಿಟೆಲ್ ನಿಗಂಟಿನಷ್ಟು ಮಹತ್ವವನ್ನು ಪಡೆದುಕೊಳ್ಳುವ ಯಾವುದೆ ನಿಗಂಟು ಬಂದಿಲ್ಲ. ಕನ್ನಡ ಮಾತು, ಕನ್ನಡ ಮಾತುಗ ಸಮಾಜ ಮತ್ತು ಇಂದಿನ ಆಧುನಿಕ ಬೆಳವಣಿಗೆಗಳು, ವ್ಯಾಪಾರ, ಉದ್ಯೋಗ, ಪ್ರವಾಸ, ವಲಸೆ ಮೊದಲಾದ ಹಲವಾರು ಕಾರಣಗಳಿಗಾಗಿ ಬಿನ್ನ ಬಗೆಯ ನಿಗಂಟುಗಳ ತಯಾರಿಕೆ ಅವಶ್ಯಕತೆ ಇದೆ. ಕನ್ನಡ ಸಾಹಿತ್ಯ ಅಧ್ಯಯನ ಕ್ಶೇತ್ರ ಸಾಕಶ್ಟು ವಿಸ್ತರಿಸಿಕೊಂಡಿದೆ ಮತ್ತು ಸಾಮಾಜಿಕ ಬೆಳವಣಿಗೆಗಳೂ ವಿಪರೀತ ಆಗಿವೆ. ಈ ಎಲ್ಲ ಕಾರಣಗಳಿಗಾಗಿ ಬಹು ವಿಸ್ತಾರವಾದ ಕನ್ನಡ-ಕನ್ನಡ ಮತ್ತು ಕನ್ನಡ-ಇಂಗ್ಲೀಶ್ ನಿಗಂಟುಗಳ ತಯಾರಿಕೆಯ

ಜರೂರು ಇದೆ. ಇಂತಾ ಕೆಲಸಕ್ಕೆ ಅವಶ್ಯವಾದ ಪೂರಕ ಸಿದ್ಧತೆಗಳನ್ನು ಮಾಡಿಕೊಳ್ಳುವಾಗ ಆಧುನಿಕ ನಿಗಂಟುವಿಗ್ನಾನದ ತಿಳುವಳಿಕೆ ಪಡೆದುಕೊಳ್ಳುವುದರ ಜೊತೆಗೆ ಕಿಟೆಲ್ ನಿಗಂಟಿನ ಪರಿಚಯದ ಅವಶ್ಯಕತೆಯೂ ಇದೆ. ಈಗಿನ ಲೇಖನ ಈ ಎರಡು ಆಶಯಗಳನ್ನು ಒಟ್ಟೊಟ್ಟಿಗೆ ಇಟ್ಟುಕೊಂಡಿದೆ. ಕಿಟೆಲ್ ನಿಗಂಟಿನ ಪರಿಚಯ ಮಾಡಿಕೊಳ್ಳುತ್ತಾ ಆಗಬೇಕಾದ ನಿಗಂಟು ತಯಾರಿಕೆ ಕೆಲಸ ಹೇಗಿರಬೇಕು ಎಂಬುದಕ್ಕೆ ಒಂದು ಸಣ್ಣ ತೋರುಗವಾಗಲಿ ಎಂಬುದು.

ನಿಗಂಟಿನ ತಯಾರಿಕೆ ಹಲವು ಹಂತಗಳಲ್ಲಿ ನಡೆಯುವ ಒಂದು ದೊಡ್ಡ ಪ್ರಕ್ರಿಯೆ. ಕಿಟೆಲ್ ನಿಗಂಟಿನ ಉದ್ದಿಶ್ಟ ಓದುಗರು ಸಾಮಾನ್ಯರು ಮತ್ತು ವಿದ್ವಾಂಸರು. ಜನಜೀವನಕ್ಕೆ ಉಪಯೋಗವಾಗುವ ರೀತಿಯಲ್ಲಿ ಮತ್ತು ಹಳೆಯ ಕನ್ನಡ ಸಾಹಿತ್ಯವನ್ನು ಓದುವುದಕ್ಕೆ ಅನುವಾಗುವ ರೀತಿಯಲ್ಲಿ ಈ ನಿಗಂಟನ್ನು ತಯಾರಿಸಿದೆ. ಈ ಉದ್ದೇಶಗಳು ಒಟ್ಟು ನಿಗಂಟಿನ ರಚನೆಯನ್ನು ನಿರ್ದರಿಸುತ್ತದೆ. ಇಲ್ಲಿ ಮೊದಲಿಗೆ ಕಿಟೆಲ್ ನಿಗಂಟು ತಯಾರಿಕೆಯ ಉದ್ದೇಶಗಳನ್ನು ಗಮನಿಸೋಣ. ಆನಂತರ ಕಿಟೆಲ್ ನಿಗಂಟಿನ ಆಕರಗಳು, ಮಾಹಿತಿ ಸಂಗ್ರಹಣೆ ಮತ್ತು ಅವುಗಳ ವಿಶ್ಲೇಶಣೆ, ನೋಂದಣಿಗಳ ತಯಾರಿಕೆ, ಅವುಗಳ ಹಂಚಿಕೆ, ಒಟ್ಟು ರಚನೆ ಮತ್ತು ನೋಂದಣಿಗಳಿಗೆ ಒದಗಿಸಿರುವ ಪ್ರಯೋಗಗಳ ಬಗೆಗೆ ಮಾತನಾಡಿದೆ. ಕೊನೆಯಲ್ಲಿ ಪ್ರತಿ ನೋಂದಣಿಗೆ ಕಿಟೆಲ್ ಒದಗಿಸಿರುವ ಗ್ನಾತಿ ಪದಗಳ ಬಗೆಗೆ ತುಸು ಚರ್ಚಿಸಿದೆ. ಇದು ಈ ಲೇಖನದ ಸ್ತೂಲ ರಚನೆ. ಈ ಬರವಣಿಗೆಗೆ ಬಳಸಿಕೊಂಡಿರುವ ಕಿಟೆಲ್ ನಿಗಂಟಿನ ಪ್ರತಿಯ ಮಾಹಿತಿ ಹೀಗಿದೆ. ಪ್ರಕಾಶನ: ಏಸಿಯಾನ್ ಎಜುಕೇಶನಲ್ ಸರ್ವಿಸಸ್, ನವದೆಹಲಿ, ಚೆನ್ನಯ್. ೨೦೦೪.

ಕಿಟೆಲ್ ನಿಗಂಟನ್ನು ಗಮನಿಸಿದಾಗ ಅದರ ಉದ್ದೇಶಗಳು ಸ್ಪಶ್ಟವಾಗಿ ತಿಳಿಯುತ್ತವೆ. ನಿಗಂಟಿನಲ್ಲಿ ಹಳಗನ್ನಡ ಸಾಹಿತ್ಯದ ಪದಗಳನ್ನೂ ಭಿನ್ನ ಪ್ರದೇಶಗಳಲ್ಲಿ ಬಳಕೆಯಲ್ಲಿರುವ ಪದಗಳನ್ನೂ ಕೊಟ್ಟಿರುವುದರಿಂದ ಇದು ಒಟ್ಟಿಗೆ ಸಾಹಿತ್ಯಾಭ್ಯಾಸಿಗಳನ್ನು ಮತ್ತು ಸಾಮಾನ್ಯರನ್ನು ಒಟ್ಟೊಟ್ಟಿಗೆ ಗಮನಿಸುತ್ತಿದೆ ಎಂಬುದು ತಿಳಿಯುತ್ತದೆ. ಅದರಂತೆ ಪ್ರತಿ ಪದಕ್ಕೂ ಕೊಡುವ ವಿಪುಲ ಮಾಹಿತಿ, ವಿವರಣೆ, ಪ್ರಯೋಗ ಮೊದಲಾದವನ್ನು ಗಮನಸಿದಾಗ ಈ ನಿಗಂಟು ಸಂಶೋಧನೆಗಳಿಗೂ ಉಪಯುಕ್ತ ಎಂಬುದು ತಿಳಿಯುತ್ತದೆ.

ಕಿಟೆಲ್ ಕನ್ನಡದ ಸಾಹಿತ್ಯ, ಸಂಶೋಧನೆಗಳು ವ್ಯಾಪಕವಾಗಿ ಬೆಳೆಯುತ್ತಿದ್ದ ಕಾಲದಲ್ಲಿ ಈ ನಿಗಂಟನ್ನು ತಯಾರಿಸುವ ಕೆಲಸವನ್ನು ಮಾಡುತ್ತಾರೆ. ಸಾಹಿತ್ಯದ ವಿದ್ವಾಂಸರು, ಹಳಗನ್ನಡದ ವಿದ್ಯಾರ್ತಿಗಳು ಮೊದಲಾದವರಿಗೆ ಈ ನಿಗಂಟು ಇಂದಿಗೂ ಬಹು ಮುಖ್ಯವಾದ ನಿಗಂಟಾಗಿದೆ. ಅವರಿಗೆ ಅನುಕೂಲವಾಗುವಂತೆ ಪ್ರತಿ ಪದಕ್ಕೆ ಸಾಧ್ಯವಾದಶ್ಟು ಹಳೆಯ ಕನ್ನಡ ಸಾಹಿತ್ಯ ಕೃತಿಗಳಿಂದ ಬಳಕೆಗಳನ್ನು ಕೊಟ್ಟಿದೆ. ಪ್ರತಿ ಪದದ ಭಿನ್ನ ಅರ್ತಗಳನ್ನು, ವಿಸ್ತ್ರುತಾರ್ತಗಳನ್ನು ಕೊಟ್ಟಿದೆ. ಕನ್ನಡ ವ್ಯಾಪಕವಾದ ಬಿನ್ನತೆಗಳನ್ನು ವಿವಿಧ ಪ್ರದೇಶಗಳಲ್ಲಿ ಹೊಂದಿದೆ ಎಂಬುದನ್ನು ಕಿಟೆಲ್ ಅರಿತವನಾಗಿದ್ದನು. ಇದನ್ನು ಒಳಗೊಳ್ಳುವಂತೆ ಬಿನ್ನ ಪ್ರಾದೇಶಿಕ ಕನ್ನಡಗಳ ರೂಪಗಳನ್ನು ಕಿಟೆಲ್ ತನ್ನ ನಿಗಂಟಿನಲ್ಲಿ

ಕೊಡುತ್ತಾನೆ. ಅದರೊಂದಿಗೆ ಅವುಗಳ ಬಳಕೆಯ ಪ್ರದೇಶಗಳನ್ನು ಹೇಳುತ್ತಾನೆ. ಅದಲ್ಲದೆ ಸಾಮಾನ್ಯರಿಗೆ ಅನುಕೂಲವಾಗುವ ರೀತಿಯಲ್ಲಿ ಬಿನ್ನ ಪ್ರದೇಶಗಳ ಗಾದೆಮಾತುಗಳನ್ನೂ ಪ್ರಯೋಗವಾಗಿ ಕೊಡುತ್ತಾನೆ.

ಕಿಟೆಲ್ಲನು ಕನ್ನಡ ಸಾಹಿತ್ಯದ ಮೇಲೆ ಮತ್ತು ಕನ್ನಡ ಶಾಸನ, ಹಸ್ತಪ್ರತಿ, ಜನಪದ ಸಾಹಿತ್ಯ ಮೊದಲಾದ ಹಲವು ಕ್ಶೇತ್ರಗಳಲ್ಲಿ ಸಾಕಶ್ಟು ಕೆಲಸ ಮಾಡಿದ್ದವನು. ಹೀಗಾಗಿ ಅಂದಿಗೆ ಲಬ್ಯವಿದ್ದ ಕನ್ನಡ ಸಾಹಿತ್ಯದ ವ್ಯಾಪಕವಾದ ತಿಳುವಳಿಕೆ ಕಿಟೆಲ್‌ಗೆ ಇದ್ದಿತು. ಅದರೊಂದಿಗೆ ಕರ್ನಾಟಕದ ವಿವಿದ ಪ್ರದೇಶಗಳಲ್ಲಿ ಕೆಲಸ ಮಾಡಿದ ಮತ್ತು ಅದಕ್ಕಿಂತ ಹೆಚ್ಚಾಗಿ ತಿರುಗಾಡಿದ ಅನುಬವದಿಂದಾಗಿ ವಿವಿದ ಪ್ರದೇಶಗಳು, ಅಲ್ಲಿ ಬಳಕೆಯಲ್ಲಿರುವ ಕನ್ನಡದ ಬಿನ್ನತೆ ಬಗೆಗೆ ಹೆಚ್ಚು ತಿಳುವಳಿಕೆ ಇದ್ದಿತು. ಈ ವಿಸ್ತಾರವಾದ ತಿಳುವಳಿಕೆಯ ಬಲದಿಂದ ಕಿಟೆಲ್ ತಮ್ಮ ಕನ್ನಡ – ಇಂಗ್ಲೀಶ್ ನಿಗಂಟಿಗೆ ಆಕರ ಸಂಗ್ರಹ ಮಾಡಲು ವ್ಯಾಪಕಮೂಲಗಳನ್ನು ಬಳಸಿಕೊಂಡನು.

ಕಿಟೆಲ್ ಮುಕ್ಯವಾಗಿ ಎರಡು ವಲಯಗಳಿಂದ ಆಕರಗಳನ್ನು ಸಂಗ್ರಹಿಸಿದ್ದಾನೆ. ಒಂದು ಸಾಹಿತ್ಯ ಇನ್ನೊಂದು ಬಳಕೆಯ ಮಾತು. ಅವನು ತಮ್ಮ ಈ ಆಕರಗಳನ್ನು ಒಟ್ಟು ಅಯ್ದು ಗುಂಪುಗಳಲ್ಲಿ ಮಾಡಿಕೊಂಡಿದ್ದಾನೆ. ಇದರಲ್ಲಿ ಮೊದಲ ಮೂರು ಗುಂಪುಗಳು ಸಾಹಿತ್ಯವಾದರೆ ಆನಂತರದ ಎರಡು ಗುಂಪುಗಳು ಆಡುನುಡಿಗಳಾಗಿವೆ. ಕನ್ನಡ ಸಾಹಿತ್ಯದ ಮೇಲೆ ಕೆಲಸ ಮಾಡಿದ್ದ ಕಿಟೆಲ್ ಕನ್ನಡ ಸಾಹಿತ್ಯವನ್ನು ಹಳಗನ್ನಡ, ನಡುಗನ್ನಡ ಮತ್ತು ಹೊಸಗನ್ನಡ ಎಂಬ ಮೂರು ಕಾಲಗಟ್ಟಗಳಲ್ಲಿ ಗುಂಪಿಸಿದ್ದನು. ಈ ಮೂರೂ ಗುಂಪುಗಳಿಂದ ಸಾಹಿತ್ಯ ಕ್ರುತಿಗಳನ್ನು ಆಕರಕ್ಕಾಗಿ ಬಳಸಿಕೊಂಡಿದ್ದಾನೆ. ಹಳಗನ್ನಡದ ಹದಿನೆಂಟು, ನಡುಗನ್ನಡ ಹದಿನೆಂಟು ಮತ್ತು ಆಧುನಿಕ ಕನ್ನಡದ ನಾಲ್ಕು ಕ್ರುತಿಗಳನ್ನು ಆಕರ ಸಂಗ್ರಹಕ್ಕಾಗಿ ಆರಿಸಿಕೊಂಡಿದ್ದಾನೆ. ಇನ್ನುಳಿದ ಎರಡು ಗುಂಪುಗಳು ಆಡುನುಡಿಯ ಪದಗಳನ್ನು ಸಂಗ್ರಹಿಸಲು ಪೂರಕವಾಗಿರುವಂತವು. ಇವುಗಳನ್ನು ಕೆಳಗೆ ತೋರಿಸಿದೆ.

೧. ಕನ್ನಡ ಗಾದೆಗಳು (ದಕ್ಶಿಣ ಮಹ್ರಟ್ಟ (ದಕ್ಶಿಣ ಮಹಾರಾಶ್ಟ್ರ–ಮುಂಬಯ್ ಪ್ರಾಂತ), ಮಯ್ಸೂರು ಮತ್ತು ಕೆನರಾ (ಮದ್ರಾಸ್ ಪ್ರಾಂತ) ಪ್ರದೇಶಗಳಿಂದ ಸಂಗ್ರಹಿಸಿದವು.

೨. ಎಲ್ಲ ಕನ್ನಡ ಮಂದಿಗೂ ಸಮಾನವಾದ ಕನ್ನಡ ಪದಗಳು (ಮಯ್ಸೂರು ಮತ್ತು ದಕ್ಶಿಣ ಮಹ್ರಟ್ಟ ಪ್ರದೇಶದ ಸಾಮಾನ್ಯ ಸಂಬಾಶಣೆಯಲ್ಲಿ ಬಳಕೆಯಾಗುವ ಪದಗಳು. (ಇಲ್ಲಿ ಕಿಟೆಲ್ ಅವರು ಪರಸ್ಪರ ಪ್ರದೇಶದ ಪದಗಳು ಇನ್ನೊಂದರಲ್ಲಿ ಬಳಕೆಯಲ್ಲಿವೆ ಎಂದು ಗುರುತಿಸುವುದು ಸಾಧ್ಯವಿಲ್ಲ ಎಂದು ಹೇಳುತ್ತಾರೆ).

ಈ ಮೂರೂ ಕಾಲಗಟ್ಟಗಳನ್ನು ಪ್ರತಿನಿಧಿಸುವಂತೆ ಆಕರಕ್ರುತಿಗಳನ್ನು ಆರಿಸಿಕೊಂಡಿದೆ. ಇದು ಕಿಟೆಲ್ಲರ ಕನ್ನಡ ಸಾಹಿತ್ಯದ ವಿಸ್ತಾರವಾದ ಪರಿಚಯವನ್ನು ಮಾತ್ರವಲ್ಲದೆ ಒಂದು ಬ್ರುಹತ್ ನಿಗಂಟಿಗೆ ಆಕರಗಳನ್ನು ನಿರ್ದರಿಸಿರುವ ಕ್ರಮವನ್ನೂ ಇಲ್ಲಿ ಪರಿಚಯಿಸಿಕೊಳ್ಳಬಹುದು. ಆಯ್ದುಕೊಂಡ ಕ್ರುತಿಗಳಲ್ಲಿ ಬಿನ್ನ ಕಾಲ ಮಾತ್ರವಲ್ಲದೆ

ಬಿನ್ನ ದರ್ಮ, ಬಿನ್ನ ಸಾಹಿತ್ಯ ಪ್ರಕಾರ, ಬಿನ್ನ ಚಂದೋಪ್ರಕಾರ, ಸಾಹಿತ್ಯ ಮತ್ತು ಶಾಸ್ತ್ರಗ್ರಂತಗಳು, ನಿಗಂಟುಗಳೂ ಸೇರಿಕೊಂಡಿವೆ. ನಿಗಂಟು ತಯಾರಿಸುವವರು ಒಬ್ಬ ಸಾಹಿತ್ಯದ ವಿದ್ವಾಂಸರೂ ಆಗಿರಬೇಕಾಗುತ್ತದೆ. ಯಾವ ಕ್ರುತಿಯನ್ನು ಆಕರಕ್ಕೆ ಬಳಸಿಕೊಳ್ಳಬೇಕು ಮತ್ತು ಯಾಕೆ ಎಂಬ ವಯಿಗ್ನಾನಿಕ ನಿಲುವು ಅವಶ್ಯವಾಗಿರುತ್ತದೆ.

ಇನ್ನು ಕಿಟೆಲ್ ಆಡುನುಡಿಯನ್ನು ಆಕರವಾಗಿ ಬಳಸುವ, ಆಡುನುಡಿಯಿಂದ ಪದಗಳನ್ನು ಸಂಗ್ರಹಿಸಿಕೊಂಡಿರುವುದರ ಬಗೆಗೆ ಒಂದೆರಡು ಮಾತುಗಳನ್ನಾಡಬೇಕು. ಕಿಟೆಲ್ಲನ ಹಲವಾರು ಆಸಕ್ತಿಗಳಲ್ಲಿ ಜನಪದವೂ, ಜನಪದ ಸಾಹಿತ್ಯವೂ ಸೇರಿತ್ತು. ಹಾಗಾಗಿ ಗಾದೆಗಳನ್ನು ಅವರು ಸಂಗ್ರಹಿಸಿದ್ದರು. ಕಿಟೆಲ್ ಗಾದೆಗಳನ್ನು ನಿಗಂಟಿನ ಸಲುವಾಗಿಯೆ ಸಂಗ್ರಹಿಸಿದರೆ ಇಲ್ಲವೆ ಅದಕ್ಕೂ ಮೊದಲು ಸಂಗ್ರಹಿಸಿದ್ದರೆ ಎಂಬುದು ನನಗೆ ಸ್ಪಶ್ಟವಾಗಿ ತಿಳಿದಿಲ್ಲ. ತನ್ನ ನಿಗಂಟಿನಲ್ಲಿ ಹಲವಾರು ಗಾದೆಗಳನ್ನು ಪ್ರಯೋಗವಾಗಿ ಕೊಟ್ಟಿದ್ದಾನೆ. ಕಿಟೆಲ್ ಕೋಶದ ಗಾದೆಗಳು ಎಂದು ರಾಮೇಗವುಡ ಅವರು ಸಂಗ್ರಹಿಸಿ ಒಂದು ಪುಸ್ತಕವಾಗಿ ಪ್ರಕಟಿಸಿದ್ದಾರೆ. ಇದು ಕಿಟೆಲ್ ತಮ್ಮ ಕೋಶದಲ್ಲಿ ಪ್ರಯೋಗಕ್ಕೆಂದು ಕೊಟ್ಟ ಗಾದೆಗಳ ಸಂಕ್ಯಾಬಾಹುಳ್ಯವನ್ನು ತೋರಿಸುತ್ತದೆ. ಇದು ಸಹಜವಾಗಿಯೆ ಬೆರಗನ್ನು ತರದಿರದು. ಈ ಗಾದೆಗಳನ್ನು ಪದಗಳ ಸಂಗ್ರಹಣೆಗೆ ಬಳಸಿಕೊಂಡಿದ್ದಾನೆ ಮತ್ತು ಬಳಕೆಯಾಗಿಯೂ ಕೊಟ್ಟಿದ್ದಾನೆ. ಈ ಗಾದೆಗಳನ್ನು ದಕ್ಶಿಣ ಮಹ್ರಟ್ಟ, ಮಯ್ಸೂರು ಮತ್ತು ಕೆನರಾ ಪ್ರದೇಶಗಳಿಂದ ಸಂಗ್ರಹಿಸಿದೆ ಎಂದು ಹೇಳುತ್ತಾನೆ. ಇವುಗಳ ಬಗೆಗೆ ಅವರು ಕೊಡುವ ಈ ಟಿಪ್ಪಣಿಯನ್ನು ಗಮನಿಸಬೇಕು. ಈ ಗಾದೆಗಳಲ್ಲಿ ಹೆಚ್ಚಿನವು ಬಲು ಹಳೆಯವು ಮತ್ತು ಹೆಚ್ಚು ಮಾರ್‍ಗದರ್‍ಶಕವಾಗಿವೆ, ಇನ್ನು ಕೆಲವು ಇತ್ತೀಚೆಗೆ ಬೆಳೆದಿರುವವೂ ಇವೆ, ಅದರಂತೆಯೆ ಕೆಲವು ಗಾದೆಗಳನ್ನು ತುಳುವಿನಿಂದ ತೆಗೆದುಕೊಂಡಿವೆ ಎಂದು ಹೇಳುತ್ತಾನೆ.

ಆಡುನುಡಿಯ ಇನ್ನೊಂದು ಆಕರ ನೇರವಾಗಿ ಪದಗಳನ್ನು ಬಳಕೆ ಬಾಶೆಯಿಂದ ತೆಗೆದುಕೊಂಡಿರುವುದು. ಹೀಗೆ ಪದಗಳನ್ನು ತೆಗೆದುಕೊಳ್ಳುವುದು ಬಲು ದೊಡ್ಡ ಕೆಲಸ. ವ್ಯಾಪಕ ಬಿನ್ನತೆಗಳು ಕಂಡುಬರುವ ಪ್ರಾದೇಶಿಕ ಕನ್ನಡಗಳಿಂದ ಪದಗಳನ್ನು ಸಂಗ್ರಹಿಸುವುದು ಕಿಟೆಲ್ ನಿಗಂಟಿನಶ್ಟು ದೊಡ್ಡದಾದ ಕೆಲಸಕ್ಕೆ ಒಂದು ಸಾಹಸವೆ ಸರಿ. ಮಯ್ಸೂರು ಮತ್ತು ದಕ್ಶಿಣ ಮಹ್ರಟ್ಟ ಪ್ರದೇಶಗಳಿಗೆ ಸಮಾನವಾದ ಪದಗಳನ್ನು ಆಯ್ದುಕೊಳ್ಳಲಾಗಿದೆ ಎಂದು ಹೇಳುವಾಗ ಕೆಲವು ಕುತೂಹಲದ ಅಂಶಗಳನ್ನು ಗಮನಿಸಬೇಕು. ಗಾದೆಗಳ ಸಂಗ್ರಹದ ವಿಚಾರದಲ್ಲಿ ದಕ್ಶಿಣ ಮಹ್ರಟ್ಟ ಪ್ರದೇಶವನ್ನು ಮೊದಲಿಗೆ ಉಲ್ಲೇಕಿಸುವ ಕಿಟೆಲ್ ಪದಗಳ ಸಂಗ್ರಹದ ವೇಳೆಯಲ್ಲಿ ಮಯ್ಸೂರು ಪ್ರದೇಶವನ್ನು ಮೊದಲಿಗೆ ಉಲ್ಲೇಕಿಸುತ್ತಾನೆ. ಕೆನರಾದಿಂದ ಪದಗಳನ್ನು ಕಲೆ ಹಾಕಿರುವುದರ ಬಗೆಗೆ ಮಾಹಿತಿ ಕೊಡುತ್ತಿಲ್ಲ. ಇದರೊಂದಿಗೆ ಕಿಟೆಲ್ ಅವರ ಒಂದು ಅವಲೋಕನೆಯನ್ನೂ ಗಮನಿಸಬೇಕು. ಮಯ್ಸೂರು ಪ್ರದೇಶದ ಪದವೊಂದು ದಕ್ಶಿಣ ಮಹ್ರಟ್ಟ ಪ್ರದೇಶದಲ್ಲಿಯೂ ಬಳಕೆಯಲ್ಲಿದೆಯೆ ಎಂಬುದುನ್ನು ನಿರ್‍ದರಿಸುವುದು ಕಶ್ಟವಾಗಿತ್ತು ಎಂದು ಹೇಳುತ್ತಾನೆ. ಮಯ್ಸೂರು ಪ್ರದೇಶದ ಪದಕ್ಕೆ ಸಮಾನ ರೂಪವನ್ನು ದಕ್ಶಿಣ ಮಹ್ರಟ್ಟ ಪ್ರದೇಶದಲ್ಲಿ ಹುಡಕಲಾಗಿದೆ. ಬದಲಿಗೆ

ದಕ್ಶಿಣ ಮಹ್ರಟ್ಟ ಪ್ರದೇಶದ ಪದಗಳಿಗೆ ಮಯ್ಸೂರು ಪ್ರದೇಶದಲ್ಲಿ ಹುಡುಕಾಟ ನಡೆಸಿಲ್ಲ. ಇಲ್ಲವೆ ಪರಸ್ಪರ ಪ್ರದೇಶಗಳ ಪದಗಳಿಗೆ ಇನ್ನೊಂದು ಪ್ರದೇಶದಲ್ಲಿ ಹುಡುಕಾಟ ನಡೆಸಿಲ್ಲ.

ಇವುಗಳ ಜೊತೆಗೆ ಕಿಟೆಲ್ ಹಲವು ನಿಗಂಟುಗಳನ್ನೂ ಆಕರವಾಗಿ ಬಳಸಿ ಕೊಂಡಿದ್ದಾನೆ. ಈಗಾಗಲೆ ಬಂದಿದ್ದ ರೀವ್ ಅವರ ಕನ್ನಡ ನಿಗಂಟನ್ನು ಆಕರವಾಗಿ ಬಳಸಿಕೊಳ್ಳುತ್ತಾನೆ. ಕನ್ನಡ ನಿಗಂಟು ಮಾತ್ರವಲ್ಲದೆ ಕನ್ನಡ ಬಾಶೆಯೊಂದಿಗೆ ಮತ್ತು ಕನ್ನಡ ಪದಕೋಶದೊಂದಿಗೆ ಸಂಬಂದ ಹೊಂದಿರುವ ಇನ್ನೂ ಕೆಲವು ಬಾಶೆಗಳ ನಿಗಂಟುಗಳನ್ನೂ ಅವನು ಬಳಸಿಕೊಂಡಿದ್ದಾನೆ. ಸಂಸ್ಕ್ರುತ, ತಮಿಳು, ತೆಲುಗು, ಮರಾಟಿ, ತುಳು ಮಾತುಗಳ ಹಲವು ನಿಗಂಟುಗಳನ್ನು ಅವನುಬಳಸಿಕೊಂಡಿದ್ದಾನೆ. ದ್ರಾವಿಡ ನಿಗಂಟುಗಳು ಎಂಬ ಹೆಸರಿನಲ್ಲಿ ರೀವ್ ಅವರ ಕನ್ನಡ ನಿಗಂಟಿನೊಂದಿಗೆ ತೆಲುಗಿನ ಎರಡು, ತಮಿಳಿನ ಮತ್ತು ತುಳುವಿನ ಒಂದೊಂದು ನಿಗಂಟುಗಳನ್ನು ಬಳಸಿಕೊಂಡಿದ್ದಾನೆ. ಸಂಸ್ಕ್ರುತದ ನಾಲ್ಕು ನಿಗಂಟುಗಳನ್ನು ಮತ್ತು ಒಂದು ಮರಾಟಿ ನಿಗಂಟನ್ನು ಬಳಸಿಕೊಂಡಿದ್ದಾನೆ. ಕನ್ನಡ ಮಾತು ತಮಿಳು, ತೆಲುಗು ಮತ್ತು ತುಳು ಮಾತುಗಳ ಗ್ನಾತಿ ಬಾಶೆಯಾಗಿದ್ದು ಸಹಜವಾಗಿಯೇ ಹಲವು ಸಮಾನ ಪದಗಳನ್ನು ಹಂಚಿಕೊಂಡಿರುತ್ತದೆ. ಅದರಂತೆ ಸಂಸ್ಕ್ರುತದಿಂದ ಹಲವಾರು ಪದಗಳನ್ನು ಕನ್ನಡ ತೆಗೆದುಕೊಂಡಿದೆ. ಮರಾಟಿಯೊಂದಿಗಿನ ಕನ್ನಡದ ಸಂಬಂದವೂ ಮಹತ್ವದ್ದು. ಹೀಗೆ ಕನ್ನಡ ಮಾತಿನ ಪದಕೋಶ ಸಂಬಂಧವನ್ನು ಹೊಂದಿರುವ ಹಲವು ಮಾತುಗಳ ನಿಗಂಟುಗಳನ್ನು ತಮ್ಮ ಕೆಲಸಕ್ಕೆ ಪೂರಕವಾಗಿ ಕಿಟೆಲ್ ಬಳಸಿಕೊಂಡಿದ್ದಾನೆ.

ಇನ್ನು ಕಿಟೆಲ್ ನಿಗಂಟಿನ ರಚನೆಯನ್ನು ತಿಳಿದುಕೊಳ್ಳಬಹುದು. ಮೊದಲಿಗೆ ಕಿಟೆಲ್ ನಿಗಂಟಿನ ಸ್ತೂಲ ರಚನೆಯನ್ನು ಗಮನಿಸಬಹುದು. ನೋಂದಣಿಯನ್ನು ಕನ್ನಡ ಲಿಪಿಯಲ್ಲಿದಪ್ಪಕ್ಶರದಲ್ಲಿ ಕೊಟ್ಟಿದೆ. ಆನಂತರ ಜಾಗ ಕೊಟ್ಟು ಆ ಪದವನ್ನು ಅಯ್.ಪಿ.ಎ. ಲಿಪಿಯಲ್ಲಿ ದಪ್ಪಕ್ಕರದಲ್ಲಿ ಕೊಟ್ಟಿದೆ. ಆನಂತರ ಅವಶ್ಯವಿರುವೆಡೆಗಳಲ್ಲಿ ಆ ಪದದ ಹಲರೂಪಗಳನ್ನು ಕೊಟ್ಟಿದೆ. ನಂತರ ಪದಕ್ಕೆ ಅರ್ತವನ್ನು ಇಂಗ್ಲೀಶಿನಲ್ಲಿ ಕೊಟ್ಟಿದೆ. ಅದರ ನಂತರ ಪದಕ್ಕೆ ಪ್ರಯೋಗಗಳನ್ನು ಕೊಟ್ಟಿದೆ. ಅವಶ್ಯವಿರುವ ಕಡೆ ಕನ್ನಡದ ಇತರ ಸಂಬಂದಿ ಬಾಶೆಗಳಲ್ಲಿ ಆ ಪದದ ಗ್ನಾತಿರೂಪಗಳನ್ನು ಕೊಟ್ಟಿದೆ. ಕಿಟೆಲ್ ನಿಗಂಟಿನಲ್ಲಿ ಪದಗಳು ಮಾತ್ರವಲ್ಲದೆ ಪ್ರತ್ಯಯಗಳನ್ನೂ ಕೊಡಲಾಗಿದೆ. ಇದು ನಿಗಂಟಿನ ಸ್ತೂಲ ವಿನ್ಯಾಸ. ಇದರೊಳಗೆ ಇನ್ನೂ ಹಲವಾರು ಅಂಶಗಳನ್ನು ಕಾಣಬಹುದು. ಇಲ್ಲಿ ಪ್ರಮುಕವಾದ ಕೆಲವನ್ನು ಮಾತಿಗೆತ್ತಿಕೊಳ್ಳಬಹುದು. ಇದು ಕಿಟೆಲ್ ಅವರ ನಿಗಂಟು ಯಾಕೆ ಇಂದಿಗೂ ಮಹತ್ವದ್ದು ಎಂಬುದನ್ನು ಪರಿಚಯಿಸುತ್ತದೆ.

ಸಾಮಾನ್ಯವಾಗಿ ಪ್ರತಿ ನೋಂದಣಿಯನ್ನು ದಪ್ಪಕ್ಕರದಲ್ಲಿ ಕೊಡುವುದು ಯಾವುದೇ ನಿಗಂಟಿನಲ್ಲಿ ಸಾಮಾನ್ಯ. ಕಿಟೆಲ್ ಕೂಡ ಇದನ್ನು ಪಾಲಿಸಿದ್ದಾನೆ. ಆದರೆ, ಈಗಿನ ಬರವಣಿಗೆಗೆ ಅವಲೋಕಿಸಿದ ಪ್ರತಿಯಲ್ಲಿ ನಡುನಡುವೆ ಅನೇಕ ಪದಗಳು ದಪ್ಪಕ್ಕರದಲ್ಲಿ ಬಂದಿಲ್ಲ. ಆ ಪದಗಳ ಅಯ್.ಪಿ.ಎ. ಲಿಪಿಯ ರೂಪವೂ ದಪ್ಪಕ್ಕರದಲ್ಲಿ ಇಲ್ಲ. ಇದಕ್ಕೆ ಕಾರಣ ತಿಳಿಯುವುದಿಲ್ಲ. ಉದಾ.: ಪುಟ ೧೧೭, ೩೩೧, ೮೧೬. ಕುತೂಹಲಕ್ಕೆಂದು

ಮರಿಯಪ್ಪ ಬಟ್ಟ ಅವರು ಕಿಟೆಲ್ ಅವರ ನಿಗಂಟನ್ನು ತಿದ್ದಿ ಪ್ರಕಟಿಸಿರುವ ನಿಗಂಟನ್ನು ಅವಲೋಕಿಸಿದಾಗ ಅಲ್ಲಿ ಈ ಎಲ್ಲ ನೋಂದಣಿಗಳೂ ದಪ್ಪಕ್ಕರದಲ್ಲಿ ಬಂದಿವೆ. ಇವು ಕಿಟೆಲ್ ನಿಗಂಟಿನಲ್ಲಿ ಮುದ್ರಣ ದೋಶಗಳೆ ಎಂದು ಹೇಳುವುದು ಕಶ್ಟ. ಇಂತಾ ನೋಂದಣಿಗಳ ಸಂಕೆ ತುಂಬಾ ಇದೆ.

ಕನ್ನಡ ಬಾರದವರೂ ಈ ನಿಗಂಟನ್ನು ಬಳಸುವುದಕ್ಕೆ ಅನುವು ಮಾಡುವುದಕ್ಕಾಗಿ ನೋಂದಣಿಗಳನ್ನು ಕನ್ನಡ ಲಿಪಿಯಲ್ಲಿ ಕೊಟ್ಟ ಬಳಿಕ ಅಯ್.ಪಿ.ಎ. ಲಿಪಿಯಲ್ಲಿ ಕೊಟ್ಟಿದೆ. ಈ ಅಯ್.ಪಿ.ಎ. ಸಂಕೇತಗಳನ್ನು ನಿಗಂಟಿನ ಮೊದಲಲ್ಲಿ ಕೊಟ್ಟು ಅವುಗಳು ಪ್ರತಿನಿಧಿಸುವ ಕನ್ನಡ ಧ್ವನಿಮಾಗಳನ್ನು, ಕನ್ನಡ ಲಿಪಿಗಳಲ್ಲಿ ಯಾವುದು ಪ್ರತಿನಿಧಿಸುತ್ತದೆ ಎಂಬುದನ್ನು ಕೊಟ್ಟಿದ್ದಾನೆ. ನೋಂದಣಿಗಳನ್ನು ಕೊಡುವಾಗ ಕನ್ನಡ ಅಕ್ಕರಮಾಲೆಯ ಅಕಾರಾದಿಯನ್ನು ಅನುಸರಿಸಿದ್ದಾನೆ. ಅಯ್.ಪಿ.ಎ. ಸಂಕೇತಗಳನ್ನು ಕೊಡುವಾಗ ಕನ್ನಡ ಅಕ್ಷರಮಾಲೆಯನ್ನು ಕೊಡಲಾಗಿದೆ. ಹೀಗಾಗಿ ಕನ್ನಡ ಗೊತ್ತಿಲ್ಲದವರೂ ಕನ್ನಡ ಅಕಾರಾದಿಯನ್ನು ಅನುಸರಿಸುವುದಕ್ಕೆ ಅನುಕೂಲ. ಪುಸ್ತಕದ ಮೊದಲಲ್ಲಿ ಕನ್ನಡ ಅಕ್ಷರಮಾಲೆಯನ್ನು, ಅಯ್.ಪಿ.ಎ. ಸಂಕೇತಗಳ ಜೊತೆಗೆ ಕೊಡುವಾಗ ಸಂಸ್ಕೃತ ಲಿಪಿಗಳನ್ನೂ ಜೊತೆಯಲ್ಲಿ ಕೊಟ್ಟಿದೆ. ಇದರಿಂದ ಸಂಸ್ಕೃತ ತಿಳಿದವರು ಈ ನಿಗಂಟು ಬಳಸುವುದಕ್ಕೆ ಮತ್ತು ತುಲನಿಕವಾಗಿ ಅಧ್ಯಯನ ಮಾಡುವವರಿಗೆ ಅನುಕೂಲವಾಗಬಹುದು. ಮೊದಲಿಗೆ ನೋಂದಣಿಯನ್ನು ಕನ್ನಡ ಲಿಪಿಯಲ್ಲಿ ದಪ್ಪಕ್ಕರದಲ್ಲಿ ಮತ್ತು ಅಯ್.ಪಿ.ಎ.ದಲ್ಲಿ ಸಾಮಾನ್ಯವಾಗಿ ಕೊಟ್ಟು ಪೂರ್ಣವಿರಾಮವನ್ನು ಕೊಟ್ಟಿದೆ. ಆನಂತರ ಮುಂದೆ ಒಂದು ಜಾಗವನ್ನು ಬಿಟ್ಟು ಅವುಗಳಿಗೆ ಅರ್ತವನ್ನು ಕೊಟ್ಟಿದೆ. ನೋಂದಣಿಗಳಿಗೆ ಇಲ್ಲಿ ಒಂದೆರಡು ಉದಾಹಣೆಗಳನ್ನು ಕೊಟ್ಟಿದೆ.

ಉದಾ.: ಕೀಕಸ kîkasa. A boan.ಪು. ೪೨೭.

ನಿಸಿ nisi. To squeeze with the thumb and fore finger (My.). ಪು. ೮೮೭.

ಪಂಕಿ panki. A perennial plant, Tephrosia purpurea pers. (St. & Pl.). ಪು. ೯೧೯.

ತೊಪ್ಪೆ toppe. Fresh cow-dung (My.; Si. 880. 402). ತೊಪ್ಪೆ ಬರುವುದೇ ಹೆಪ್ಪಿಗೆ? (ಕಡಿತ.). ಪು. ೭೫೩.

ಹೀಗೆ ನೋಂದಣಿಯನ್ನು ಕೊಡುವಾಗ ಪ್ರತಿಯೊಂದು ನಿಗಂಟಿಮವೂ ಅದರದೆ ಆದ ರಚನೆ, ವ್ಯಾಕರಣಾತ್ಮಕ ಕೆಲಸ ಮತ್ತು ಸ್ವಭಾವವನ್ನು ಹೊಂದಿರುತ್ತದೆ. ಇವುಗಳನ್ನು ಆದರಿಸಿ ಅದಕ್ಕನುಗುಣವಾದ ಸೂಕ್ತ ರೀತಿಯ ರಚನೆಯನ್ನು ಹಾಕಿಕೊಳ್ಳಲಾಗಿದೆ.

ಪದವೊಂದು ಸಾದಿತ ರೂಪವಾಗಿದ್ದಲ್ಲಿ ಆ ಪದದ ದಾತು ರೂಪವನ್ನು ನೋಂದಣಿಯ ಪೂರ್ಣವಿರಾಮ ಕೊಟ್ಟು ನಂತರ ಕಂಸದೊಳಗೆ ಜಿಡಿ. (from ಎಂಬುದಕ್ಕೆ

ಸಂಕೇತರೂಪ) ಎಂಬುದನ್ನು ತೋರಿಸಿ ದಪ್ಪಕ್ಕರದಲ್ಲಿಯೆ ಕೊಟ್ಟಿದೆ. ಆನಂತರ ಮತ್ತೆ ಪೂರ್ಣವಿರಾಮವನ್ನು ಕೊಟ್ಟು ಇಂಗ್ಲೀಶಿನಲ್ಲಿ ಅರ್ತವನ್ನು ಕೊಟ್ಟಿದೆ. ಈ ಸಂದರ್ಬಗಳಲ್ಲಿ ಬಹುತೇಕ ಈ ದಾತುರೂಪ ಇನ್ನೊಂದು ನೋಂದಣಿ ಆಗಿರುತ್ತದೆ.

ಉದಾ.: ಆಧಿಪತ್ಯ âdipathya. (fr. Cಧಿಪw). Supremacy, sovereignty, power, authority. ಪು. ೧೫೫.

ಅಧಿಪತಿ âdi-pathi. = ಅಧಿಪ.೦ ruler, a commander, a regent; a king.ಪು. ೫೪.

ಇಲ್ಲಿ ಆಧಿಪತ್ಯ ಎನ್ನುವ ಪದವು ಅಧಿಪತಿ ಎನ್ನುವ ಪದದಿಂದ ಸಾಧಿಸಿದ ಪದವಾಗಿದೆ ಎಂಬುದನ್ನು ಇದು ತಿಳಿಸುತ್ತದೆ.

ಇಲ್ಲಿ ಹೀಗೆ ಪದಗಳನ್ನು ಕೊಡುವಾಗ ಪದದ ರಚನೆಯನ್ನು ತೋರಿಸುವ ಕೆಲಸವನ್ನೂ ಮಾಡುತ್ತಾರೆ. ಈ ಮೇಲಿನ ಉದಾಹರಣೆಯಲ್ಲಿ ಅಧಿಪತಿ ಎಂಬ ಪದವು ರಚನೆಯಾಗಿದ್ದು ಅದರಲ್ಲಿ ಅಧಿ ಮತ್ತು ಪತಿ ಎಂಬ ಎರಡು ಪದಗಳನ್ನು ಅದು ಒಳಗೊಂಡಿದೆ. ಕಿಟೆಲ್ ಇಂತಾ ರಚನೆಯಿರುವ ಪದಗಳನ್ನು ಅದರಲ್ಲಿರುವ ಪದಗಳನ್ನು ನಡುವೆ ಒಂದು ಅಡ್ಡಗೆರೆಯನ್ನು ಹಾಕುವ ಮೂಲಕ ಒಡೆದು ತೋರಿಸುತ್ತಾರೆ. ಅಯ್.ಪಿ.ಎ. ಲಿಪಿಯಲ್ಲಿ ಇದನ್ನು ತೋರಿಸುತ್ತಾರೆ.

ಉದಾ.: ಅಧಿಪತಿ âdi-pathi. = ಅಧಿಪ. A ruler, a commander, a regent; a king. ಪು. ೫೪.

ಕಮಲಾಸನ kamala-âsana. Brahma. 2, a mode of sitting in yoga practice (My.).ಪು.೩೬೭

ಪದವೊಂದರ ರಚನೆಯಲ್ಲಿ ಪೂರ್ವಪ್ರತ್ಯಯವಿದ್ದರೆ ಅದನ್ನು ಒಡೆದು ತೋರಿಸಿದೆ.

ಉದಾ.: ಆಧೂತ â-dûta. Shaken. ಪು. ೧೫೫

ನಿರ್ದಯ nir-daya.Pitiless, unmerciful, unkind (ರಿ. ೧೬, ೨೨). ೨, = ನಿರ್ದಯೆ (My.). ಪು. ೮೭೭

ಇಲ್ಲಿ ಆ ಎಂಬ ಮತ್ತು ನಿರ್ ಎಂಬ ಪೂರ್ವಪ್ರತ್ಯಯಗಳು ಕ್ರಮವಾಗಿ ಧಾತು ಮತ್ತುದಯಎಂಬ ಪದಗಳಿಗೆ ಸೇರಿಕ್ರಮವಾಗಿ ಆಧೂತ ಮತ್ತು ನಿರ್ದಯ ಎಂಬ ಪದಗಳು ಬೆಳೆದಿವೆ. ಇಲ್ಲಿ ಮುಖ್ಯವಾದ ಒಂದು ವಿಚಾರವೆಂದರೆ ಹೀಗೆ ಸೇರುವ ಪೂರ್ವಪ್ರತ್ಯಯಗಳು ಎಲ್ಲವೂ ಸಂಸ್ಕ್ರತದವು ಆಗಿವೆ ಮತ್ತು ಈ ಪೂರ್ವಪ್ರತ್ಯಯಗಳು ಹೆಚ್ಚಾಗಿ ಸಂಸ್ಕೃತದ ಪದಗಳ ಮೇಲೆ ಹತ್ತುತ್ತವೆ. ಈ ರಚನೆ ಕನ್ನಡದಲ್ಲಿ ಆಗಿದೆಯೆ ಇಲ್ಲವೆ ಸಂಸ್ಕೃತದ ರಚನೆ ಇರುವ ಪದಗಳನ್ನು ಕನ್ನಡ ತೆಗೆದುಕೊಂಡಿದೆಯೆ ಎಂಬುದು ವಿಚಾರಣೀಯ. ಇಂತಾ ಸಂದರ್ಬದಲ್ಲಿ ಈ ರಚನೆಗಳು ಸಂಸ್ಕೃತದಲ್ಲಿಯೆ ಆದವು

ಎಂದು ತಿಳಿದುಕೊಳ್ಳುವುದು ಸೂಕ್ತ. ಕನ್ನಡದಲ್ಲಿ ಈ ರಚನೆ ಆಗಿಲ್ಲದಿದ್ದರೂ ಈ ರಚನೆಯನ್ನು ತೋರಿಸುವುದರಿಂದ ಸಂಶೋದಕರಿಗೆ ಅನುಕೂಲವಾಗುತ್ತದೆ.

ಒಂದು ಪದದ ಮೇಲೆ ಪದಪ್ರತ್ಯಯವೊಂದು ಸೇರಿ ಇನ್ನೊಂದು ಪದವಾದ ಹೆಚ್ಚಿನ ನಿದರ್ಶನದಲ್ಲಿಯೂ ಹೀಗೆ ಅದರ ರಚನೆಯನ್ನು ನಡುವೆ ಗೆರೆಯನ್ನು ಹಾಕಿ ಒಡೆದು ತೋರಿಸಿದೆ.

ಉದಾ.: ಒಲಪುಗಾತಿ Olpu-gâti. = ಒಲಪುಗಾರ್ತಿ. (My.).ಒಲಪುಗಾತಿಗೆ ಮನೆಯೆಲ್ಲಾ ಹಿತ್ತಲು (Prv.). ಪು. ೩೧೫

ಚಿತ್ತಜ citta-ja. Produced within the mind: kâma(Cpr. 5, 55). ಪು. ೬೦೮.

ತಾಟುಗಾಱ tâtu-gâra. A Pompous, or proud, man ತಾಟುಗಾಱನು ಆಟಕ್ಕೆ ಹೋಗಿ ಮೋಟಗಾಱನಾಗಿ ಬಿದ್ದ (Prv.).ಪು. ೭೦೬.

ಕನ್ನಡದಾಗ ಹೆಚ್ಚಾಗಿ ಪದದ ಕೊನೆಗೆ ಸೇರುವ ಅಂತಪ್ರತ್ಯಯಗಳೆ ಇರುವುದು. ಹೀಗೆ ಪದದ ಕೊನೆಯಲ್ಲಿ ಸೇರುವ ಪ್ರತ್ಯಯಗಳನ್ನು ಪದವೊಂದಕ್ಕೆ ಸೇರಿ ಹೊಸ ಪದಗಳನ್ನು ತಯಾರಿಸುವುದಕ್ಕೆ ಬಳಕೆಯಾಗುವ ಪದಪ್ರತ್ಯಯಗಳು ಮತ್ತು ಪದವೊಂದಕ್ಕೆ ಸೇರಿ ಆ ಪದದ ವಿವಿಧ ರೂಪಗಳನ್ನು ಮಾಡುವ ಪದರೂಪಪ್ರತ್ಯಯಗಳು ಎಂದು ಎರಡು ಬಗೆಯಾಗಿ ನೋಡಬಹುದು. ಪದರೂಪ ಪ್ರತ್ಯಯಗಳು ವ್ಯಾಕರಣಾತ್ಮಕ ಮತ್ತು ಪದಪ್ರತ್ಯಯಗಳು ಕೋಶಾತ್ಮಕ. ಪದಪ್ರತ್ಯಯಗಳು ಪದದ ಮೇಲೆ ಸೇರಿ ಇನ್ನೊಂದು ಹೊಸ ಪದಗಳನ್ನು ಹುಟ್ಟಿಸುತ್ತವೆ. ಹೀಗೆ ಹೊಸಪದಗಳನ್ನು ಹುಟ್ಟಿಸುವ ಹಲವಾರು ಕ್ರಮಗಳು ಕನ್ನಡದಲ್ಲಿ ಇದ್ದು ಹಲವಾರು ಪ್ರತ್ಯಯಗಳು ಇವೆ. ಇಂತಾ ಎಲ್ಲ ಪ್ರತ್ಯಯಗಳನ್ನು ಕಿಟೆಲ್ ಹೀಗೆ ಒಡೆದು ತೋರಿಸುವ ಪ್ರಯತ್ನ ಮಾಡಿಲ್ಲ. –ಕಾರ, –ಗಾರ, –ಗಾತಿ, –ಜ ಮೊದಲಾದ ಕೆಲವು ಪ್ರತ್ಯಯಗಳನ್ನು ಮಾತ್ರ ಹೀಗೆ ಒಡೆದು ತೋರಿಸಿದ್ದಾನೆ. ಇದಕ್ಕೆ ಕಾರಣ ತಿಳಿಯದು. ಹಾಗೊಂದು ವೇಳೆ ಪ್ರತ್ಯಯಗಳನ್ನು ಪಡೆದುಕೊಂಡು ಬೆಳೆದ ಎಲ್ಲ ಪದಗಳನ್ನೂ ಒಡೆದು ತೋರಿಸುವುದಾದರೆ ಅದೊಂದು ಇತಿಹಾಸಿಕ ಕನ್ನಡದ ಬೆಳವಣಿಗೆಯ ಸಮಗ್ರ ನೋಟವನ್ನು ಕೊಡುವಂತಾ ಕೆಲಸವಾಗುತ್ತದೆ. ಅದು ಬಹುಶ್ರಮದಾಯಕವಾದ ಕೆಲಸ. ಇವುಗಳ ಹೊರತಾಗಿ ಇತರ ಪದಪ್ರತ್ಯಯಗಳ ಅರಿವು ಕಿಟೆಲ್ಲನಿಗೆ ಇದ್ದಿತು. ಹಾಗಿದ್ದೂ ಅವುಗಳೆಲ್ಲವನ್ನೂ ಒಡೆದ ತೋರಿಸಿಲ್ಲದಿರುವುದು ಯಾಕೊ ತಿಳಿಯದು.

ಉದಾ.: ಕೋಮಟಿ Komati. A Vaisya shopkeeper (Bp. 25, 23). ಕೋಮಟಿ ಮೋಸ ಹೋಗುವುದಿಲ್ಲ, ಮೋಸ ಹೋದರೆ ಹೇಟುವುದಿಲ್ಲ.– ಕೋಟಿವರಹಾ ಕೊಟ್ಟರೂ ಕೋಮಟೀ ಸಾಕ್ಷಿ ನಮ್ಬ ಕೂಡದು (Prvs.). [ಗ್ನಾತಿ ಪದಗಳ ವಿವರಣೆಗೆ ಮತ್ತು ಇನ್ನೊಂದು ಅರ್ತಕ್ಕೆ ಕೋಶ ನೋಡಿ]. ಪು. ೪೯೮.

ಕೋಮಟಿಗ Komamtiga. = ಕೋಮಟಿ. (C.). See Bp. 50, 39; Si 298; B. 3, ೩೩. ಪು. ೪೯೮

ಕೋಮಟಿಗಿತ್ತಿ Komamtiga-itti. A Komati female (C.). ಪು. ೪೯೮

ಕೋಮಟಿತನ Komamti-itti. A Komati female (C.). ಪು. ೪೯೮

ಈ ಮೇಲಿನ ಉದಾಹರಣೆಯಲ್ಲಿ ಕೋಮಟಿ ಎಂಬ ಪದಕ್ಕೆ –ಇಗ ಎಂಬ ಪದಪ್ರತ್ಯಯ ಸೇರಿ ಕೋಮಟಿಗ ಎಂಬ ಪದವೊಂದು ಬೆಳೆದಿದೆ. ಈ ರಚನೆಯನ್ನು ಕಿಟೆಲ್ ತೋರಿಸಿಲ್ಲ. ಇದರ ಮುಂದುವರೆದ ಬೆಳೆವಣಿಗೆಗಳಾದ ಕೋಮಟಿಗಿತ್ತಿ ಮತ್ತು ಕೋಮಟಿತನ ಇವುಗಳು ಕ್ರಮವಾಗಿ ಕೋಮಟಿಗ+–ಇತ್ತಿ ಮತ್ತು ಕೋಮಟಿ+–ತನರಚನೆಯನ್ನು ಹೊಂದಿವೆ. ಇದನ್ನು ಕಿಟೆಲ್ ಒಡೆದು ತೋರಿಸಿದ್ದಾರೆ. ಇಂತಹಾ ಹಲವಾರು ಪದಗಳನ್ನು ಕಾಣಬಹುದು.

ಉದಾ.: ಬೆದಱ್ bedar. ಬೆದಱು. ೨. Agitation, alarm, fright, fear (ಪೂರ್ಣ ವಿವರಕ್ಕೆ ನೋ.) ಪು. ೧೧೩೮.

ಬೆದಱಣೆ bedaraGe. Alarm, etc. (My.; Si. 469). – ಬೆದರಣೆಸೊಲ್ಲು. Menace, reproach (ಭರ್ತ್ಸನ, ಅಪಕಾರಗೀ Si. ೫೭). ಪು. ೧೧೩೮.

ಬೆದಱಿಕೆ bedarike. Fright, alarm, etc. (My.; B. 4, 72). ಪು. ೧೧೩೮.

ಬೆದಱಿಸು bedarisu.To alarm to frighten (My.; B. 2, 21; 4, 90; Bhagavata10, 18, 2). ಬದಲು ಮಾತಾಡುವವನು ಬೆದಱಿಸಿದರೆ ಬಿಟ್ಟಾನೇ?– ಬಾಯಿನ್ದ ಬೆದಱಿಸಿ ಹೂಸು ಮಱಿಸಿದ ಹಾಗೆ (Prvs.). ಪು. ೧೧೩೮.

ಬೆದಱಿಸುವಿಕೆ bedarisuvike. Frightening (My.; ವಿಭರ್ತ್ಸನ Si. ೪೬೭).ಪು. ೧೧೩೮.

ಮೊದಲ ಉದಾಹರಣೆಯ ಸಂದರ್ಬದಲ್ಲಿಬೆದಱ್ ಎಂಬುದು ಒಂದು ಪದ. ಇದಕ್ಕೆ ಬಿನ್ನ ಪ್ರತ್ಯಯಗಳು ಸೇರುವ ಮೂಲಕ ಬೆದಱಣೆ (ಬೆದಱ್+–ಅಣೆ), ಬೆದಱಿಕೆ (ಬೆದಱ್+–ಇಕೆ), ಬೆದಱಿಸು (ಬೆದಱ್+–ಇಸು) ಎಂಬ ಪದಗಳು ಬೆಳೆದಿವೆ. ಇನ್ನು ಮುಂದುವರೆದು ಬೆದಱಿಸುವಿಕೆ (ಬೆದಱ+–ಇಸು+–ವ್–+ಇಕೆ) ಎಂಬ ಪದ ತುಸು ಸಂಕೀರ್ಣ ರಚನೆಯನ್ನು ಹೊಂದಿದೆ. ಇದರಲ್ಲಿ ಬೆದಱ್ ಎಂಬ ಕ್ರಿಯಾಪದಕ್ಕೆ –ಇಸು ಎಂಬ ಸಕರ್ಮಕ ಪ್ರತ್ಯಯ ಸೇರಿ ಬೆದಱಿಸು ಎಂಬ ಕ್ರಿಯಾಪದ ಬೆಳೆದಿದೆ. ಇದಕ್ಕೆ ಆನಂತರ ನಾಮಿಕೆ (Nominaliser) ಪ್ರತ್ಯಯ, ಸೇರಿ ಬೆದಱಿಸುವಿಕೆ ಎಂದು ಬೆಳೆದು ನಾಮಪದವಾಗಿದೆ.ಈ ಎಲ್ಲ ಬಗೆಯ ಬೆಳವಣಿಗೆಗಳನ್ನು ಕಿಟೆಲ್ ತೋರಿಸಿಲ್ಲ. ಸಂಕೀರ್ಣ ರಚನೆಯ ಸಾಕಷ್ಟು ಪದಗಳನ್ನು ಹೀಗೆ ರಚನೆಯನ್ನು ತೋರಿಸಿದೆ ಕೊಟ್ಟಿದೆ.

ಉದಾ.: ಅಲಂಕರಿಸುವಿಕೆ alaEkarisuvike. Adorning (ಭೂಷಣ, ಅಲಂಕ್ರಿಯೆ Si ೨೧೭). ಪು. ೧೧೦

ಪದರೂಪಪ್ರತ್ಯಯಗಳು ಸೇರಿರುವ ಹಲವು ಪದಗಳನ್ನೂ ಕಿಟೆಲ್ ತಮ್ಮ ನಿಗಂಟಿನಲ್ಲಿ ನೋಂದಣಿಯಾಗಿ ಕೊಟ್ಟಿದ್ದಾರೆ. ಅಂದರೆ ಪದದ ಮೇಲೆ ವ್ಯಾಕರಣಾತ್ಮಕ ಪ್ರತ್ಯಯವೊಂದು ಸೇರಿ ಅದಕ್ಕೆ ಹೆಚ್ಚಿನ ವ್ಯಾಕರಣಾಂಶವನ್ನು ತಂದುಕೊಡುವ ನಿದರ್ಶನಗಳು.

ಒಂದು ಪದ ಹಲವು ರೂಪಗಳಲ್ಲಿ ಬಳಕೆಯಲ್ಲಿದ್ದರೆ ಅಂತವುಗಳನ್ನು ಒಟ್ಟಿಗೆ ಕೊಡುತ್ತಾರೆ. ಅವುಗಳಲ್ಲಿ ಒಂದನ್ನು ನೋಂದಣಿಯಾಗಿ ಮಾಡಿಕೊಂಡು ಅದರ ಅಯ್.ಪಿ.ಎ. ಲಿಪ್ಯಂತರವನ್ನು ಕೊಟ್ಟು ಅದರ ಮುಂದೆ '=' ಚಿನ್ನೆಯನ್ನು ಹಾಕಿ ಉಳಿದೆಲ್ಲ ಪದರೂಪಗಳನ್ನು ಕೊಡುತ್ತಾರೆ.

ಉದಾ.: ಉರಲ್ ural. ೧. ಉರಲು. = ಉರಿಲ್, ಉರುಲ್, ಉರುಳ್ ೨, ಉರುಳು ೩, ಉರ್ಲು ೧, ಉರ್ಳು ೩. A running knot, a noose, a snare, gin ಪು. ೨೪೨.

ಉರಟಣಿ uratu2-ani3. = ಉರುಟಣಿ, ಉರುಟಾಣಿ, ಉರ್ಟಣಿ, ಉರ್ಟಾಣಿ. Rolling-play: a play of newly married couple., their justingly roling cocoanuts and balls between each other (My.). ಪು. ೨೪೨.

ಈ ಮೇಲಿನ ಎರಡು ಉದಾಹರಣೆಗಳಲ್ಲಿ ಪ್ರತಿಯೊಂದಕ್ಕು ಕ್ರಮವಾಗಿ ಆರು ಮತ್ತು ನಾಲ್ಕು ರೂಪಗಳನ್ನು ಕೊಡಲಾಗಿದೆ. ಇವುಗಳಲ್ಲಿ ನೋಂದಣಿಯಾಗಿ ಆಯ್ಕೆ ಮಾಡಿಕೊಂಡಿರುವ ರೂಪಕ್ಕೆ ಏನು ಮಾನದಂಡ ಎಂಬುದು ತಿಳಿಯುವುದಿಲ್ಲ. ಸಾಮಾನ್ಯವಾಗಿ ಬಳಕೆಯನ್ನು ಆದರಿಸಿ ಹಲರೂಪಗಳಲ್ಲಿ ಒಂದು ಪ್ರದಾನರೂಪವನ್ನು ನಿರ್‍ದರಿಸಲಾಗುತ್ತದೆ. ಈ ಎಲ್ಲ ರೂಪಗಳನ್ನೂ ನೋಂದಣಿಯಾಗಿ ಅಕಾರಾದಿಯಲ್ಲಿ ಕೊಟ್ಟಿರುತ್ತದೆ. ಅಂದರೆ ಉರಲ್ ನೋಂದಣಿಯ ಮುಂದೆ ಕೊಟ್ಟಿರುವ ಎಲ್ಲ ರೂಪಗಳು ನೋಂದಣಿಯಾಗಿ ಅಕಾರಾದಿಯಲ್ಲಿ ಬಂದಿರುತ್ತವೆ. ಈ ಎಲ್ಲ ನೋಂದಣಿಗಳ ಮುಂದೆ ಉರಲ್ ನೋಂದಣಿಯನ್ನು ಉದ್ದರಿಸಲಾಗಿರುತ್ತದೆ. ಆ ಪದದ ಅರ್‍ತವನ್ನು ತಿಳಿಯಬಯಸುವ ಆಸಕ್ತರು ಆ ಪದದಿಂದ ಉರಲ್ ಪದಕ್ಕೆ ಬಂದು ಅದರ ಅರ್‍ತವನ್ನು ತಿಳಿದುಕೊಳ್ಳಬೇಕು.

ಇಲ್ಲಿ ಇನ್ನು ಕೆಲವು ಅಂಶಗಳನ್ನು ಗಮನಿಸಬೇಕು. ಈ ಮೇಲಿನ ಎರಡು ಉದಾಹರಣೆಗಳಲ್ಲಿ ಮೊದಲನೆಯದು ಉರಲ್ ಇದಕ್ಕೆ ಒಟ್ಟು ಆರು ರೂಪಗಳನ್ನು ಕೊಟ್ಟಿದೆ. ಉರಲ್ ಎಂಬ ಮೂರು ನೋಂದಣಿಗಳನ್ನು ಕೊಟ್ಟಿದೆ.

ಉದಾ.: ಉರಲ್ ural. ೧. ಉರಲು. = ಉರಿಲ್, ಉರುಲ್, ಉರುಳ್ ೨, ಉರುಳು ೩, ಉರ್ಲು ೧, ಉರ್ಳು ೩. A running knot, a noose, a snare, gin. ಪು. ೨೪೨.

ಉರಲ್ ural. ೨. ಉರಲು. = ಉರ್ಲು ೨, (ಉರವಲ). Aliment of fire, fuel (S. Mhr.). ಪು. ೨೪೨.

ಉರಲ್ ural. ೩. ಉರಲು. = ಉರುಳು ೨, etc., ಉರ್ಲು ೩. Rolling; crumbling. ಪು. ೨೪೨.

ಉರಲ್ ಎಂಬ ಪದ ಅದರ ಬಿನ್ನ ರೂಪಗಳಲ್ಲಿ ಬಿನ್ನ ಅರ್ತಗಳಲ್ಲಿ ಬಳಕೆಯಲ್ಲಿದೆ. ಇವುಗಳಲ್ಲಿ ನಾವು ಚರ್ಚಿಸುತ್ತಿರುವ ಮೊದಲ ಉದಾಹರಣೆಯನ್ನು ಗಮನಿಸೋಣ. ಅದಕ್ಕೆ ಕೊಟ್ಟಿರುವ ಮೂರನೆಯ ರೂಪ ಉರುಳ್ ೨ ಎಂಬ ರೂಪವನ್ನು ಅವಲೋಕಿಸೋಣ. ನಿಗಂಟಿನಲ್ಲಿ ಉರಲ್ ಇದಕ್ಕೆ ಕೊಟ್ಟಿರುವ ಸಮರೂಪಿ ಉರುಳ್ಇದನ್ನು ಅವಲೋಕಿಸಲೆಂದು ಆ ನೋಂದಣಿಗೆ ಹೋದಾಗಅಲ್ಲಿ ಉರುಳ್ ಎಂಬ ಎರಡು ನೋಂದಣಿಗಳು ಇವೆ (ಪು. ೨೪೫). ಅವೆರಡೂ ಸಹಜವಾಗಿ ಬಿನ್ನಾರ್ತಕ. ಇವುಗಳಲ್ಲಿ ಯಾವ ನೋಂದಣಿಯನ್ನು ಓದುಗರು ಅವಗಾಹಿಸಬೇಕು ಎಂಬುದು ಸಮಸ್ಯೆಯಾಗುತ್ತದೆ. ಇದನ್ನು ಆ ಪದಗಳ ಮುಂದೆ ಸಂಬಂದಿತ ಸಂಕೆಯನ್ನು ಬಳಸುವುದರ ಮೂಲಕ ತೋರಿಸಲಾಗುತ್ತದೆ. ಆಗ ಈ ಎರಡರಲ್ಲಿ ಉರುಳ್ ೨ ನೋಂದಣಿಯನ್ನು ಉರುಲ್ ೧ ಇದರ ಅರ್ತಕ್ಕಾಗಿ ಗಮನಿಸಬೇಕು. ಇದೆ ರೀತಿಯಲ್ಲಿ ಉರುಳುಮತ್ತು ಉರ್ಲು ಎಂಬ ಮೂರು ನೋಂದಣಿಗಳು ಇವೆ. ಈ ಮೂರು ನೋಂದಣಿಗಳಲ್ಲಿ ಕ್ರಮವಾಗಿ ಉರುಳು ೩, ಉರ್ಲು ೩ ಎಂಬ ನೋಂದಣಿಗಳನ್ನು ಗಮನಿಸಬೇಕು. ಹೀಗೆ ಬಹು ಸೂಕ್ಶ್ಮವಾದ ಉದ್ದರಣೆಗಳನ್ನು ಕೊಟ್ಟಿರುವುದು ಓದುಗರಿಗೆ ಹೆಚ್ಚು ಅನುಕೂಲಕರ.

ಉರಟಣಿ ಎಂಬ ನೋಂದಣಿಯನ್ನು ಇನ್ನೊಂದು ಇಂತದೆ ಸೂಕ್ಶ್ಮವಾದ ವಿಚಾರಕ್ಕಾಗಿ ಮಾತಿಗೆತ್ತಿಕೊಳ್ಳಬಹುದು. ಒಂದು ಪದದ ರೂಪ ರಚನೆಯಾಗಿದ್ದರೆ ಆ ರಚನೆಯನ್ನು ಒಡೆದು ತೋರಿಸುವುದನ್ನು ಈ ಮೇಲೆ ನೋಡಿದೆ. ಇಲ್ಲಿ ಮಾತಿಗೆತ್ತಿಕೊಂಡಿರುವ ಉರಟಣಿ ಎಂಬ ಪದ ಉರುಟು+ಅಣಿ ಎಂಬ ರಚನೆಯನ್ನು ಹೊಂದಿದೆ. ಇದರಲ್ಲಿ ಉರುಟು (ಪು. ೨೪೪) ಎಂಬ ಪದ ಮತ್ತು –ಅಣಿ ಎಂಬ ಪ್ರತ್ಯಯಗಳು ಸೇರಿವೆ. ಉರುಟಣಿ ಎಂಬ ರಚನೆಯಲ್ಲಿ ಇರುವ ಉರುಟು ಇದರ ಅರ್ತವನ್ನು ತಿಳಿದುಕೊಳ್ಳುವುದಕ್ಕೆ ಆ ಪದದ ನೋಂದಣಿಗೆ ಓದುಗರು ಹೋಗಬಹುದು. ಕಿಟೆಲ್ ನಿಗಂಟಿನಲ್ಲಿ ಉರುಟು ಶಬ್ದದ ಒಟ್ಟು ಅಯ್ದು ನೋಂದಣಿಗಳು ಇವೆ. ಹಾಗಾದರೆ ಈ ಅಯ್ದರಲ್ಲಿ ಉರುಟಣಿ ಪದದಲ್ಲಿ ಇರುವ ಪದ ಯಾವುದು ಎಂಬುದನ್ನು ತಿಳಿದುಕೊಳ್ಳುವುದು ಕಶ್ಟ, ಆದ್ದರಿಂದ, ಇದಕ್ಕೆ ಅನುಕೂಲವಾಗುವಂತೆ ಕಿಟೆಲ್ ಆ ಅಯ್ದು ಪದಗಳಲ್ಲಿ ಯಾವ ಪದ ಉರುಟಣಿ ರಚನೆಯಲ್ಲಿದೆ ಎಂಬುದನ್ನೂ ನಿರ್ದೇಶಿಸಿದ್ದಾನೆ. ಅದರಲ್ಲಿ ಉರುಟು೨ಎಂಬ ಪದ ಈ ರಚನೆಯಲ್ಲಿ ಇದೆ. ಅದರಂತೆಯೆ ಈ ಪದದಾಗ ಇರುವ –ಅಣಿ ಎಂಬ ಪ್ರತ್ಯಯವನ್ನು ತಿಳಿದುಕೊಳ್ಳುವುದಕ್ಕಾಗಿ ಆ ನೋಂದಣಿಗೆ (ಪು. ೪೦) ಓದುಗರು ಸಹಜವಾಗಿ ಹೋಗಬೇಕಾಗುತ್ತದೆ. ಕಿಟೆಲ್ ನಿಗಂಟಿನಲ್ಲಿ ಅಣಿ

ಎಂಬ ಒಟ್ಟು ಮೂರು ರೂಪಗಳು ಇವೆ. ಈ ಮೂರು ರೂಪಗಳಲ್ಲಿ –ಅಣೆ೩ ಎಂಬ ರೂಪ ಈ ರಚನೆಯಲ್ಲಿದೆ ಎಂಬುದನ್ನು ಉಲ್ಲೇಖದ ಮೂಲಕ ಸೂಚಿಸಲಾಗಿದೆ.

ಕಿಟೆಲ್ ತನ್ನ ನಿಗಂಟಿನಲ್ಲಿ ಪದಗಳನ್ನು ಮಾತ್ರವಲ್ಲದೆ ಪ್ರತ್ಯಯಗಳನ್ನೂ ನೋಂದಣಿಯಾಗಿ ಕೊಟ್ಟಿದ್ದಾನೆ. ಹಳಗನ್ನಡ ಸಾಹಿತ್ಯದ ಅಬ್ಯಾಸಿಗಳೂ ಈ ನಿಗಂಟಿನ ಉದ್ದಿಶ್ಟ ಗುಂಪು ಆಗಿರುವುದರಿಂದ ಇದು ಹೆಚ್ಚು ಉಪಯುಕ್ತವಾಗಿದೆ. ಸಾಮಾನ್ಯ ಪದಗಳಿಗೆ ಅರ್ತವನ್ನು ಕೊಡಬಹುದು. ಆದರೆ ವ್ಯಾಕರಣ ರೂಪಗಳಿಗೆ ಅರ್ತ ಕೊಡುವುದು ಕಶ್ಟ, ಬದಲಿಗೆ ಅವುಗಳ ಕೆಲಸವನ್ನು ಕೊಡಬಹುದು. ಹೀಗೆ ಹಲವಾರು ವ್ಯಾಕರಣ ರೂಪಗಳಿಗೆ ಅವುಗಳ ಕೆಲಸವನ್ನು ವಿವರಿಸಿದ್ದಾನೆ.

ಉದಾ.: ಕೆ ke. ೧ = ಅಕೆ, ಅಕ್ಕೆ ೨, ಅಗೆ ೧, ಇಕೆ ೨, ಇಕ್ಕೆ ೨, ಕ೨, ಕ್ಕೆ೧, ಗೆ೧, ಚೆ. A suffix of pointing or directing towards an object, etc. used to form the dative singular (Smd. 115). ಪು. ೪೬೩

ಕೆ ke. 2 =ಕ್ಕೆ೨, ಗೆ೨. A suffix used to form the third person of the imperative (Smd. 269). ಪು. ೪೬೩.

ಕೆ ke. 3 = (ಇಕೆ ೧, ಇಕ್ಕೆ ೩), ಗೆ೪. A nominal and pronominal suffix (Smd. 269), (perhaps taken from Sk.), ಪು. ೪೬೩.

ಕನ್ನಡ ಅಕ್ಷರಮಾಲೆಯ ಅಕ್ಷರಗಳನ್ನು ಮತ್ತೆ ಕೆಲವು ಕಾಗುಣಿತಗಳನ್ನೂ ಕಿಟೆಲ್ ನೋಂದಣಿಯಾಗಿ ಕೊಟ್ಟಿದ್ದಾರೆ.

ಉದಾ.: ಅ ಚಿ. ೧. The first letter of the Alphabet (Smd. 12). ಅ ಆ ಬಾರದಿದ್ದರೆ ಅಮರವಾದರೂ ಹೇಟು! ಎಮ್ಬನ್ತೆ (Prv.). ಅಜಿ.೧.ಪು. ೧

ಕ k. The tweny-first letter of the Alphabet (Smd. ೧೨. ೨೧). ಪು. ೩೨೯.

ಎಲ್ಲ ಕಾಗುಣಿತಗಳನ್ನು ಕಿಟೆಲ್ ಕೊಟ್ಟಿಲ್ಲ. ಬಹುಶಾ ಪಾರಂಪರಿಕ ಕನ್ನಡ ಕೃತಿಗಳಲ್ಲಿ ಮುಖ್ಯವಾಗಿ ವ್ಯಾಕರಣ ಕೃತಿಗಳಲ್ಲಿ ಉಲ್ಲೇಖವಾಗಿರುವ, ಪದರೂಪದಲ್ಲಿ ಬಳಕೆಯಾಗಿರುವವುಗಳನ್ನು ಮಾತ್ರ ಹೀಗೆ ಕೊಟ್ಟಿದೆ.

ಉದಾ.: ಕೆಕಾರ ke-kâra. The syllabal ಕೆ (Smd. ೧೮೫, ೨೭೮). ಪು. ೪೬೩.

ಇನ್ನು ಕೆಲವು ಸಂದರ್ಬಗಳಲ್ಲಿ ಪದಗಳನ್ನು ಅವುಗಳ ದಾತು ರೂಪದಲ್ಲಿ ಮಾತ್ರವಲ್ಲದೆ ಪ್ರತ್ಯಯಗಳು ಸೇರಿರುವ ರೂಪದಲ್ಲಿಯೂ ಕೊಟ್ಟಿದೆ. ಇದಕ್ಕೆ ಕಾರಣ ಗೊತ್ತಿಲ್ಲ, ಅಲ್ಲದೆ ಯಾವ ಯಾವ ಪದಗಳಿಗೆ ಹೀಗೆ ಪದರೂಪಗಳನ್ನು ಕೊಡಲಾಗಿದೆ ಎಂಬುದೂ ಗೊತ್ತಿಲ್ಲ. ಎಷ್ಟು ಪದಗಳಿಗೆ ಹೀಗೆ ಕೊಟ್ಟಿದೆ ಎಂಬುದನ್ನು ನಿಗಂಟಿನ ವಿಸ್ತೃತ ಅಧ್ಯಯನ

ವೊಂದು ಕಂಡುಕೊಳ್ಳಬಹುದು. ಕಿಟೆಲ್ ವ್ಯಾಕರಣ ರೂಪಗಳನ್ನು ಕೊಟ್ಟಾಗ ಕೆಲವು ರೂಪಗಳಿಗೆ ಅವುಗಳ ವ್ಯಾಕರಣದ ಕೆಲಸವನ್ನು ತೋರಿಸಿದ್ದಾನೆ. ಇನ್ನು ಕೆಲವಕ್ಕೆ ವ್ಯಾಕರಣ ಕೆಲಸವನ್ನು ತೋರಿಸಿಲ್ಲ, ಕೆಲವಕ್ಕೆ ವಿವರಣೆಯನ್ನು ಕೊಡುವ ಪ್ರಯತ್ನ ಮಾಡಿದ್ದಾನೆ ಮತ್ತು ಇನ್ನು ಕೆಲವಕ್ಕೆ ಏನನ್ನೂ ಬರೆದಿಲ್ಲ.

ಉದಾ.: ಇದ್ದು iddu. = ಇರ್ದು. P. p. ofಇರು೧, to be. ಪು. ೧೮೮.

ಇದ್ಧಾನು iddhânu. = ಇರ್ದಪನು or ಇರ್ದಹನು, ಇದ್ದಾನು, q. v. In opposition to ಇದ್ಧಾನೆ (See ಅದಾನು) this term means "he perhaps is", etc. ಪು. ೧೮೮.

ಇದ್ಧಾನೆ iddhânu-e3. =ಇದಾನೆ, ಇದ್ದಾನೆ. He is indeed, he is certainly is, he is (C.; B. 2, 24. 34). Conjunction. ಇದ್ಧೇನೆ, I am; E¢ÞÃ or E¢Þ,thou art; ಇದ್ಧಾಳೆ, she is (B. 2, 7; 4, 137) ಇದೆ, it is; ಇದ್ಧೇವೆ, we are; E¢ÞÃj, you are (B. 1, 15); ಇದ್ಧಾರೆ, they are; ಇದ್ಧಾವೆ, they are (B. 3, 58, 68 or ಇವೆ). ಪು. ೧೮೮.

ಈ ಮೇಲಿನ ಉದಾಹರಣೆಗಳಲ್ಲಿ ಇದ್ದು, ಇದ್ಧಾನು, ಇದ್ಧಾನೆ ಇವು ಇರು ೧ (ಪು. ೧೯೪) ಎಂಬ ಕ್ರಿಯಾಪದದ ವಿವಿದ ರೂಪಗಳು. ಇಲ್ಲಿ ಈ ಎರಡು ರೂಪಗಳನ್ನು ಯಾಕೆ ತೆಗೆದುಕೊಳ್ಳಲಾಗಿದೆ ಎಂಬುದು ತಿಳಿಯುವುದಿಲ್ಲ. ಈ ಎರಡರಲ್ಲಿ ಎರಡನೆಯದು ಲಿಂಗ–ವಚನ ಪ್ರತ್ಯಯಗಳನ್ನು ಪಡೆದಿದೆ. ಇಲ್ಲಿ ಏಕವಚನ–ಪುಲ್ಲಿಂಗ ರೂಪವನ್ನು ನೋಂದಣಿಯನ್ನಾಗಿ ಆರಿಸಿಕೊಂಡು ಉಳಿದ ರೂಪಗಳನ್ನು ಒಳಗೆ ಪಟ್ಟಿ ಮಾಡಿದೆ.

ಕಿಟೆಲ್ ತನ್ನ ನಿಗಂಟಿನಲ್ಲಿ ಕೆಲವು ಅನುಕರಣಾವ್ಯಗಳನ್ನೂ ಕೊಟ್ಟಿದ್ದಾರೆ.

ಉದಾ.: ಕೀ kî. 2.Animitative sound. - ಕೀ ಕೀ.Rep. The cry of certiain birds (C.); the squeaking of pigs (My.). ಪು. ೪೨೭

ಬುಡಕ್ಕನೆ budakkane. With the sound of ಬುಡ (My.; Shr. ಬುಟಕನ). ಪು. ೧೧೩೦.

ಕಿಟೆಲ್ ಪದಸಂಗ್ರಹದ ವೇಳೆಯಲ್ಲಿ ತೊರಿಸಿದ ಸೂಕ್ಷ್ಮತೆ ಬೆರಗುಗೊಳಿಸುತ್ತದೆ. ಅನುಕರಣ ಪದಗಳನ್ನೂ ಕಲೆಹಾಕಿರುವುದು ಮತ್ತು ಅವುಗಳನ್ನು ಕೊಡುವುದು ಗಮನೀಯ. ಅದಲ್ಲದೆ ಅವರ ಕಿವಿಗೆ ಕೇಳಿದ ಎಲ್ಲ ಬಗೆಯ ಬಳಕೆಗಳನ್ನು ಕಲೆ ಹಾಕಿ ಕೊಟ್ಟಿದ್ದಾರೆ.

ಸರಳಪದಗಳಾಗಿದ್ದ ಸಂದರ್ಬದಲ್ಲಿ ಅದು ಎಲ್ಲಿ ಬಳಕೆ ಆಗಿದೆ ಎಂದು ಮೂಲವನ್ನು ಒದಗಿಸಿಲ್ಲ. ಬದಲಿಗೆ ಸಾದಿತ ಪದಗಳು, ಸಾಂಸ್ಕೃತಿಕ ಇಲ್ಲವೆ ಪಾರಿಬಾಶಿಕ ಹೀಗೆ ಯಾವುದಾದರೂ ಮಹತ್ವವನ್ನು ಪಡೆದ ಪದಗಳಿಗೆ ಅವು ಬಳಕೆಯಾದ ಮೂಲವನ್ನು ಒದಗಿಸಿದೆ. ಆದರೆ ಇಂತ ಪದಗಳಿಗೆ ಮಾತ್ರ ಮೂಲವನ್ನು ಕೊಟ್ಟಿದೆ ಎಂದು

ಕರಾರುವಾಕ್ಕಾಗಿ ಹೇಳುವುದಕ್ಕೆ ಸಾಧ್ಯವೆ ಎಂಬುದನ್ನು ವಿಸ್ತೃತ ಅಧ್ಯಯನದಿಂದ ಮಾತ್ರ ತಿಳಿದುಕೊಳ್ಳಬಹುದು. ಮೂಲವನ್ನು ಕೊಡುವಾಗ ಕೃತಿಯನ್ನು ಮತ್ತು ಅದರೊಳಗಿನ ಅಧ್ಯಾಯ, ಪುಟಗಳ ಮಾಹಿತಿಯನ್ನೂ ಒದಗಿಸಿದೆ. ಹೀಗೆ ಮೂಲವನ್ನು ಕೊಡುವಾಗ ಪದದ ಅರ್ಥಗಳನ್ನು ಕೊಟ್ಟು ಅವುಗಳ ನಂತರ ಪೂರ್ಣವಿರಾಮ ಕೊಡುವುದಕ್ಕಿಂತ ಮೊದಲು ಕಂಸದೊಳಗೆ ಮೂಲವನ್ನು ಅದರ ಸಂಕ್ಷಿಪ್ತ ರೂಪದಲ್ಲಿ ಒದಗಿಸಿ ಕಂಸ ಪೂರ್ಣಗೊಳಿಸಿದ ನಂತರ ಪೂರ್ಣವಿರಾಮವನ್ನು ಕೊಟ್ಟಿದೆ. ಮೂಲಗಳ ಸಂಕ್ಷಿಪ್ತ ರೂಪಗಳನ್ನು ನಿಘಂಟಿನ ಮೊದಲಲ್ಲಿ ಕೊಟ್ಟಿದೆ. ಇದರಿಂದ ಆಸಕ್ತರು ಸೂಕ್ತ ಮೂಲವನ್ನು ಹುಡುಕಿಕೊಂಡು ಹೋಗಲು ಅನುವಾಗುತ್ತದೆ.

ಉದಾ.: ಆದೇಶತ್ವ adesate. The state of being a substitute; a substitute (SMD, 104).ಪು. ೧೫೫.

ಪದಗಳಿಗೆ ಅರ್ಥಗಳನ್ನು ಕೊಡುವುದು ಬಲು ಸೂಕ್ಷ್ಮವಾದ ಕೆಲಸ. ಒಂದು ಬಾಶೆಯ ಪದಗಳಿಗೆ ಇನ್ನೊಂದು ಬಾಶೆಯಲ್ಲಿ ಸಮಾನಾರ್ತಗಳು ಇರುವುದು ಕಶ್ಟ. ಮುಖ್ಯವಾಗಿ ಸಾಂಸ್ಕೃತಿಕ ಪದಕೋಶಕ್ಕೆ ಸಹಜವಾಗಿ ಸಮಾನಾರ್ತಕಗಳು ಇರುವುದಿಲ್ಲ. ಅಲ್ಲದೆ, ಪರಿಸರ, ಆಚರಣೆ, ನಂಬಿಕೆ, ದರ್ಮ ಮೊದಲಾದ ವಲಯಗಳಲ್ಲಿನ ಪದಗಳು ಸಮಾನವಾಗಿ ಸಿಗುವುದು ಕಶ್ಟ. ಇಂತಾ ಸಂದರ್ಬದಲ್ಲಿ ಕಿಟೆಲ್ ಯಾವ ಕ್ರಮಗಳನ್ನು ಅನುಸರಿಸಿದ್ದಾನೆ ಎನ್ನುವುದನ್ನು ತುಸು ಗಮನಿಸಬಹುದು. ಸಾಮಾನ್ಯ ಪದಗಳಿಗೆ ನೇರವಾದ ಅರ್ತವನ್ನು ಒದಗಿಸಿದೆ. ಒಂದಕ್ಕಿಂತ ಹೆಚ್ಚು ಅರ್ತಚಾಯೆಗಳಿರುವ ಪದಗಳನ್ನೂ ಸಹ ಇದೆ ರೀತಿಯಾಗಿ ಅವುಗಳ ಅರ್ತಚಾಯೆಗೆ ಅನುಗುಣವಾಗಿ ವಿವಿದ ಅರ್ತಗಳನ್ನು ಕೊಟ್ಟಿದೆ. ದಾರ್ಮಿಕ, ಸಾಂಸ್ಕೃತಿಕ ಪದಗಳನ್ನು ಕೊಡುವಾಗ ಅವುಗಳನ್ನು ವಿವರಿಸುವ ಕೆಲಸವನ್ನು ಮಾಡಿದೆ. ಅದರಂತೆ ಸಾಮಾಜಿಕ ವಲಯದ ಪದಗಳನ್ನು ಕೊಡುವಾಗ ಸಮಾಜದ ವಿವರಗಳನ್ನೂ ಸಾದ್ಯವಾದಶ್ಟು ಒದಗಿಸಿದೆ. ಹೀಗೆ ಸಾಮಾಜಿಕ, ಸಾಂಸ್ಕೃತಿಕ ಪದಗಗಳನ್ನು ವಿವರಿಸುವಾಗ ಅವಶ್ಯವಾದಲ್ಲೆಲ್ಲ ಸೂಕ್ತವಾದ ಗಾದೆಗಳನ್ನು ಕೊಡಲಾಗಿದೆ. ಇದು ಕಿಟೆಲ್‌ಗೆ ಇದ್ದ ಕರ್ನಾಟಕದ ಸಮಗ್ರ ಪರಿಚಯವನ್ನು ತೋರಿಸುತ್ತದೆ. ಇಲ್ಲಿನ ದರ್ಮ, ಸಂಸ್ಕ್ರುತಿ ಮೊದಲಾದ ವಲಯಗಳನ್ನು ಅವನು ಅಶ್ಟು ಮಟ್ಟಿಗೆ ತಿಳಿದುಕೊಂಡಿದ್ದನು. ನಿಗಂಟು ತಯಾರಿಕೆ ಎನ್ನುವುದು ಸಮಾಜ, ಸಂಸ್ಕೃತಿ, ದರ್ಮ ಮೊದಲಾದ ವಲಯಗಳ ಅರಿವನ್ನು ಬಯಸುತ್ತದೆ. ಇವುಗಳ ತಿಳುವಳಿಕೆ ಇದ್ದಾಗ ಒಳ್ಳೆಯ ನಿಗಂಟಿನ ತಯಾರಿಕೆ ಸಾದ್ಯ. ಪದವೊಂದಕ್ಕೆ ಇಂಗ್ಲೀಶಿನಲ್ಲಿ ಒಂದಕ್ಕಿಂತ ಹೆಚ್ಚು ಅರ್ತಗಳಿದ್ದಲ್ಲಿ ಅರ್ದವಿರಾಮ ಹಾಕುವ ಮೂಲಕ ಆ ಅರ್ತಗಳನ್ನು ಕೊಟ್ಟಿದೆ. ಹಲವು ಅರ್ತಗಳಲ್ಲಿ ಮೊದಲ ಅರ್ತವನ್ನು ಕೊಡುವಾಗ ಪದಾರಂಬದಲ್ಲಿ ಇಂಗ್ಲೀಶಿನ ದೊಡ್ಡಕ್ಕರವನ್ನು ಬಳಸಿದ್ದು ಮುಂದಿನ ಪದಗಳನ್ನು ಕೊಡುವಾಗ ಪದಾರಂಬದಾಗ ಸಣ್ಣಕ್ಕರವನ್ನೆ ಬಳಸಿದೆ. ಎಲ್ಲ ಅರ್ತಗಳನ್ನು ಕೊಟ್ಟ ನಂತರ ಕೊನೆಯಲ್ಲಿ ಪೂರ್ಣವಿರಾಮವನ್ನು ಕೊಟ್ಟಿದೆ.

ಈ ಸಮರೂಪಿ ಪದಗಳು ಪಡೆದಿರುವ ಅರ್ತದ ಆದಾರದ ಮೇಲೆ ಅವುಗಳ ನೋಂದಣಿಯನ್ನು/ಗಳನ್ನು ನಿರ್ದರಿಸಲಾಗುತ್ತದೆ. ಒಂದು ಸಮರೂಪಿ ಪದ ಪರಸ್ಪರ

ಸಂಬಂಧವಿಲ್ಲದ ಅರ್ತವನ್ನು ಹೊಂದಿದ್ದರೆ, ಹಲವು ಬಾರಿ ಪರಸ್ಪರ ಭಿನ್ನವಾದ ವ್ಯಾಕರಣ ಕೆಲಸಗಳನ್ನು ಹೊಂದಿದ್ದರೆ ಅವುಗಳನ್ನು ಭಿನ್ನವಾದ ಪದಗಳೆಂದು ಪರಿಗಣಿಸಿ ಅವುಗಳನ್ನು ಪ್ರತ್ಯೇಕ ನೋಂದಣಿಗಳನ್ನಾಗಿ ಮಾಡುತ್ತಾರೆ. ಅವುಗಳನ್ನು ೧, ೨, ೩ ಮೊದಲಾಗಿ ಅಂಕಿಗಳನ್ನು ಬಳಸುವುದರ ಮೂಲಕ ಗುರುತಿಸಲಾಗುತ್ತದೆ. ಕಿಟೆಲ್ ಹೀಗೆ ಹಲವಾರು ಪದಗಳನ್ನು ಕೊಟ್ಟಿದ್ದಾನೆ.

ಉದಾ.: ಆಡು adu 1. = ಆಟು೧, ಆಲಿ೨. To be in motion, to move about, to wag, to wave, to swing, to shake, etc. 2,to play, to sport.3,to dance, to perform on the stage, to play, to act (ನರ್ತನ Smd. Dh.; ಕೊಲ್ಲಣಿಗೆ Sm. ៦೧, ನರ್ತನ ೯೪; ಎ. ೧೫, ೩೯). 4, to play (any game). 5, to perform, to make, to do. 6, to strument. 7, to abuse, to calumniate. ಪು. ೧೫೦–೧೫೧.

ಆಡು adu2.- DIÄ2, etc. Motion ; playing; etc. ಪು. ೧೫೧.

ಆಡು adu3. (My.; T.; Tu. ಏಡು). A he-goat (Cd Smd. Dh.; Sm. 94; Te. ಏಟ, a ram); a She goat ಅಜೆ, ಛಾಗಿ Nr.; B. 5, 23). ಪು. ೧೫೧.

ಆಡು adu4. = ಹಾಡು ೧. To sing (My.). ಪು. ೧೫೧.

ಆಡು adu4. = ಹಾಡು೨. To song (My.). ಪು. ೧೫೧.

ಇನ್ನು ಕೆಲವು ಸಮರೂಪಿ ಪದಗಳು ಬಿನ್ನಾರ್ತವನ್ನು ಹೊಂದಿದ್ದರೂ ಆ ಅರ್ತಗಳನ್ನು ಪರಸ್ಪರ ಒಂದು ಸರಳ ಸಾತತ್ಯದಲ್ಲಿ ವಿವರಿಸಲು ಸಾದ್ಯವಿರುತ್ತದೆ. ಅವುಗಳಲ್ಲಿ ಕೆಲವು ವಿಸ್ತೃತ ಅರ್ತಗಳು ಆಗಿರುತ್ತವೆ. ಇಂತಾ ಸಂದರ್ಬದಲ್ಲಿ ಈ ಬಿನ್ನ ಅರ್ತಗಳನ್ನು ಹೊಂದಿರುವ ಪದವನ್ನು ಒಂದೆ ನೋಂದಣಿಯಾಗಿ ಕೊಟ್ಟು ಅದರ ವಿವಿದ ಅರ್ತಗಳನ್ನು ಅದರೊಳಗೆ ೧, ೨, ೩ ಮೊದಲಾಗಿ ಗುರುತಿಸಿ ಅವುಗಳ ಬಿನ್ನ ಅರ್ತಗಳನ್ನು ಪ್ರತ್ಯೇಕವಾಗಿ ಕೊಡಲಾಗುತ್ತದೆ. ಪ್ರತಿಯೊಂದು ಅರ್ತಕ್ಕೂ ಬಳಕೆಗಳನ್ನು ಕೊಡಲಾಗುತ್ತದೆ. ಇದನ್ನು ಕಿಟೆಲ್ ಅನುಸರಿಸಿರುವುದನ್ನು ಕಾಣಬಹುದು. ಈ ಮೇಲೆ ಕೊಟ್ಟಿರುವ ಆಡು ಉದಾಹರಣೆಯನ್ನು ಸರಳ ಅವಗಾಹನೆಗೆ ಅನುವಾಗಲೆಂದು ಮತ್ತೊಮ್ಮೆ ಇಲ್ಲಿ ಅದನ್ನೆ ಕೊಟ್ಟಿದೆ.

ಉದಾ.: ಆಡು âdu ೧. = ಆಟು೧, ಆಲಿ೨. To be in motion, to move about, to wag, to wave, to swing, to shake, etc. 2,to play, to sport.3,to dance, to perform on the stage, to play, to act (ನರ್ತನ Smd. Dh.; ಕೊಲ್ಲಣಿಗೆ Sm. ៦೧, ನರ್ತನ ೯೪; ಎ. ೧೫, ೩೯).೪, to play (any game). 5, to perform, to make, to do. 6, to strument. 7, to abuse, to calumniate. ಪು. ೧೫೦–೧.

ಕಿಟೆಲ್ ನಿಗಂಟು ಕನ್ನಡಕ್ಕೆ ಯಾಕೆ ಮಹತ್ವದ ನಿಗಂಟು ಎಂಬುದನ್ನು ಅದರ ರಚನೆಯನ್ನು ನೋಡಿದಾಗ ತಿಳಿಯುತ್ತದೆ. ಈಗಿನ ಬರವಣಿಗೆ ಮಿತಿಯಲ್ಲಿ ಕೆಲವು ಅಂಶಗಳನ್ನು ಮಾತ್ರ ಇಲ್ಲಿ ಚರ್ಚೆಗೆ ತೆಗೆದುಕೊಳ್ಳಲು ಸಾಧ್ಯವಾಗಿದೆ. ಇದರ ವಿಸ್ತೃತವಾದ ಅಧ್ಯಯನ ಇನ್ನೂ ಹೆಚ್ಚಿನ ಅಂಶಗಳನ್ನು ತೋರಿಸುವಲ್ಲಿ ಅನುಮಾನವಿಲ್ಲ. ಇದರಿಂದ ಕನ್ನಡಕ್ಕೆ ಇಂದು ಬೇಕಾದ ನಿಗಂಟು ಕೆಲಸ, ಅದಕ್ಕೆ ಬೇಕಾದ ಶ್ರಮ, ಸಿದ್ದತೆ ಮೊದಲಾದವನ್ನು ತಿಳಿದುಕೊಳ್ಳಬಹುದು.

ಕನ್ನಡಕ್ಕೆ ಇಂದು ಅತ್ಯಂತ ತುರ್ತಾಗಿ ಹೊಸ ನಿಗಂಟು ಅವಶ್ಯಕತೆ ಇದೆ. ಕಿಟೆಲ್ಲನ ಕನ್ನಡ-ಇಂಗ್ಲೀಶ್ ನಿಗಂಟು, ಕನ್ನಡ ಸಾಹಿತ್ಯ ಪರಿಶತ್ತಿನ ಕನ್ನಡ-ಕನ್ನಡ ನಿಗಂಟು ಮತ್ತು ಮಯ್ಸೂರು ವಿಶ್ವವಿದ್ಯಾಲಯದ ಇಂಗ್ಲೀಶ್-ಕನ್ನಡ ನಿಗಂಟು ಈ ಮೂರನ್ನು ಈ ಬರಹದ ಮೊದಲಲ್ಲಿ ಪ್ರಸ್ತಾಪಿಸಲಾಯಿತು. ಈ ಮೂರೂ ಸದ್ಯಕ್ಕೆ ಕನ್ನಡದ ಮಟ್ಟಿಗೆ ಹೇಳಬಹುದಾದ ಉತ್ತಮ ನಿಗಂಟುಗಳು. ಆದರೆ, ಈ ಮೂರೂ ಈಗ ಹಳೆಯವಾಗಿವೆ. ಮುಖ್ಯವಾಗಿ ಕನ್ನಡ-ಕನ್ನಡ ನಿಗಂಟು ಮತ್ತು ಕನ್ನಡ-ಇಂಗ್ಲೀಶ್ ನಿಗಂಟುಗಳು ಅತ್ಯವಶ್ಯವಾಗಿ ಆಗಬೇಕಿದೆ. ಇಲ್ಲಿ ಆಗಬೇಕಾಗಿರುವ ಈ ನಿಗಂಟುಗಳ ಅವಶ್ಯಕತೆಯನ್ನು ತುಸು ಮಾತನಾಡಲಾಗುವುದು.

ಕಿಟೆಲ್ ನಿಗಂಟು ತುಂಬಾ ಹಳೆಯದು, ೧೮೯೪ಳರಲ್ಲಿ ಬಂದಿರುವಂತದ್ದು. ಆನಂತರ ಇದನ್ನು ಮರಿಯಪ್ಪ ಬಟ್ಟರು ತಿದ್ದಿ ಪ್ರಕಟಿಸಿದರೂ ಕೆಲವೆ ಹಳಗನ್ನಡ ಕ್ರುತಿಗಳನ್ನು ಆಕರವಾಗಿ ಸೇರಿಸಿಕೊಂಡರು ಮಾತ್ರ. ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಗಂಟು ಕೂಡ ಹಳೆಯದೆ. ಇದರ ಕೊನೆ ಸಂಪುಟ ಪ್ರಕಟವಾದದ್ದು ೧೯೯೫ರಲ್ಲಿ. ಆನಂತರ ಕನ್ನಡ ವ್ಯಾಪಕವಾಗಿ ಹಲವಾರು ವಲಯಗಳಲ್ಲಿ ಬೆಳೆದಿದೆ. ಅದಕ್ಕಿಂತ ಮುಖ್ಯವಾಗಿ ಈ ಎರಡೂ ನಿಗಂಟುಗಳು ಕೊಟ್ಟಿರುವ ಕನ್ನಡ ಪದಗಳು ಕಡಿಮೆಯೆ. ಕಿಟೆಲ್ ನಿಗಂಟು ಸೀಮಿತವಾದ ಮೂಲಗಳನ್ನು ಬಳಸಿಕೊಂಡಿದೆ. ಇದಕ್ಕಿಂತ ವಿಸ್ತ್ರುತವಾದ ಮೂಲಗಳನ್ನು ಕನ್ನಡ ನಿಗಂಟು ಬಳಸಿಕೊಂಡಿದೆ. ಆದರೆ ಬಳಕೆಯ ಮಾತಿನಿಂದ ಇದು ಹೆಚ್ಚು ಪದಗಳನ್ನು ಪರಿಗಣಿಸಿಲ್ಲ. ಕನ್ನಡದ ವಿವಿಧ ಒಳನುಡಿಗಳಲ್ಲಿನ ಪದಕೋಶ ಹೆಚ್ಚು ಶ್ರೀಮಂತವಾಗಿದೆ ಮತ್ತು ವಯ್ವಿದ್ಯಮಯವೂ ಆಗಿದೆ. ಪ್ರತಿಯೊಂದು ಒಳನುಡಿಯೂ ತನ್ನ ಪರಿಸರಕ್ಕೆ ತಕ್ಕಂತೆ ಬಿನ್ನ ಪದಕೋಶವನ್ನೂ ಹೊಂದಿವೆ. ಅಲ್ಲದೆ ವಿಬಿನ್ನ ಪರಿಸರಗಳಲ್ಲಿ ವಿಬಿನ್ನ ಸಂಸ್ಕೃತಿಗಳೂ ಇವೆ. ಮೂಲಭೂತ ಸಾಮಾಜಿಕ ಸಂಸ್ತೆ ಎಂದು ಹೇಳುವ ಜಾತಿಯ ಆಚೆಗೂ ಪ್ರಾದೇಶಿಕ ಪದಕೋಶ ಭಿನ್ನತೆಗಳನ್ನು ತೋರಿಸುತ್ತದೆ. ಅದರಂತೆ ಪ್ರತಿ ಪ್ರಾದೇಶಿಕ ಒಳನುಡಿಯ ಒಳಗೆ ಮತ್ತೆ ಬಿನ್ನತೆಗಳು ಕಂಡುಬರುತ್ತವೆ. ಈ ಹಂತದಲ್ಲಿ ಸಾಮಾಜಿಕ ಒಳನುಡಿಗಳೂ ಭಿನ್ನತೆಗಳನ್ನು ತೋರಿಸುತ್ತವೆ. ಇವೆಲ್ಲವುಗಳನ್ನು ಕನ್ನಡ ನಿಗಂಟು ಒಳಗೊಂಡು ವ್ಯಾಪಕವಾಗಿ ಬರಬೇಕಿದೆ.

ಹಳೆಗನ್ನಡದ ಹಲವಾರು ಸಾಹಿತ್ಯ ಕೃತಿಗಳು ಇಂದು ಪ್ರಕಟವಾಗಿವೆ. ಸಾಹಿತ್ಯ ಪರಿಷತ್ತಿನ ಕನ್ನಡ ನಿಗಂಟು ಕೆಲಸ ಶುರು ಮಾಡಿದಾಗ ಇಲ್ಲದ ಹಲವಾರು ಕೃತಿಗಳು

ಇಂದು ಲಭ್ಯವಿವೆ. ಹಳಗನ್ನಡ ಕೃತಿಗಳ ಸಂಕೆ ನೂರಾರು ಆಗಿದೆ. ಅದರಲ್ಲೂ ಬಿನ್ನ ಶಾಸ್ತ್ರಗಳ ಕೃತಿಗಳೂ ಪ್ರಕಟವಾಗಿವೆ. ಇವು ಆಯಾ ವಲಯದ ಪಾರಿಬಾಶಿಕಗಳನ್ನೂ ಒಳಗೊಂಡು ಹಲವು ಬಿನ್ನ ಪದಕೋಶವನ್ನು ತೋರಿಸುತ್ತವೆ. ಇದಲ್ಲದೆ ನಡುಗಾಲದ ಪುರಾಣಸಾಹಿತ್ಯ, ಬಯಲಾಟ ಸಾಹಿತ್ಯವೂ ಇಂದು ಪ್ರಕಟವಾಗಿದೆ. ಅದಲ್ಲದೆ ದೊಡ್ಡ ಪ್ರಮಾಣದ, ಬಹುಶಾ ಸಾವಿರಾರು ಸಂಕೆಯ, ಜನಪದ ಸಾಹಿತ್ಯ ಸಂಪಾದನೆಗಳು ಪ್ರಕಟವಾಗಿವೆ. ಇದರಲ್ಲಿ ಮಹಾಕಾವ್ಯಗಳೂ ಗದ್ಯ, ಪದ್ಯ ಮೊದಲಾಗಿ ಸಾಹಿತ್ಯದ ಹಲವಾರು ಪ್ರಕಾರಗಳೂ ಇವೆ. ಈ ಸಂಪಾದನೆಗಳು ಬಿನ್ನ ಪ್ರದೇಶಗಳಿಂದ ಬಂದಿವೆ ಎಂಬುದನ್ನೂ ಗಮನಿಸಬೇಕು. ಇದೆಲ್ಲವನ್ನೂ ಕನ್ನಡ ನಿಗಂಟು ಒಳಗೊಳ್ಳಬೇಕಿದೆ.

ಆಧುನಿಕ ಕನ್ನಡ ಸಾಹಿತ್ಯ ಅಗಣಿತವೆನ್ನುವಷ್ಟು ಬೆಳವಣಿಗೆಗಳನ್ನು ತೋರಿಸುತ್ತದೆ. ಸಾಹಿತ್ಯ, ಸಂಶೋದನೆ, ಶಾಸ್ತ್ರ, ಆಡಳಿತ, ನ್ಯಾಯಾಂಗ, ಮಾದ್ಯಮ ಹೀಗೆ ಇನ್ನೂ ಹಲವಾರು ವಲಯಗಳಲ್ಲಿ ಅಪರಿಮಿತ ಬೆಳವಣಿಗೆ ಆಗಿದೆ. ಸಾವಿರಾರು ಸಂಕೆಯ ಪದಗಳು ಹುಟ್ಟಿವೆ. ಸಾವಿರಾರು ಸಂಕೆಯ ಪದಗಳನ್ನು ಆದುನಿಕ ಕಾಲದಲ್ಲಿ ಇಂಗ್ಲೀಶ್ ಮೊದಲಾದ ಹಲವಾರು ಬಾಶೆಗಳಿಂದ ತೆಗೆದುಕೊಂಡಿದೆ. ಈ ತೆಗೆದುಕೊಂಡ ಪದಗಳು ಕನ್ನಡಕ್ಕೆ ಬಂದ ಮೇಲೆ ದ್ವನ್ಯಾತ್ಮಕವಾಗಿ, ಅರ್ತಾತ್ಮಕವಾಗಿ ಮತ್ತು ವ್ಯಾಕರಣಾತ್ಮಕವಾಗಿ ಸಾಕಷ್ಟು ಬದಲಾಗಿವೆ. ಇವುಗಳೊಂದಿಗೆ ವಿವಿದ ಕ್ಶೇತ್ರಗಳಲ್ಲಿ ಆಗುತ್ತಿರುವ ಸಂಶೋಧನೆಯಿಂದಾಗಿ ಹಲವಾರು ಪಾರಿಭಾಷಿಕ ಪದಗಳೂ ಬೆಳೆದಿವೆ.

ಕಳೆದ ಕೆಲವಾರು ವರುಶಗಳಲ್ಲಿ ಹಲವಾರು ಕನ್ನಡ ಒಳನುಡಿ ನಿಗಂಟುಗಳು ಬಂದಿವೆ. ಇದುವರೆಗೆ ಸಾಹಿತ್ಯ ವಲಯ ಗಮನಿಸದ ಅನೇಕಾನೇಕ ಪದಗಳು ಈ ನಿಗಂಟುಗಳಲ್ಲಿ ದಾಖಲಾಗಿವೆ. ಈ ನಿಗಂಟುಗಳಿಗೂ ದಕ್ಕದೆ ಉಳಿದಿರುವ ಪದಗಳಿನ್ನೂ ಸಾವಿರಾರು. ಕನ್ನಡ ಅಡುಗೆಮನೆ, ಕನ್ನಡ ಒಕ್ಕಲುತನವೂ ಹೀಗೆ ಸಾವಿರಾರು ಪದಗಳನ್ನು ಹೊಂದಿವೆ. ಇದೆಲ್ಲವನ್ನೂ ಕನ್ನಡದ ಹೆಚ್ಚಿನ ನಿಗಂಟುಗಳು ಗಮನಿಸಿಲ್ಲ. ಈ ಸೂಕ್ಶ್ಮ ಅವಲೋಕನೆಯಿಂದಾಗಿ ಇದುವರೆಗೆ ಕನ್ನಡ ವಿದ್ವತ್ತು ಗಮನಿಸದ ಸಾಕಷ್ಟು ಪದಗಳು ಗೋಚರಿಸಬಹುದು.

ಕನ್ನಡದ ಪದಕೋಶದ ವ್ಯಾಪಕತೆಯನ್ನು ಗಮನಿಸಿದಾಗ ಇದುವರೆಗೆ ಬಂದ ನಿಗಂಟುಗಳ ಗಾತ್ರ ಮತ್ತು ಪಾತ್ರ ತುಂಬಾ ಚಿಕ್ಕದೆನಿಸುತ್ತದೆ. ಹಾಗಾಗಿ ಕನ್ನಡ ನಿಗಂಟಿನ ತಯಾರಿಕೆ ಇಂದು ಅವಶ್ಯವಾಗಿ ಆಗಬೇಕಾದ ಕೆಲಸವಾಗಿದೆ.

ಕನ್ನಡ ಮಾತನಾಡುವ ಸಮುದಾಯ ಇಂದು ವ್ಯಾಪಕವಾದ ಬೆಳವಣಿಗೆಯನ್ನು ವಿವಿಧ ವಲಯಗಳಲ್ಲಿ ತೋರುತ್ತಿದೆ. ಕನ್ನಡ ಜಗತ್ತಿನ ಇತರ ಬಾಶೆಗಳೊಂದಿಗೆ ಮತ್ತು ಜಗತ್ತು ಕನ್ನಡದೊಂದಿಗೆ ಹೊಂದಿರುವ ಸಂಬಂದ ಕನ್ನಡದ ವಿಸ್ತ್ರುತ ನಿಗಂಟಿನ ಅವಶ್ಯಕತೆಯನ್ನು ಎತ್ತಿ ಹೇಳುತ್ತದೆ. ಅಲ್ಲದೆ ಬಾರತದ ಬಾಗವಾಗಿರುವ ಕರ್ನಾಟಕದಲ್ಲಿ ಬಾರತದ ವಿಬಿನ್ನ ಪ್ರದೇಶಗಳಿಂದ ಮಂದಿ ಬಂದು ನೆಲೆಸಿದ್ದಾರೆ. ಅವರಿಗೆಲ್ಲ ಕನ್ನಡ ನಿಗಂಟಿನ ಅವಶ್ಯಕತೆ ಇದೆ. ಭಾರತದ ಮತ್ತು ಜಗತ್ತಿನ ಹಲವಾರು ಬಾಶೆಗಳಿಂದ

ನೇರವಾಗಿ ಮತ್ತು ದೊಡ್ಡ ಪ್ರಮಾಣದಲ್ಲಿ ಇಂಗ್ಲೀಶಿನಿಂದ ಕನ್ನಡಕ್ಕೆ ಬಿನ್ನ ಬರವಣಿಗೆಗಳು ಅನುವಾದವಾಗುತ್ತಿವೆ. ಈ ಕೆಲಸಗಳಿಗೆ ನಿಗಂಟಿನ ಅವಶ್ಯಕತೆ ಇದೆ. ವ್ಯಾಪಾರ, ಸಂಶೋಧನೆ, ಮಾದ್ಯಮ, ಕ್ರೀಡೆ ಹೀಗೆ ಹಲವಾರು ಕಾರಣಗಳಿಗಾಗಿ ಕನ್ನಡ ಮತ್ತು ಉಳಿದ ಜಗತ್ತು ನೇರ ಸಂಪರ್ಕಕ್ಕೆ ಬರುತ್ತಿವೆ. ಇಲ್ಲೆಲ್ಲ ಕನ್ನಡ ನಿಗಂಟು ಬೇಕಿದೆ. ಹೀಗೆ ಬದುಕಿನ ಮತ್ತು ಸಮಾಜದ ಎಲ್ಲ ವಲಯಗಳಿಗೆ ಅನುಕೂಲವಾಗುವಂತಾ ನಿಗಂಟುಗಳು ಬೇಕಿವೆ. ಈ ಎಲ್ಲವುಗಳನ್ನು ಸಾದ್ಯವಾದಶ್ಟು ಒಳಗೊಳ್ಳುವ ಮತ್ತು ವಿವಿಧ ವಲಯಗಳ ನಿಗಂಟುಗಳಿಗೆ ಆಕರವಾಗಬಲ್ಲಂತ ಒಂದು ದೊಡ್ಡ ಕನ್ನಡ ನಿಘಂಟು ಇಂದಿನ ಅವಶ್ಯಕತೆ.

ಇದರೊಟ್ಟಿಗೆ ಕನ್ನಡ ಮಾತು, ಸಾಹಿತ್ಯ, ಸಮಾಜ ಇವುಗಳ ಅಧ್ಯಯನಕ್ಕೆ ಅನುವಾಗುವಂತಾ ಪದಕೋಶ ಬೇಕಿದೆ. ಕಿಟೆಲ್ ಕೋಶ ಹೀಗೆ ಹಲವು ಬಗೆಯ ಅಧ್ಯಯನಗಳಿಗೆ ಅನುಕೂಲವಾಗುತ್ತದೆ. ಆದರೆ ಅದರ ಮಿತಿಯಿಂದಾಗಿ ಹೆಚ್ಚಿನ ಅಧ್ಯಯನಗಳು ಸಾಧ್ಯವಿಲ್ಲವಾಗಿದೆ. ಕನ್ನಡ ಸಮಾಜ, ದರ್ಮ ಮೊದಲಾದ ವಲಯಗಳ ಸಂಶೋಧನೆಗಳಿಗೂ ಕನ್ನಡ ನಿಗಂಟು ಆಕರವನ್ನು ಒದಗಿಸಬೇಕು. ಹೀಗೆ ಕನ್ನಡಕ್ಕೆ ಸಂಬಂಧಿಸಿದ ಎಲ್ಲ ಬಗೆಯ ಅಧ್ಯಯನಗಳಿಗೆ ಆಕರವಾಗಬಲ್ಲಂತಾ ಮಹತ್ವದ ಮತ್ತು ದೊಡ್ಡ ನಿಗಂಟು ಬರಬೇಕಿದೆ.

ಇನ್ನೊಂದು ಅಂಶವನ್ನು ಇಲ್ಲಿ ಪ್ರಸ್ತಾಪಿಸಬೇಕಿದೆ. ಕನ್ನಡ ಮಾತಿನ ರಚನೆ, ಇತಿಹಾಸ ಮೊದಲಾದವನ್ನು ತಿಳಿದುಕೊಳ್ಳುವುದು ಕನ್ನಡ ಸಮಾಜವನ್ನು ಎಲ್ಲ ಆಯಾಮಗಳಲ್ಲಿ ತಿಳಿದುಕೊಳ್ಳುವುದಕ್ಕೆ ಅನುಕೂಲವಾಗುತ್ತದೆ. ಕನ್ನಡ ನಿಗಂಟು ಇಂತಾ ಅರಿವನ್ನು ಕೊಡುವುದಕ್ಕೂ ಆಕರವಾಗಬಲ್ಲದು. ಕನ್ನಡದ ದ್ವನಿ, ಆಕ್ರುತಿಮಾ, ಅರ್ತ ಮೊದಲಾದ ಇತಿಹಾಸಿಕ ಬೆಳವಣಿಗೆಯನ್ನು ಕನ್ನಡ ನಿಗಂಟು ಪ್ರತಿನಿಧಿಸುತ್ತದೆ. ಕನ್ನಡ ಸಮುದಾಯ ಯಾವ ಕಾಲದಲ್ಲಿ ಯಾವ ರೀತಿಯ ಸಾಮಾಜಿಕ, ಧಾರ್ಮಿಕ, ರಾಜಕೀಯ ಬೆಳವಣಿಗೆಗಳಿಗೆ ಒಗ್ಗಿಕೊಂಡಿತು, ಯಾವ ಕಾಲದಲ್ಲಿ ಯಾವ ಯಾವ ಬಾಶೆಗಳ ಸಂಪರ್ಕವನ್ನು ಹೊಂದಿತು, ಯಾವ ಕಾಲದಲ್ಲಿ ಎಂತಾ ವ್ಯಾಪರ ವ್ಯವಸ್ತೆ ಇದ್ದಿತು ಎಂಬೀ ಮೊದಲಾದ ಅಂಶಗಳನ್ನು ತಿಳಿದುಕೊಳ್ಳುವುದಕ್ಕೆ ಕನ್ನಡ ನಿಗಂಟಿನ ಅವಶ್ಯಕತೆ ಇದೆ. ಕನ್ನಡದಲ್ಲಿ, ಕನ್ನಡ ಸಮಾಜದಲ್ಲಿ ಆಗಿರಬಹುದಾದ ಮಹತ್ವದ ಬೆಳವಣಿಗೆಗಳನ್ನು ಕನ್ನಡ ಪದಕೋಶ ದಾಖಲಿಸಿಕೊಂಡಿರುತ್ತದೆ. ಅದನ್ನು ಕನ್ನಡ ನಿಘಂಟು ಪ್ರತಿಪಲಿಸಬೇಕು.

ಹೀಗೆ ಈ ಮತ್ತು ಇಂತಾ ಹಲವಾರು ಕಾರಣಗಳಿಗಾಗಿ ಹೊಸದೊಂದು ಕನ್ನಡ ನಿಗಂಟಿನ ಅವಶ್ಯಕತೆ ಇದೆ. ಇಂತಾ ಕೆಲಸವನ್ನು ನಾವು ಶುರು ಮಾಡಬೇಕಿದೆ. ಸಾಹಿತ್ಯ ಪರಿಷತ್ತಿನ ನಿಗಂಟು ಎಂಟು ಸಂಪುಟಗಳಲ್ಲಿ ಇದೆ. ಸದ್ಯದ ನನ್ನ ತಿಳುವಳಿಕೆಯಲ್ಲಿ ಕನ್ನಡ ನಿಗಂಟು ಇದರ ಮೂರು ಪಟ್ಟು ಬೆಳೆಯುತ್ತದೆ. ಇನ್ನೂ ಹೆಚ್ಚಾಗಬಹುದೆ ಹೊರತು ಕಡಿಮೆಯಾಗಲಾರದು.

■

# ಕನ್ನಡದಲ್ಲಿ ಬಳಕೆಯಲ್ಲಿರುವ ಅರೇಬಿಕ್ ಪರ್ಶಿಯನ್ ಶಬ್ದಗಳು



ಡಾ. ಕೃಷ್ಣ ಕೊಲ್ಹಾರಕುಲಕರ್ಣಿ

ಕರ್ನಾಟಕದಲ್ಲಿ ಸರಿ ಸುಮಾರು [ಕ್ರಿ.ಶ. ೧೩೪೭–೧೯೪೮] ಆರು ನೂರು ವರುಷಗಳ ಕಾಲ ನಾಡಿನ ಒಂದಿಲ್ಲೊಂದು ಪ್ರದೇಶದಲ್ಲಿ ಪರ್ಶಿಯನ್ ಭಾಷೆ ರಾಜ ಭಾಷೆಯಾಗಿತ್ತು. ಜೊತೆಗೆ ಅರೇಬಿಕ ಭಾಷೆಯೂ ಪ್ರಚಲಿತದಲ್ಲಿತ್ತು. ವಿಶೇಷವಾಗಿ ಕ್ರಿ.ಶ. ೧೩೪೭ರಲ್ಲಿ ಮೊದಲು ಕಲಬುರ್ಗಿ ನಂತರ ಬೀದರ ನಗರಗಳನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳಿದ ಬಹಮನಿ ಸುಲ್ತಾನರು, [ಕ್ರಿ.ಶ. ೧೩೪೭–೧೪೯೦] ಅನಂತರ ಬೀದರದ ಬರೀದಶಾಹಿ, ವಿಜಯಪುರದ ಆದಿಲಶಾಹಿಗಳು [ಕ್ರಿ.ಶ. ೧೪೯೦–೧೬೮೬] ಈ ನಾಡನ್ನು ಆಳಿದರು. ವಿಜಯನಗರ ಸಾಮ್ರಾಜ್ಯ ಪತನಾನನಂತರ [ಕ್ರಿ.ಶ. ೧೫೬೫] ಇಂದಿನ ಕರ್ನಾಟಕದ ಬಹುತೇಕ ಪ್ರದೇಶಗಳು ಆದಿಲಶಾಹಿಗಳ ಅಧೀನಕ್ಕೆ ಒಳಪಟ್ಟಿದ್ದುವು. ಕರ್ನಾಟಕವನ್ನು ದಾಟಿ ತಂಜಾಪುರವರೆಗೂ ಅವರ ರಾಜ್ಯ ಹಬ್ಬಿತ್ತು. ಅನಂತರದ ಕೆಲವು ಕಾಲ ಮೊಗಲರ ಅಧೀನದಲ್ಲಿ, ಮತ್ತೆ ದೇಶಕ್ಕೆ ಸ್ವಾತಂತ್ರ್ಯ ದೊರೆಯುವವರೆಗೂ ಕರ್ನಾಟಕದ ಕೆಲವು ಪ್ರದೇಶಗಳು ಹೈದರಾಬಾದಿನ ಅಸಫಜಾಹೀ ಅಧೀನದಲ್ಲಿದ್ದುವು. ಮಧ್ಯದ ಕೆಲವು ವರುಷಗಳ ಕಾಲ ಮೈಸೂರು ಸಂಸ್ಥಾನ ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಆಡಳಿತಕ್ಕೊಳಪಟ್ಟಿತ್ತು. ಪ್ರಮುಖವಾಗಿ ಇವರುಗಳಲ್ಲದೆ ಅಲ್ಲಲ್ಲಿ ಸವಣೂರ, ಶಿರಾ ಮೊದಲಾಡೆಗಳಲ್ಲಿ ನವಾಬರಿದ್ದರು. ಈ ಕಾಲದಲ್ಲಿ ಪರ್ಶಿಯನ್ ಭಾಷೆ ರಾಜಭಾಷೆಯಾಗಿತ್ತು. ಬಹುತೇಕ ಎಲ್ಲ ಪತ್ರ ವ್ಯವಹಾರಗಳು, ಒಪ್ಪಂದಗಳು, ಸನದುಗಳು, ಫರ್ಮಾನುಗಳು, ಕೈಫಿಯತ್ತುಗಳು, ಜಹಗೀರು, ಇನಾಮ ಪತ್ರಗಳು ಪರ್ಶಿಯನ್ ಭಾಷೆಯಲ್ಲಿದ್ದುವು.

ಈ ದಿನಗಳಲ್ಲಿ ವಿಶ್ವ ಪ್ರಸಿದ್ಧಿ ಹೊಂದಿದ ಅನೇಕ ಕಾವ್ಯಗಳು, ಸಾಹಿತ್ಯ ಕೃತಿಗಳು, ಇತಿಹಾಸ ಕೃತಿಗಳು ಮತ್ತು ಶಿಲಾ ಶಾಸನಗಳು ಪರ್ಶಿಯನ್, ಅರೇಬಿಕ್ ಭಾಷೆಗಳಲ್ಲಿ ಕರ್ನಾಟಕದ ನೆಲದಲ್ಲಿ ರೂಪುಗೊಂಡಿವೆ. ಆಡಳಿತಗಾರರು ಪರ್ಶಿಯನ್ ಭಾಷೆಗೆ ಒಲವು ತೋರಿದ್ದರಿಂದ ಆಡಳಿತ, ನ್ಯಾಯಾಂಗ ಅಲ್ಲದೆ ದೈನಂದಿನ ವ್ಯವಹಾರಗಳಲ್ಲೂ ಪರ್ಶಿಯನ್ ಭಾಷೆ ಬಳಕೆಯಲ್ಲಿ ಬಂದಿತು. ಅವರ ಆಡಳಿತ ಮುಗಿಯಿತು. ಅವರು

ಹೋದರು ಆದರೆ ಅವರು ಬಿಟ್ಟು ಹೋದ ಪರ್ಶಿಯನ್, ಅರೇಬಿಕ್ ಶಬ್ದಗಳು ಉಳಿದುಕೊಂಡುವು. ಮೈಸೂರು ಅರಸರು ತಮ್ಮ ಹಲವಾರು ಶಿಲಾ ಶಾಸನಗಳನ್ನು ಪರ್ಶಿಯನ್ನ ಅರೇಬಿಕ್ ಭಾಷೆಗಳಲ್ಲಿ ಕೆತ್ತಿಸಿದ್ದರೆ, ಆಡಳಿತದಲ್ಲಿ ಪರ್ಶಿಯನ್ ಶಬ್ದಗಳೇ ಅಧಿಕವಾಗಿದ್ದುವು. (ನೋಡಿ-ಆದಿಲಶಾಹಿ ಅನುವಾದ ಸಾಹಿತ್ಯ ೧೩ನೆಯ ಸಂಪುಟ, 'ಕರ್ನಾಟಕದಲ್ಲಿಯ ಪರ್ಶಿಯನ್, ಅರೇಬಿಕ್ ಮತ್ತು ಉರ್ದು ಶಾಸನಗಳು) ಇಂದು ಆ ಶಬ್ದಗಳಲ್ಲಿಯ ಹಲವಾರು ಶಬ್ದಗಳು ಕನ್ನಡ ಶಬ್ದಗಳೇ ಆಗಿ ಮಾರ್ಪಾಡುಗೊಂಡಿವೆ. ಒಂದಿಷ್ಟು ಆಳವಾಗಿ ಒಳಹೊಕ್ಕು ನೋಡಿದಾಗ ಇಂದು ನಾವು ಮಾತನಾಡುವ ದಿನಬಳಕೆಯ ಕನ್ನಡ ಭಾಷೆಯಲ್ಲಿ ಪ್ರತಿಶತ ೩೦ಕ್ಕಿಂತ ಅಧಿಕವಾಗಿ ಶಬ್ದಗಳು ಪರ್ಶಿಯನ್ ಮತ್ತು ಅರೇಬಿಕ ಭಾಷೆಗಳದ್ದಾಗಿವೆ ! ಅವುಗಳು ಇಂದಿನ ಕರ್ನಾಟಕದ ಬೇರೆ ಬೇರೆ ಪ್ರದೇಶಗಳಲ್ಲಿ ಪ್ರತಿನಿತ್ಯ ಬಳಕೆಯಲ್ಲಿವೆ. ಅದಕ್ಕೆ ಉತ್ತರ, ದಕ್ಷಿಣ, ಪೂರ್ವ, ಪಶ್ಚಿಮ ಎಂಬ ಭೇದವಿಲ್ಲ. ಕೆಲವು ಶಬ್ದಗಳು ಎಲ್ಲ ಕಡೆಗೂ ಬಳಕೆಯಲ್ಲಿವೆ. ಇನ್ನು ಕೆಲವು ನಿರ್ದಿಷ್ಟ ಪ್ರದೇಶಗಳಲ್ಲಿ ಬಳಕೆಯಲ್ಲಿವೆ. ಹಾಗೆ ಪಟ್ಟಿ ಮಾಡಿದಾಗ ಸುಮಾರು ನಾಲ್ಕು ಸಾವಿರದಷ್ಟು ಶಬ್ದಗಳು ದೊರೆತವು ಅದುವೆ ಈ 'ಕನ್ನಡದಲ್ಲಿ ದಿನಬಳಕೆಯಲ್ಲಿರುವ ಪರ್ಶಿಯನ್ ಅರೇಬಿಕ್ ಶಬ್ದಕೋಶ'. ( ಅದೇ ೧೮ನೆಯ ಸಂಪುಟ) ಮಾದರಿಗಾಗಿ ಕೆಲವನ್ನು ನೋಡಬಹುದು.

ಕರ್ನಾಟಕ ಸರಕಾರದ ಆಡಳಿತದಲ್ಲಿ ಎಷ್ಟೊಂದು ಪರ್ಶಿಯನ್ ಅರೇಬಿಕ್ ಶಬ್ದಗಳು ನುಸುಳಿಕೊಂಡಿವೆ ಎಂದರೆ, ಕರ್ನಾಟಕ ಸರಕಾರದಲ್ಲಿಯ 'ಸರಕಾರ' ಶಬ್ದ ಪರ್ಶಿಯನ್ ಶಬ್ದ ! ರಾಜ್ಯದ ಆಡಳಿತದಲ್ಲಿ ಪಾತ್ರ ವಹಿಸಬೇಕೆಂದರೆ, ಪ್ರಜಾಪ್ರಭುತ್ವದ ಈ ದಿನಗಳಲ್ಲಿ ಮೊದಲು ಚುನಾವಣೆಯಲ್ಲಿ ಉಮೇದುವಾರನಾಗಿ ಸ್ಪರ್ಧಿಸಿ ಆಯ್ಕೆಯಾಗಬೇಕು. ಇಲ್ಲಿಯ ಉಮೇದುವಾರ ಅರೇಬಿಕ್ ಶಬ್ದ. ಆಯ್ಕೆಯಾಗಿ ಬಂದನಂತರ ಅವರ ನಶೀಬು ಇದ್ದರೆ ಯಾವುದೋ ಇಲಾಖೆ ಅಥವಾ ಖಾತೆಯ ಸಚಿವರು ಇಲ್ಲವೆ ಜಿಲ್ಲಾ ಪಂಚಾಯತಿ, ಗ್ರಾಮ ಪಂಚಾಯತಿಯ ಸದಸ್ಯರಾಗಿದ್ದರೆ ಅಧ್ಯಕ್ಷರೋ ಆಗಬಹುದು, ಇಲ್ಲಿಯ ನಶೀಬ, ಖಾತೆ, ಇಲಾಖೆ ಎಲ್ಲವೂ ಪರ್ಶಿಯನ್ ಶಬ್ದಗಳು. ಹೀಗೆಯೇ ಮುಂದುವರಿಯುತ್ತದೆ. ನಾವು ಮಾಡುವ ಅರ್ಜಿ ಅರೇಬಿಕ್ ಶಬ್ದ ಕಚೇರಿ, ಅಲ್ಲಿರುವ ಅಮಲದಾರ, ಕಾರಕೂನ, ಗುಮಾಸ್ತ, ಅವರು ಕೂಡುವ ಖುರ್ಚಿ, ಮೇಜು, ಚಪರಾಸಿ ದಫ್ತರ್, ದರಬಾರ, ದಸ್ತಾವೇಜು, ನೋಂದ, ನೋಂದಣಿ, ದಾಖಲೆ. ನಕಲು, ನೌಕರ, ಬಕ್ಷೀಸು, ಎಲ್ಲವೂ ಪರ್ಶಿಯನ್ ಶಬ್ದಗಳೇ. ಅವರು ಬರೆಯುವ ಕಿರ್ದಿ, ಜಮಾ, ಖರ್ಚು, ತಪಶೀಲು, ಅರೇಬಿಕ್, ಪರ್ಶಿಯನ್ ಶಬ್ದಗಳು. ಹಾಗೆ ಪೋಲೀಸ ಕಚೇರಿಗೆ ಹೋದರೆ, ಫಿರ್ಯಾದಿ, ಕಾರಭಾರಿ, ಪಿತೂರಿ, ಫೌಜದಾರ, ಇತ್ಯಾದಿ ಶಬ್ದಗಳೂ ಕನ್ನಡದ್ದಲ್ಲ. ತರಬೇತಿ ಅರೇಬಿಕ್ ಶಬ್ದ. ಇನ್ನು ಆಡಳಿತಾತ್ಮಕವಾಗಿ ಉಪಯೋಗಿಸುವ, ಜಿಲ್ಲೆ, ತಾಲೂಕು, ಪರಗಣಾ, ಮೌಜೆ, ಸಾಕೀನ, ಇತ್ಯಾದಿಗಳು ಕನ್ನಡದ್ದಲ್ಲ. ಪ್ರತಿಯೊಂದಕ್ಕೂ ಎತ್ತುವ ಚಂದಾ ಶಬ್ದ ಪರ್ಶಿಯನ್ ಶಬ್ದ. ಕೈದಿ, ಕೈದು, ಕೈಫಿಯತ್ ಅರೇಬಿಕ್ ಶಬ್ದಗಳು. ನಾವು ಸಾಮಾನ್ಯವಾಗಿ ಬಳಸುವ ಜನ-ಜಾನುವಾರು

ಗಳಲ್ಲಿಯ ಜಾನುವಾರು ಪರ್ಶಿಯನ್ ಶಬ್ದ ! ಮಾಮೂಲು ಕೊಡುವುದು ಸಾಮಾನ್ಯ. ಈ ಮಾಮೂಲು ಸಹಿತವಾಗಿ, ಮಾಲಕ, ಮುತಾಲಿಕ, ಮುದ್ದಾಮ, ಮೇಜವಾನ, ಮೋಘಮ್, ಮೋಜು, ರಕಮು, ರೈತ ಇವೆಲ್ಲವುಗಳು ಅರೇಬಿಕ್ ಶಬ್ದಗಳು. ಇನ್ನು, ರಸ್ತೆ, ರಹದಾರಿ, ಮೈದಾನ, ಮೋಹರ, ಯಾದೀ, ರಾಜೀನಾಮಾ, ಆಮದು, ರಫ್ತು, ಲಗಾಮು, ಲಂಗಾ, ಲುಂಗಿ, ಲಂಗೋಟಿ ಶಾಲು, ಶಿಸ್ತು, ಶಿಫಾರಸು, ಶಿಲ್ಲಕ, ಸರಾಸರಿ, ಸಾದಾ, ಸಾಮಾನು ಹುಶಾರ್, ವಾಹವಾ, ಶಾಭಾಶ್ ಹುರಮುಂಜಿ ಇತ್ಯಾದಿಗಳೆಲ್ಲ ಪರ್ಶಿಯನ್ ಶಬ್ದಗಳು. ಬೇರೀಜು ಪರ್ಶಿಯನ್ ಶಬ್ದ, ವಜಾ ಅರೇಬಿಕ ಶಬ್ದ. ಜೊತೆಗೆ ವಕಾಲತ್, ವಕೀಲಿ, ವಗೈರೆ, ವಶೀಲಿ, ವಾಯದಾ, ಸಹಿ, ಸಲ್ಲಾ, ಸಲಹೆ, ಸಾದಿಲವಾರ, ಹಕ್ಕು, ಹಮ್ಮಿಣಿ, ಹರಕತ್ ಹಜಿರ್, ಹುಕುಮ್ ಹುಕ್ಕಾ, ಹುದ್ದಾ–ಹುದ್ದೆ ಹಾಸಲು, ಹದ್ದು, ಸರಹದ್ದು, ಹವಾ, ಹವಾಲ್ತಿ, ಹವ್ಯಾಸ/ಹವ್ಯಾಸಿ ಅರೇಬಿಕ್ ಶಬ್ದಗಳು.

ಮಗು ಹುಟ್ಟಿದ ಮೇಲೆ ಮೊದಲು ಮಾತನಾಡುವುದು 'ಅಮ್ಮ'. ಅನಂತರ ಅಮ್ಮ ಮಗುವಿಗೆ ನೀರು ಕುಡಿಯಲು ಹೇಳುವುದು 'ಆಬು', ಈ ಆಬು ಶಬ್ದ ಬಂದದ್ದು ಪರ್ಶಿಯನ್ 'ಆಬ್' ಆಬ್ ಎಂದರೆ ನೀರು. ಬಹುಶಃ ಭಾರತದಾದ್ಯಂತ ಮಗುವಿಗೆ ನೀರು ಕುಡಿಸುವುದು ಈ ಆಬು ಶಬ್ದದಿಂದಲೇ. ಹೀಗೆ ಬದುಕಿನ ಪ್ರಾರಂಭದಿಂದಲೇ ಪರ್ಸಿಯನ್ ಭಾರತೀಯರ ಭಾಷೆಗಳಲ್ಲಿ ಹಾಸು ಹೊಕ್ಕಾಗಿದೆ.

ವಸ್ತುಗಳಲ್ಲಿ, ಅತ್ತರ, ಅತ್ತರದಾಣಿ, ಅಲವಾನ ಬಟ್ಟೆ ಅಜವಾನ, ಕಾಗದ, ಕಂದೀಲು, ತಬಲಾ, ಲೋಬಾನ, ತಾಯಿತ, ನವಸಾಗರ, ಮನೂಕ, ಡಪ್ಪು ಅರೇಬಿಕ್ ಶಬ್ದಗಳಾದರೆ, ಅಗರಬತ್ತಿ, ಖೀರ, ತರಕಾರಿ, ಬರಫ, ಬರ್ಫ, ಬಾಜಾರ, ದುರ್ಬೀನು, ನಗಾರಿ, ಬದಾಮ, ಮೈದಾ, ಮೋಸಂಬಿ, ಮತಾಪು, ಮಾಲದಿ, ಶಹನಾಯಿ, ಶಂಕರಪೋಳೆ ಇತ್ಯಾದಿಗಳು ಪರ್ಶಿಯನ್ ಶಬ್ದಗಳು.

ದಿನಬಳಕೆಯಲ್ಲಿ ಸುಲಭವಾಗಿ ಬಳಸುವ ಅಜಾರಿ, ಅಬ್ರು, ಗಜಮು, ಐಲೀಕಡೆಗೆ, ಅಜಮಾಸ, ಅಂದಾಜ, ಆಹೇರ್, ಕಸರಾಟ, ಕಸೂತಿ, ಕಾರೇಗಾರ, ಕಿಸೆ, ಜೇಬು, ಕುತನಿ, ಕುಶಾಲು, ಖರೀದಿ, ಖಾನಾವಳಿ, ಖಾಕಿ, ಗಲ್ಲಾ, ಗಿಲಾಯಿ, ಚಮಚ, ಚಮಚಾಗಿರಿ, ಚಾಲಾಕ, ಮಲಮ್, ಮಸ್ಕಾ, ಇತ್ಯಾದಿಗಳೆಲ್ಲ ಪರ್ಶಿಯನ್ ಶಬ್ದಗಳು. ಅಲಗರ್ಜ, ಕಾಯಿಲೆ, ಡೌಲು, ಲಕ್ವಾ, ಅಕ್ಕಲು, ಆಸಾಮಿ, ಅದಲುಬದಲು, ಇನಾಮ, ಇಮಾರತ, ಇಲಾಜ್, ಇಸವೀ, ಕರಾರು, ಕಾಯದೆ, ಕುಲಾವಿ, ಕೋಮು, ಖಜೀಲ್, ಖಾತ್ರಿ, ಮಜಕೂರ, ಮುದ್ದತ, ಮರ್ಜೀ, ಮನ್ನಾ, ಇವುಗಳೆಲ್ಲ ಅರೇಬಿಕ್ ಶಬ್ದಗಳು. ದಿನ ನಿತ್ಯ ನಾವು ಪೇಟೆಗೆ ಹೋಗಿ ತರುವ ತರಕಾರಿ, ಇದರಲ್ಲಿ ಪೇಟೆ ಮತ್ತು ತರಕಾರಿ ಎರಡೂ ಶಬ್ದಗಳು ಕನ್ನಡದ್ದಲ್ಲ. ಹೀಗಿದೆ ಇಂದಿನ ನಮ್ಮ ಕನ್ನಡ ಭಾಷೆ.

■

# ಡಾ. ಬಿ.ಎಸ್. ಸಣ್ಣಯ್ಯನವರ ಚಂಪೂ ಹಾಗೂ ಷಟ್ಪದಿ ಸಾಹಿತ್ಯ ಸಂಪಾದನೆಯ ವೈಧಾನಿಕತೆ



ಡಾ. ವಿ.ಎಸ್. ಬಡಿಗೇರ

ಕನ್ನಡ ಗ್ರಂಥಸಂಪಾದನ ಚರಿತ್ರೆಯು ಜರ್ಮನ್ ಮಿಷಿನರಿಗಳಿಂದಲೇ ಆರಂಭವಾಯಿತೆನ್ನುವ ಅರ್ಧಸತ್ಯವನ್ನು ಈಗಲೂ ಒಪ್ಪಿಕೊಳ್ಳಲಾಗಿದೆ. ಕವಿರಾಜಮಾರ್ಗದಿಂದ ಹಿಡಿದು ಇಂದಿನ ವಿದ್ವಾಂಸರು ಕನ್ನಡದ ದೇಸಿ ನೆಲೆಯಲ್ಲಿಯೇ ತಮ್ಮ ವಿದ್ವತ್‌ನ್ನು ರೂಪಿಸಿಕೊಂಡಿದ್ದರೂ ಅದನ್ನು ಪ್ರಯೋಗಕ್ಕೆ ಒಡ್ಡುವ ಅಧ್ಯಯನ ವಿಧಾನಗಳು ಮಾತ್ರ ಕೇಂದ್ರಿಕೃತಗೊಂಡಂಥವೂ ಹಾಗೂ ಚಲನೆರಹಿತವಾದಂತವು. 'ಕುರಿತೋದದೆಯಂ ಕಾವ್ಯಪ್ರಯೋಗ ಪರಿಣಿತ ಮತಿಗಳ್' ಎಂದು ಹೇಳುತ್ತಲೇ 'ಬಿಡುವುದಾದರೆ ಗ್ರಾಮ್ಯಂಗಳ್ ಬೆಡಬೇಕೆಂದು' ಮಾರ್ಗ ಪಾಂಡಿತ್ಯದ ಬೆನ್ನು ಹತ್ತುತ್ತಾರೆ.

ಪ್ರಾಚೀನ ಮತ್ತು ಮಧ್ಯಕಾಲೀನ ಕನ್ನಡ ಕವಿಗಳು ಸಂಗ್ರಹಿಸಿ ಹೇಳುವೆ, ಹೊಸದಾಗಿ ರಚಿಸುವೆ, ಕನ್ನಡದ ಸಂದರ್ಭದಲ್ಲಿ ಬರೆಯುವೆ ಎಂದು ಭಾಷೆ, ಛಂದಸ್ಸು, ಕಥಾವಸ್ತು, ನಿರೂಪಣಾ ಶೈಲಿಗಳಲ್ಲಿ ಹಲವು ರೀತಿಯ ಪ್ರಯೋಗಶೀಲತೆಯನ್ನು ಹಾಗೂ ಭಿನ್ನದಾರಿಗಳನ್ನು ಕಂಡುಕೊಂಡಿದ್ದರು. ಮತ್ತು ಅಂತಹ ಭಿನ್ನ ಆಲೋಚನೆಗಳಲ್ಲಿಯೇ ತಮ್ಮ ಪ್ರೌಢ ಕಾವ್ಯ ಮಾರ್ಗಗಳನ್ನು ರೂಪಿಸಿಕೊಂಡಿದ್ದರು. ಆದರೆ ಗ್ರಂಥಸಂಪಾದನೆ ಎನ್ನುವ ಜ್ಞಾನಶಿಸ್ತನ್ನು ಮಿಷನರಿಗಳ ಮೂಲಕವೆ ನೋಡುವ ಕನ್ನಡದ ಕಣ್ಣುಗಳಿಗೆ ಈ ವೈವಿಧ್ಯತೆಗಳು, ಸೃಜನಶೀಲ ಸಂಸ್ಕೃತಿಯ ಫಲಿತಗಳಾಗಿ ಕಾಣದೇ, ಸವರಿ ಹಾಕುವ, ಏಕಾಕಾರಗೊಳಿಸುವ, ತಿದ್ದುವ ಅಪದ್ದಗಳಾಗಿ ಕಂಡವು. ಸಂಸ್ಕೃತ ಮತ್ತು ವಸಾಹತು ಧೋರಣೆಯಲ್ಲಿ ರೂಪತಳೆದ ಇಂತಹ ಪರಿಷ್ಕರಣ ವಿಧಾನಗಳು ಸಂಪಾದನೆಯ ಹೆಸರಿನಲ್ಲಿ ಕನ್ನಡ ಕೃತಿಯೊಂದು ಕಟ್ಟಿಕೊಂಡಿದ್ದ ಹಲವು ಅನುಸಂಧಾನದ ದಾರಿಗಳನ್ನು ಅಶೈಕ್ಷಣಿಕವೆಂದು, ಅನಾಗರಿಕವೆಂದು ದುರ್ಬಲಗೊಳಿಸಿದವು.

ಅರವತ್ತು ಮೂವರ ಮಹಿಮೆಗಳ ನಿಂತು
ಬರೆದೋದಿ ಕೇಳಿ ಪೇಳಿ ಪಾಡಿದವರಿಗೆ
ನಿಜಸುಖಂ ದೊರೆವುದಿಹಪರದೊಳು

ಎನ್ನುವ ಕನ್ನಡ ಕೃತಿಗಳ ಒಡಲನುಡಿಗಳು ಕಾವ್ಯ ಅಥವಾ ಸಾಹಿತ್ಯವನ್ನು ನಿರ್ದಿಷ್ಟ ಶೈಕ್ಷಣಿಕ ಚಿಂತನೆಗಳಲ್ಲಿಟ್ಟು ನೋಡುವ ಕ್ರಮವನ್ನು ವಿಸರ್ಜಿಸುತ್ತವೆ. ಸಂಸ್ಕೃತ ಕಾವ್ಯ ಮೀಮಾಂಸೆಯ ಬೇಗುದಿಯಲ್ಲಿ ಕನ್ನಡ ಚಿಂತನೆಗಳು ಕಳೆದು ಹೋಗದಂತೆ ಎಚ್ಚರಿಕೆ ವಹಿಸುತ್ತವೆ. ಕನ್ನಡ ಕಾವ್ಯಗಳು ಕಟ್ಟುವವನ, ಹೇಳುವವನ, ಕೇಳುವವನ, ಹಾಡುವವನ, ಬರೆಯುವವನ, ಭಿನ್ನ ಅಭಿರುಚಿಗೆ ತಕ್ಕಂತೆ ನಿರಂತರವಾಗಿ ನಿರ್ವಚನಗೊಳ್ಳುತ್ತ ಹೋಗುವ ಪ್ರವೃತ್ತಿಯುಳ್ಳಂಥವು. 'ಲೇಸೆನಿಸಿದ್ದನ್ನು ತನ್ನ ಕಾವ್ಯಗಳಲ್ಲಿ ಸೇರಿಸುತ್ತ ಹೋಗಬಹುದು' ಎಂದು ಓದುವವರಿಗೆ, ಕೇಳುವವರಿಗೆ, ಹಾಡುವವರಿಗೆ ಮುಕ್ತ ಆಹ್ವಾನ ನೀಡುವ ಕುಮಾರವ್ಯಾಸನು ಕವಿ ಸೃಷ್ಟಿಯ ನಂತರವೂ ಕಾವ್ಯ ಸೃಜನಶೀಲವಾಗಿ ಬೆಳೆಯುತ್ತ ಹೋಗಬೇಕು ಎನ್ನುತ್ತಾನೆ.

'ಈ ಕೃತಿಯ ಓದುವುದಕ್ಕೂ ಕೇಳುವುದಕ್ಕೂ ದೇವರು ಸಮಸ್ತರ ಹೃದಯದಲ್ಲಿ ಜ್ಞಾನವನ್ನು ಕೊಟ್ಟಿದ್ದಾನೆ. ಅದು ಕಾರಣ ಇವನ್ನು ತಿಳಿದುಕೊಳ್ಳುವ ವಿಷಯದಲ್ಲಿ ವ್ಯತ್ಯಾಸ ಸಲ್ಲದು' ಎನ್ನುವ ಕೃಷಿಜ್ಞಾನಪ್ರದೀಪಿಕೆಯ ಮಾತು ಜ್ಞಾನದ ಕೇಂದ್ರಿಕೃತ ಕಲ್ಪನೆಗಳನ್ನು ಕಾವ್ಯ ಮೀಮಾಂಸೆಯ ವಿದ್ವತ್ ಪರಿಭಾಷೆಗಳನ್ನು ಕಂಗೆಡಿಸುತ್ತದೆ. ಇಂಥ ರಸಿಕ ಸಂಪ್ರದಾಯಕ್ಕೆ, ವಿರುದ್ದವಾದ ಲಿಖಿತ ಕೃತಿಯ ಓದುವಿಕೆ ಪರವಾದ ಗ್ರಂಥಸಂಪಾದನಾ ವೈಧಾನಿಕತೆಗಳನ್ನು ಆಯ್ಕೆ ಮಾಡಿಕೊಳ್ಳುವ ಮೂಲಕ ನಮ್ಮ ಹಿಂದಿನವರು ಸಾಹಿತ್ಯ ಸಂಸ್ಕೃತಿಯ ಹರವನ್ನು ಕುಗ್ಗಿಸಿದರು. ಪಠ್ಯವೊಂದು ತಾಳೆಗರಿ ಮತ್ತು ಕಾಗದದಲ್ಲಿ ಲಿಖಿತಗೊಂಡಾಗಲು ತನ್ನೊಡಲೊಳು ಹುದುಗಿಸಿಕೊಂಡಿದ್ದ ತೋಂಡಿ ಗುಣದಿಂದಾಗಿ ಸಮುದಾಯದ ಸಂಗಡ ಸಂವಾದ ಮಾಡುತ್ತಿತ್ತು. ಆದರೆ ಪಠ್ಯ, ರಚನೆ, ಶುದ್ಧ, ಮೂಲ, ಪ್ರಕ್ಷಿಪ್ತ, ಅಪ್ರಮಾಣಿತ, ಸ್ಖಾಲಿತ್ಯ, ವಂಶಾವಳಿಗಳು, ಎನ್ನುವ ನಮ್ಮ ಅಧುನಿಕ ಗ್ರಂಥಸಂಪಾದನೆಯ ಪರಿಭಾಷೆಗಳು ಕೃತಿಯೊಂದರ ಬಹುಸಾಂಸ್ಕೃತಿಕ ಸಂವಾದದ ಸಾಧ್ಯತೆಗಳನ್ನು ನಾಶಗೊಳಿಸಿದವು.

ನುಡಿ ಅಥವಾ ಲಿಪಿಯ ಇಂತಹ ಶುದ್ದ, ಮೂಲ, ಶಾಶ್ವತ ಎನ್ನುವ ವಸಾಹತು ಧೋರಣೆಗಳ ಮೂಲಕ ಹುಟ್ಟುವ ಶ್ರೇಷ್ಠ, ಕನಿಷ್ಠ, ಶುದ್ಧ, ಅಶುದ್ಧ, ಕವಿಕೃತಿ, ಲಿಪಿಕಾರ ಪ್ರತಿ, ಎನ್ನುವ ತಾರತಮ್ಯ ಧೋರಣೆಗಳನ್ನು ಅಧುನಿಕೋತ್ತರ ಚಿಂತಕರಾದ ಪ್ಲೋಟೋ, ಸಸ್ಸೂರ, ರೂಸೋ, ಇವರೆಲ್ಲರೂ ತೀಕ್ಷ್ಣವಾಗಿ ಟೀಕಿಸುತ್ತಾರೆ. ಸಂವಹನಶೀಲವಾದ ಕೃತಿ ಹೆಚ್ಚು ಸಹಜವಾದದ್ದು ಹಾಗೂ ಮೇಲ್ಮಟ್ಟದ್ದು, ಬರಹ ಕೃತಕವು ಹಾಗೂ ರೋಗಿಷ್ಠವು ಎಂದು ಇವರು ಅಭಿಪ್ರಾಯಪಡುತ್ತಾರೆ. ಇಂತಹ ಕೇಂದ್ರಿಕೃತ ಜ್ಞಾನದ ನೆಲೆಗಳನ್ನು ಕನ್ನಡದ ರಚನೆಗಳು ನಿರಚನೆ ಮಾಡುವುದನ್ನು ಕಾಣುತ್ತೇವೆ. ಈ ಹಿನ್ನೆಲೆಯಲ್ಲಿ ಡಾ. ಬಿ.ಎಸ್. ಸಣ್ಣಯ್ಯನವರ ಚಂಪೂ ಮತ್ತು ಷಟ್ಪದಿ ಸಾಹಿತ್ಯದ ವೈಧಾನಕತೆಯನ್ನು ವಿವರಿಸಿಕೊಳ್ಳಲು ಈ ಲೇಖನದಲ್ಲಿ ಪ್ರಯತ್ನಿಸಲಾಗಿದೆ.

"ಶೂದ್ರ ವರ್ಗದಿಂದ ಬಂದವರಾಗಿದ್ದ ನನ್ನಂತೆ ಅನಕ್ಷರ ಸಂಸ್ಕೃತಿಯಿಂದ ಬಂದಂಥ ಸಣ್ಣಯ್ಯನವರು ಓಲೆ ಗ್ರಂಥಗಳ ಜೊತೆಗೆ ಸಾಧಿಸಿದ ಸಂಪರ್ಕ ನನ್ನಲ್ಲಿ ಕುತೂಹಲ

ಮತ್ತು ಆಶ್ಚರ್ಯವನ್ನುಂಟು ಮಾಡಿತ್ತು" ಎನ್ನುವ ಡಾ. ಹ.ಕಾ. ರಾಜೇಗೌಡರ ಮಾತು ತುಂಬ ಮಹತ್ವದ್ದು. (ಪರಿಣತ; ಪು.೧೪೧; ೨೦೧೩) "ಡಾ. ಬಿ.ಎಸ್. ಸಣ್ಣಯ್ಯನವರು ಗ್ರಂಥ ಸಂಪಾದನಾ ಶಾಸ್ತ್ರವನ್ನು ಶಾಸ್ತ್ರೀಯತೆಯನ್ನು ತಪ್ಪದೆ ಕಾಪಾಡಿಕೊಂಡಿದ್ದಾರೆ." (ಪರಿಣತ; ೧೫೦; ೨೦೧೩) ಹ.ಕಾ. ರಾಜೇಗೌಡರು ಡಾ. ಬಿ.ಎಸ್. ಸಣ್ಣಯ್ಯನವರ ಕುರಿತು ಹೇಳಿದ ಮೇಲಿನ ಎರಡು ಉಲ್ಲೇಖಗಳು ಸಣ್ಣಯ್ಯನವರ ಭೌತಿಕ ಹಾಗೂ ಬೌದ್ಧಿಕ ವ್ಯಕ್ತಿತ್ವ ರೂಪಗೊಂಡ ಬಗೆಗಳನ್ನು ಹೇಳುತ್ತವೆ. ಸಣ್ಣಯ್ಯನವರ ಭೌತಿಕ ವ್ಯಕ್ತಿತ್ವವು ಶೂದ್ರ ಸಂವೇದನೆಯ ಸಾವಯವ ರೂಪವಾದರೆ ಬೌದ್ಧಿಕ ವ್ಯಕ್ತಿತ್ವವು ಅಕ್ಷರ ಮತ್ತು ಪಂಡಿತ ಲೋಕದ ಶಾಸ್ತ್ರ ಶಿಸ್ತಿನ ಮೂಲಕ ರೂಪಪಡೆದಿರುವಂತದ್ದು. ಅಂದರೆ ವಿಕೇಂದ್ರಿಕೃತ ಪರಿಸರದಿಂದ ಕೇಂದ್ರಿಕೃತ ಪರಿಸರಕ್ಕೆ ತಿರುಗಿದ್ದು. ಅಂದರೆ ಸಣ್ಣಯ್ಯನವರು ಸಹೃದಯತೆಯಿಂದ ಜಾರಿ ಲಿಖಿತ ಓದು ಪರವಾದ ವೈಧಾನಿಕತೆಯನ್ನು ಅವಲಂಬಿಸುತ್ತಾರೆ. ಎಷ್ಟರ ಮಟ್ಟಿಗೆ ಎಂದರೆ "ತಾಳೆಯೋಲೆ ಪ್ರತಿಯಲ್ಲಿ ದೊರೆತ ಎಲ್ಲಾ ಪಾಠಗಳನ್ನು ಒಂದನ್ನೂ ಬಿಡದೇ ಕೊಡುವುದು ಸಾಧ್ಯವಿಲ್ಲವೆಂದು ಉಪಯೋಗವಿಲ್ಲವೆಂದು ತಿಳಿದು ನಮಗೆ ಸೂಕ್ತವೆನಿಸಿದ ಪಾಠಗಳನ್ನು ಮಾತ್ರ ಅಡಿಟಿಪ್ಪಣಿಯಲ್ಲಿ ಕೊಟ್ಟಿರುತ್ತೇವೆ." (ಪ್ರಾಚೀನ ಕನ್ನಡ ಗ್ರಂಥಸಂಪಾದನೆ, ಪುಟ.೪೮; ೨೦೦೨) ಎಲ್ಲವನ್ನು ಭೇದವಿಲ್ಲದೆ ಒಳಗೊಳ್ಳುವ ಶೂದ್ರಸಂವೇದನೆಯೊಂದು ಶಾಸ್ತ್ರೀಯತೆಯ ಹಂಗಿನಲ್ಲಿ ಕನ್ನಡದ ಬಹುರೂಪಗಳನ್ನು ನಿರಾಕರಿಸುವಂತೆ ಮಾಡಿರುವ ಸಾಂಸ್ಕೃತಿಕ ರಾಜಕಾರಣವನ್ನು ಇಂದು ಅರ್ಥ ಮಾಡಿಕೊಳ್ಳಬೇಕಾಗಿದೆ. ಸಣ್ಣಯ್ಯನವರ ಸಂಪಾದನೆಯ ಜೀವಸಂಬೋಧನಾ ಕೃತಿಯ ಪ್ರಸ್ತಾವನೆಯಲ್ಲಿ "ಇದನ್ನು ಎಲ್ಲಾ ವರ್ಗದ ಜನರೂ ಮೆಚ್ಚುತ್ತಾರೆ. ಈ ಮೆಚ್ಚುಗೆಗೆ ಕಾರಣವೇನೆಂದರೆ ಲಲಿತ ಹಾಗೂ ಸರಳವಾಗಿರುವ ಪದಬಂಧವು ದೇಶೀಯ ಶಬ್ದಗಳಿಂದ ಕೂಡಿರುವುದು ಆಗಿದೆ. ಇದು ಮೇಲ್ನೋಟಕ್ಕೆ ಶಾಸ್ತ್ರಗ್ರಂಥವಾಗಿ ಕಂಡರು ಕಾವ್ಯಾಭ್ಯಾಸಿಗಳಿಗೆ ಉತ್ತಮ ಕಾವ್ಯವಾಗಿ, ತತ್ವಚಿಂತಕರಿಗೆ ಬತ್ತದ ಸೆಲೆಯಾಗಿ ಕಂಡುಬರುತ್ತದೆ" ಎನ್ನುವಲ್ಲಿ ನಿಜವಾಗಿಯೂ ಕನ್ನಡ ಪಠ್ಯಗಳ ಬಹು ಓದಿನ ಹಾಗೂ ಅನುಸಂಧಾನಗಳ ವಿವಿಧತೆಯನ್ನು ಅದರ ದೇಸಿ ನೆಲೆಯಲ್ಲಿ ಗುರುತಿಸುತ್ತಲೇ ಸಣ್ಣಯ್ಯನವರು ಸಂಪಾದನೆಗೆ ಬಂದಾಗ ಅದರ ಬಹುತ್ವದ ಸ್ವರೂಪವನ್ನು ಮರೆಯುತ್ತಾರೆ. ಬಹು ಸಾಂಸ್ಕೃತಿಕ ಪರಿಸರದಲ್ಲಿ ರೂಪಗೊಂಡ ಮನಸ್ಸೊಂದು ತನಗೆ ಬೇಕೋ ಬೇಡವೋ ಕಾಲದ ಒತ್ತಾಸೆಯಲ್ಲಿ ಕರಗಿ ಹೋಗುವ ಮೂಲಕ ರೂಪಿತ ಹಾಗೂ ಶೈಕ್ಷಣಿಕ ಚಿಂತನೆಗಳನ್ನು ಪ್ರಶ್ನಿಸಲು ಹಾಗೂ ವಿಸರ್ಜಿಸಲು ಇದ್ದ ಅವಕಾಶಗಳನ್ನು ಕಳೆದುಕೊಳ್ಳುತ್ತದೆ. ಚಂಪು, ಷಟ್ಪದಿ, ಸಾಂಗತ್ಯ, ವಚನ, ಗದ್ಯ ಗ್ರಂಥಗಳ ಸಂಪಾದನೆಯ ಸಂದರ್ಭದಲ್ಲಿ ಸಣ್ಣಯ್ಯನವರ ಸಹಜ ನಿಷ್ಠುರ ಸ್ವಭಾವ ಪ್ರಕಟವಾದರೂ ಅದು ಪ್ರಖರವಾದ ಪರ್ಯಾಯ ಆಲೋಚನ ಕ್ರಮವಾಗದೇ ರೂಢಿಗತ ಸಂಪಾದನೆ ವೈಧಾನಿಕತೆಯಲ್ಲಿ ಪರ್ಯವಸಾನವಾಗುತ್ತದೆ. ಹೀಗೆ ಸಹಜ ಮತ್ತು ರೂಪಿತ ಮನೋಧರ್ಮದಲ್ಲಿ ಮೂಡಿಬಂದ ಅವರ ಸಂಪಾದಿತ ಕೃತಿಗಳ ಚರ್ಚೆ ಕುತೂಹಲದ ಜೊತೆಗೆ ಅಧ್ಯಯನಶೀಲತೆಯನ್ನು ಕೇಳುತ್ತವೆ.

ಈ ಎಲ್ಲದರ ನಡುವೆಯೂ ಸಣ್ಣಯ್ಯನವರ ಗ್ರಂಥಸಂಪಾದನೆಯ ಒಂದು ಭಿನ್ನ ನಡೆಯೆಂದರೆ ಪರಿಷ್ಕರಣೆಯಲ್ಲಿ ಬಾಹ್ಯ ಆಕರಗಳನ್ನು ಬಳಸಿಕೊಂಡಾಗಲೂ ಅವರು ಹೆಚ್ಚು ನೆಚ್ಚುವುದು ಕೃತಿಯ ಆಂತರಿಕ ಸಾಕ್ಷಿಗಳನ್ನು. ಈ ವಿಧಾನವನ್ನು ಅವರ ಎಲ್ಲಾ ಪರಿಷ್ಕರಣೆಯಲ್ಲಿ ನಿಚ್ಚಳವಾಗಿ ಕಾಣಬಹುದು. ತಮ್ಮ ಹಿಂದಿನ ಸಂಪಾದಕರು ಹಾಗೇ ಉಳಿಸಿದ ಹಲವು ಪಾಠಾಂತರಗಳನ್ನು ಕೃತಿಯ ಅಂತಃಸಂಭಾವ್ಯತೆಯ ಮೂಲಕವೆ ಪರಿಷ್ಕರಿಸುತ್ತಾರೆ. ಇದು ಶೂದ್ರ ಸಂವೇದನೆಯ ಶಕ್ತರೂಪವೆಂದೇ ಹೇಳಬೇಕು. ಸಣ್ಣಯ್ಯನವರಿಂದ ಪರಿಷ್ಕರಣೆಗೊಂಡ ಚಂಪೂ ಕಾವ್ಯಗಳಾದ ರನ್ನನ ಅಜೀತನಾಥ ತೀರ್ಥಂಕರ ಪುರಾಣ (೧೯೮೮), ಸಾಹಸ ಭೀಮವಿಜಯ (೧೯೮೫), ನೇಮಿಚಂದ್ರನ ನೇಮಿನಾಥ ಪುರಾಣ (೧೯೬೧), ಬಂಧುವರ್ಮನ ಜೀವಸಂಬೋಧನೆ (೧೯೯೬) ಹರಿವಂಶಾಭ್ಯುದಯ(೧೯೭೪) ಮತ್ತು ಸತಿಧರ್ಮಸಾರ, ಎರಡನೇ ನಾಗವರ್ಮನ ವರ್ಧಮಾನ ಪುರಾಣ(೧೯೭೪) ಮಹಾಬಲನ ನೇಮಿನಾಥ ಪುರಾಣ (೧೯೭೭) ಆಯತವರ್ಮನ ರತ್ನ ಕರಂಡಕ (೨೦೦೨) ಚಂದವರ್ಣಿಯ ಪುಷ್ಪಾಂಜಲಿ ಮತ್ತು ಜೀವದಯಾಷ್ಟಮಿ ನೋಂಪಿಗಳು (೨೦೦೩) ತೀರ್ಥಂಕರ ವರ್ಧಮಾನ ಕನ್ನಡ ಕಾವ್ಯ ಸಂಪುಟ(೨೦೧೧) ಗೊಮ್ಮಟಸಾರ (೨೦೦೫) ಇವು ಪ್ರಮುಖವಾದಂಥವು. ಜೊತೆಗೆ ಷಟ್ಪದಿ ಕಾವ್ಯಗಳಾದ ಕುಮಾರವ್ಯಾಸ ಕೃತಿಯ ದ್ರೋಣಪರ್ವ ಸಂಗ್ರಹ (೧೯೬೪) ಕುಮಾರ ವಾಲ್ಮೀಕಿ ವಿರಚಿತ ತೊರವೆ ರಾಮಾಯಣ (೧೯೫೯) ಲಕ್ಷ್ಮೀಶನ ಜೈಮಿನಿ ಭಾರತ (೧೯೯೩) ಕೃತಿಗಳನ್ನು ಪರಷ್ಕರಿಸಿ ಪ್ರಕಟಿಸಿದ್ದಾರೆ. ಇಲ್ಲೆಲ್ಲ ಲಿಪಿಯಿಂದ ಮೂಡಿದ ಅವರ ಶಾಸ್ತ್ರೀಯ ವೈಧಾನಿಕತೆಯೊಂದಿಗೆ ಅವರ ನುಡಿಯಿಂದ ಮೂಡಿದ ಸಹೃದಯತೆಯೂ ಕೆಲಸ ಮಾಡಿದೆ.

ಬರವಣಿಗೆಗೆ ದಕ್ಕಿದ ಅಧಿಕಾರವು ಮನುಷ್ಯನ ಸಂಬಂಧಗಳನ್ನು ಶಿಥಿಲಗೊಳಿಸಿದೆ. ಸ್ವಯಂ ಅಭಿವ್ಯಕ್ತಿ ಶಕ್ತಿಯನ್ನು ಮಾತಿನ ಜೀವಂತಿಕೆಯನ್ನು ಹಾಗೂ ಒಂದು ಸಂಗತಿಯ ಆಂತರ್ಯವನ್ನು ಅರಿಯುವ ಸೂಕ್ಷ್ಮತೆಯನ್ನು ಹಾಳು ಮಾಡಿದೆ. ಬಹಳ ಸೂಕ್ಷ್ಮವಾಗಿ ಗಮನಿಸಿದರೆ ಒಂದು ಹಂತದಲ್ಲಿ ಪರಸ್ಪರ ಪೂರಕವಾಗಿದ್ದ ಮಾತು ಮತ್ತು ಬರಹಗಳಿಂದು ಅವಳಿ ವೈರುಧ್ಯಗಳಾಗಿ ನಿಂತಿವೆ. ಇಂಥ ಹೊತ್ತಲ್ಲಿ ಅವೆರಡರ ಮಧ್ಯದಲ್ಲಿ ನಿರ್ಮಿತವಾದ ಶಿಷ್ಟ ಪರಿಶಿಷ್ಟ, ಶುದ್ಧ, ಅಶುದ್ಧ ಎನ್ನುವ ಕೃತಕತೆಗಳನ್ನು ನಿವಾರಿಸಿ ಅವೆರಡರ ಸಹಾಯದಿಂದ ಒಂದು ಪೂರ್ಣರೂಪವನ್ನು ಕಟ್ಟಿಕೊಳ್ಳುವ ಕೆಲಸವನ್ನು ಸಣ್ಣಯ್ಯನವರು ಮಾಡುತ್ತಾರೆ. ನುಡಿ ಮತ್ತು ಬರಹ ಒಂದರ ಕೊರತೆಯನ್ನು ತುಂಬಬಲ್ಲವು. ಅವೆರಡೂ ಇರದಿದ್ದರೆ ಪೂರ್ಣತ್ವವೂ ಇಲ್ಲ, ಅಸ್ತಿತ್ವವೂ ಇಲ್ಲ ಎನ್ನುವ ಒಂದು ಸಮನ್ವಯ ತತ್ತ್ವವನ್ನು ಕನ್ನಡ ಗ್ರಂಥಸಂಪಾದನೆಗೆ ಸಣ್ಣಯ್ಯನವರು ಕೊಡುತ್ತಾರೆ.

**ಚಂಪೂ ಕಾವ್ಯಗಳ ಪರಿಷ್ಕರಣ**

೧. ನೇಮಿನಾಥನ ನೇಮಿಚಂದ್ರ ಪುರಾಣ

ಚಂಪೂ ಕಾವ್ಯಗಳನ್ನು ಪರಿಗಣಿಸಿ ಹೇಳುವುದಾದರೆ ನೇಮಿನಾಥ ಪುರಾಣಗಳ ಶೋಧನೆ ಮತ್ತು ಪರಿಷ್ಕರಣೆ ಸಾಧ್ಯವಾಗಿದ್ದು ಮತ್ತು ಅವುಗಳನ್ನು ಕನ್ನಡಕ್ಕೆ ಮೊದಲಬಾರಿಗೆ ತೆರೆದು ತೋರಿದ್ದು ಸಣ್ಣಯ್ಯನವರ ಇಂಥ ಸಮನ್ವಯ ದೃಷ್ಟಿಕೋನ. ದೇ. ಜವರೇಗೌಡರ ಪ್ರೇರಣೆಯಿಂದ ನೇಮಿನಾಥನ ನೇಮಿಚಂದ್ರ ಪುರಾಣವನ್ನು ೧೯೬೧ರಲ್ಲಿ ಸಂಪಾದಿಸುತ್ತಾರೆ. ಇದಕ್ಕಾಗಿ ಮೂಡಬಿದರೆಯಲ್ಲಿ ದೊರೆತ ಹೊಸ ಓಲೆಪ್ರತಿಯನ್ನು ಬಳಸಿಕೊಳ್ಳುತ್ತಾರೆ. ಜೊತೆಗೆ ಚ ಜ ಟ ಡ ಎಂಬ ಸಂಕೇತವುಳ್ಳ ನಾಲ್ಕು ಹಸ್ತಪ್ರತಿಗಳನ್ನು ಬಳಸಿದ್ದಾರೆ. ನೇಮಿನಾಥಪುರಾಣವನ್ನು ಈ ಮೊದಲು ಎಂ.ಎ. ರಾಮಾನುಜ ಅಯ್ಯಂಗಾರರು ಪರಿಷ್ಕರಿಸಿದ್ದರು. ಆದರೂ ಉಳಿದಿದ್ದ ಪಾಠ ದೋಷಗಳನ್ನು ತಿದ್ದಿ ಸಣ್ಣಯ್ಯನವರು ಪ್ರಕಟಿಸುತ್ತಾರೆ. ಪರಿಷ್ಕರಣೆಗಾಗಿ ೩೬೧ ಸಂಖ್ಯೆಯ ಜ ಅಂಕಿತವುಳ್ಳ ಪ್ರತಿಯನ್ನು ಹೆಚ್ಚು ಅವಲಂಬಿಸಿದ್ದಾರೆ. ಈ ಪ್ರತಿಯ ವಿಶೇಷವೆಂದರೆ ಸಾಂದರ್ಭಿಕ ರೇಖಾಚಿತ್ರ ಮತ್ತು ಶಕಟ ರೇಫೆದ ಬಳಕೆಯಿರುವುದು.

ರಾಮಾನುಜಯ್ಯಂಗಾರರು ಅಶುದ್ಧ ಪಾಠಗಳೆಂದು ಅಡಿಟಿಪ್ಪಣಿಯಲ್ಲಿಟ್ಟ ಪಾಠಗಳನ್ನೇ ಶುದ್ಧಪಾಠಗಳನ್ನಾಗಿ ಸಣ್ಣಯ್ಯನವರು ಬಳಸಿಕೊಂಡಿದ್ದಾರೆ. ಉದಾ. ಪ್ರಥಮಾಶ್ವಾಸದ ಪದ್ಯ ೨೨ರಲ್ಲಿ ರಾಮಾನುಜಯ್ಯಂಗಾರರು "ಪ್ರತಿಷ್ಠತೆ ರಸಾನುಭವೋಚಿತ" ವಾಕ್ಯವನ್ನು ಮುಖ್ಯ ಪಾಠವನ್ನಾಗಿ ನೀಡಿ "ವೃಷಾನುಭಯೋಜಿತೆ" ಎಂಬುದನ್ನು ಅಡಿಟಿಪ್ಪಣಿಯಲ್ಲಿ ನೀಡುತ್ತಾರೆ. ಸಣ್ಣಯ್ಯನವರು 'ವೃಷಾನ್' ಎಂದರೆ ಧರ್ಮವೆಂದು ಇದು ಕವಿ ಸರಸ್ವತಿಯನ್ನು ಕುರಿತು ಹೇಳುವ ಸಂದರ್ಭವಾಗಿದ್ದು, 'ವೃಷಾನುಭವೋಜಿತೆ' ಪಾಠ ಸರಿಯಾದದ್ದು ಎಂದು ನಿರ್ಧರಿಸುತ್ತಾರೆ. ಮುಂದೆ ಬಿ.ಎಸ್. ಕುಲಕರ್ಣಿಯವರು ಇದೇ ಪಾಠವನ್ನು ಸ್ವೀಕರಿಸುತ್ತಾರೆ. ಪ್ರಸ್ತಾವನೆಯಲ್ಲಿ ನೇಮಿಚಂದ್ರನ ಕಾಲ ಮತ್ತು ಕಾವ್ಯಗಳ ಮಹತ್ವದ ಕುರಿತು ಚರ್ಚಿಸಿದ್ದಾರೆ. ನೇಮಿಚಂದ್ರನ ಕಾಲವನ್ನು ಕಾವ್ಯದಲ್ಲಿ ಉಕ್ತವಾದ ವಿಚಾರಗಳಿಂದಲೇ ಕ್ರಿ.ಶ. ೧೧೯೦ಎಂದು ಖಚಿತವಾಗಿ ಗುರುತಿಸುತ್ತಾರೆ. ಕಾವ್ಯಸಾರ ಮುಂತಾದ ಭಿನ್ನ ಪಠ್ಯಗಳ ಪಾಠಗಳನ್ನು ಆಧರಿಸಿ ಮೊದಲಿನ ಆವೃತ್ತಿಯಲ್ಲಿದ್ದ ತೊಡಕುಗಳನ್ನು ನಿವಾರಿಸಿದ್ದಾರೆ.

### ೨. ಮಹಾಬಲನ ನೇಮಿನಾಥ ಪುರಾಣ

ಕನ್ನಡದಲ್ಲಿ ನೇಮಿನಾಥ ಪುರಾಣವನ್ನು ಬರೆದವರಲ್ಲಿ ಮಹಾಬಲನೂ ಒಬ್ಬ. (೧೨೫೪) ಸಣ್ಣಯ್ಯನವರು ಮೂರು ಪ್ರತಿಗಳ ಸಹಾಯದಿಂದ ಈ ಕೃತಿಯನ್ನು ಸಂಪಾದಿಸಿದ್ದಾರೆ. ಆದರೆ ಕಾಲಸೂಚಕ 'ಕ' ಪ್ರತಿಯಿಂದ ಹೆಚ್ಚಿನ ಆವೃತ್ತಿಯನ್ನು ಸಿದ್ದಪಡಿಸಿದ್ದಾರೆ. ಪ್ರತಿಗಳಲ್ಲಿನ ಅಕ್ಷರ ಸ್ಖಾಲಿತ್ಯ ಮತ್ತು ಪದಸ್ಖಾಲಿತ್ಯಗಳನ್ನು ಗುರುತಿಸಿದ್ದಾರೆ. ಮೂರು ಹಸ್ತಪ್ರತಿಗಳಿಗೆ ಹೊರತಾದ ಪಾಠಗಳನ್ನು ಕಂಸಗಳಲ್ಲಿ ತೋರಿಸಿದ್ದಾರೆ. ಹೀಗೆ ಹಲವು ಪಾಠಾಂತರಗಳನ್ನು ಗುರುತಿಸಿ ಹೊಸದನ್ನು ಸೇರಿಸಿ ಪ್ರಕಟಿತ ಮತ್ತು ಲುಪ್ತವಾದ ಭಾಗಗಳನ್ನು ಉಳಿದ ಪ್ರತಿಗಳಿಂದ ಕಟ್ಟಿಕೊಂಡಿದ್ದಾರೆ. ಈ ಮಹಾಬಲ ಬಳಸಿರುವ ಸ್ವಾಗತ, ಮಾಲಿನಿ, ಮೊದಲಾದ ವೃತ್ತ ಛಂಧಸ್ಸಿನ ಪ್ರಕಾರಗಳನ್ನು ಗುರುತಿಸಿ ಆಯಾ ಪದ್ಯಗಳಲ್ಲಿ ಸೂಚಿಸಿರುವುದು ಪ್ರಯೋಜನವಾಗಿದೆ.

## ೩. ಎರಡನೇ ನಾಗವರ್ಮನ ವರ್ಧಮಾನ ಪುರಾಣ

ವರ್ಧಮಾನ ತೀರ್ಥಂಕರನ ಕುರಿತು ಕನ್ನಡದಲ್ಲಿ ರಚನೆಯಾದ ಮೊದಲ ಸ್ವತಂತ್ರ ಕೃತಿ. ಕ್ರಿ.ಶ. ೯೭೮ರಲ್ಲಿ ರಚನೆಯಾದ ಚಾವುಂಡರಾಯನ ತ್ರಿಷಷ್ಠಿ ಲಕ್ಷಣ ಪುರಾಣಂ ಕೃತಿಯಲ್ಲಿ ತೀರ್ಥಂಕರನ ಕಥೆಯಿದೆ, ೧೬ ಆಶ್ವಾಸಗಳ ೧೧೩೪ ಪದ್ಯಗಳ ವರ್ಧಮಾನ ಪುರಾಣ ಕಾವ್ಯವನ್ನು ಮೊದಲಬಾರಿಗೆ ಡಾ. ಸಣ್ಣಯ್ಯನವರು ಪರಿಷ್ಕರಿಸಿ ಪ್ರಕಟಿಸಿದರು. (೧೯೭೪) ಅದೇ ರೀತಿ ವರ್ಧಮಾನ ಮಹಾವೀರನಿಗೆ ಸಂಬಂಧಿಸಿದಂತೆ ಪದ್ಮಕವಿಯ ವರ್ಧಮಾನ ಚರಿತಂ ಜೀನಸೇನದೇಶ ವೃತಿಯ ವರ್ಧಮಾನ ಪುರಾಣಂ ಕೃತಿಗಳನ್ನು ಮೊಟ್ಟಮೊದಲ ಬಾರಿಗೆ ಸಂಪಾದಿಸಿ ಪ್ರಕಟಿಸಿದ್ದಾರೆ. ಹೀಗೆ ವರ್ಧಮಾನ ಮಹಾವೀರನಿಗೆ ಸಂಬಂಧಿಸಿದಂತೆ ಮೂರು ಪುರಾಣಗಳನ್ನು ಮೊದಲ ಬಾರಿಗೆ ಶೋಧಿಸಿ ಪ್ರಕಟಿಸಿದ ಕೀರ್ತಿ ಸಣ್ಣಯ್ಯನವರದು.

ವರ್ಧಮಾನ ಪುರಾಣಕ್ಕೆ ಮುನ್ನುಡಿ ಬರೆಯುತ್ತಾ ಡಾ. ಹಾ.ಮಾ. ನಾಯಕರು "ಇದುವರೆಗೂ ಹೆಸರು ಮಾತ್ರ ತಿಳಿದಿದ್ದ ವರ್ಧಮಾನ ಪುರಾಣವೆಂಬ ಅಪ್ರಕಟಿತ ಕಾವ್ಯವನ್ನು ಮೊದಲ ಬಾರಿಗೆ ಕಂಡು ಹಿಡಿದು ಶ್ರದ್ಧೆಯಿಂದ ಸಂಪಾದಿಸಿದ ಸಣ್ಣಯ್ಯನವರಿಗೆ ನಮ್ಮ ವಂದನೆಗಳು" ಎಂದು ಹೇಳಿರುವಲ್ಲಿ ವರ್ಧಮಾನ ಪುರಾಣದ ಹೊಸ ಶೋಧ ಹಾಗೂ ಅದರಿಂದ ಬಗೆಹರಿದ ಕವಿ ಕಾವ್ಯಗಳ ಸಮಸ್ಯೆಗಳ ಚಿತ್ರಣದ ಸ್ವರೂಪ ತಿಳಿಯುತ್ತದೆ.

ನಾಗವರ್ಮರು ಒಬ್ಬರೆ ಇಬ್ಬರೆ ಅಥವಾ ಮೂವರೇ ಎಂದು ನಡೆಯುತ್ತಿದ್ದ ವಾಗ್ವಾದಗಳಿಗೆ ಕೃತಿಯ ಅಂತಃಸಂಭಾವ್ಯತೆಯ ಮೂಲಕ ಸಣ್ಣಯ್ಯನವರು ತೆರೆ ಎಳೆಯುತ್ತಾರೆ. "ಅಂಕಾನಾಂ ವಾಮತೋಗತಿಃ" ಎಂಬ ಸೂತ್ರಕ್ಕೆ ಅನುಗುಣವಾಗಿ ಅಂಕಿ ಮತ್ತು ಸಂವತ್ಸರ ಎರಡು ರೀತಿಯ ವಿಧಾನಗಳನ್ನು ಬಳಸಿಕೊಂಡು ನಾಗವರ್ಮನ ಕಾಲವನ್ನು ಕ್ರಿ.ಶ. ೧೦೪೨ ಎಂದು ನಾಗವರ್ಮರು ಇಬ್ಬರೆಂಬುದನ್ನು ಖಚಿತಪಡಿಸುತ್ತಾರೆ. (ವರ್ಧಮಾನ ಪುರಾಣ, ಪೀಠಿಕೆ, ಪು. xx, ೧೯೭೪)

ಕೃತಿಯ ಅಂತಃಶಕ್ತಿಯನ್ನೇ ಪರಿಷ್ಕರಣೆಗೆ ಬಳಸಿಕೊಳ್ಳುವುದಕ್ಕೆ ಮತ್ತೊಂದು ಉದಾಹರಣೆ ಎಂದರೆ ವರ್ಧಮಾನ ಪುರಾಣದ ಪ್ರಸ್ತಾವನೆಯಲ್ಲಿ ಪೂರ್ವ ಕವಿಸ್ತುತಿ ಮೂಲಕ ಇದೂವರೆಗೂ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಕಂಡರಿಯದ ಹೊಸ ವಿಚಾರಗಳನ್ನು ಪ್ರಸ್ತಾಪಿಸುತ್ತಾರೆ. ಮತ್ತೊಬ್ಬ ನಾಗವರ್ಮನ ವತ್ಸರಾಜ ಚರಿತೆ, ಶ್ರೀ ವಿಜಯನ ರಘುವಂಶ ಮಹಾಪುರಾಣ, ನಾಗದೇವನ ಸುಲೋಚನ ಚರಿತೆಗಳಂಥ ಅಜ್ಞಾತ ಕೃತಿಗಳನ್ನು ಹೊಸದಾಗಿ ಶೋಧಿಸಿ ಅವುಗಳ ಸಂಕ್ಷಿಪ್ತ ಮಾಹಿತಿ ನೀಡುತ್ತಾರೆ. ಶ್ರೀ ವಿಜಯನು ಚಂದ್ರಪ್ರಭ ಪುರಾಣದ ಜೊತೆ ರಘುವಂಶ ಕೃತಿಯನ್ನು ರಚಿಸಿದ್ದನೆಂದು ಖಚಿತವಾಗಿ ಹೇಳುತ್ತಾರೆ.

ಸದರಿ ಹಸ್ತಪ್ರತಿ ಸಿಕ್ಕಿದ್ದ ಬಗ್ಗೆ ಸಣ್ಣಯ್ಯನವರೇ ಹೇಳುವಂತೆ "೧೯೭೩, ಏಪ್ರಿಲ್ ತಿಂಗಳಲ್ಲಿ ಮೂಡಬಿದಿರೆಯ ಶ್ರೀ ದಿಗಂಬರ ಜೈನಧರ್ಮ ಶಾಲೆಯಲ್ಲಿರುವ ಹಸ್ತಪ್ರತಿಗಳ ಪರಿಶೀಲನೆ ಮತ್ತು ಮೈಕ್ರೋಫಿಲಂ ಮಾಡಲು ಹೋಗಿದ್ದೆವು ಕಟ್ಟುಗಳನ್ನು ಬಿಚ್ಚಿ

ಪರಿಶೀಲಿಸುತ್ತಿರುವಾಗ, ಅದರಲ್ಲಿ ಅಗ್ಗಳನ ಚಂದ್ರಪ್ರಭ ಪುರಾಣ, ರನ್ನನ ಅಜಿತನಾಥ ಪುರಾಣ, ಅಚಣ್ಣನ ವರ್ಧಮಾನ ಪುರಾಣ ಮತ್ತು ನಾಗವರ್ಮನ ವರ್ಧಮಾನ ಪುರಾಣದ ಪತ್ರಗಳು ಗೋಚರವಾದವು. ಆಗ ನನಗಾದ ಆನಂದ ಅವರ್ಣನೀಯ" ಎಂದು ಹೇಳುತ್ತಾರೆ. ಇಂಥ ಸೂಕ್ಷ್ಮ ಮನಸ್ಸಿನ ಶೋಧಕ ಪ್ರವೃತ್ತಿ ಅವರನ್ನು ಉಳಿದ ಗ್ರಂಥಸಂಪಾದನಕಾರರಿಂದ ತುಸು ಭಿನ್ನವಾಗಿ ಉಳಿಸುತ್ತದೆ.

ಬಹುಕಾಲದಿಂದ ಅಲಭ್ಯವಾಗಿ ಉಳಿದಿದ್ದ ನಾಗವರ್ಮನ ವರ್ಧಮಾನ ಪುರಾಣವನ್ನು ಏಕೈಕ ಹಸ್ತಪ್ರತಿಯ ಸಹಾಯದಿಂದ ೧೯೭೪ರಲ್ಲಿ ಪರಿಷ್ಕರಿಸಿ ಪ್ರಕಟಿಸುತ್ತಾರೆ. ಮುಖ್ಯವಾಗಿ ನಾಗವರ್ಮನ ಬಗೆಗಿದ್ದ ಹಲವು ವೃತ್ತಾಂತಗಳಿಗೆ ಉತ್ತರ ನೀಡಿದ್ದಲ್ಲದೆ ಹಲವು ಹೊಸಕವಿ ಮತ್ತು ಕೃತಿಗಳನ್ನು ಶೋಧಿಸಿಕೊಡುತ್ತಾರೆ. ಕಾವ್ಯಾವಲೋಕನದ ಸುಮಾರು ಹನ್ನೊಂದು ಪದ್ಯಗಳು ವರ್ಧಮಾನ ಪುರಾಣದಲ್ಲಿರುವುದನ್ನು ಗುರುತಿಸಿ ಅಡಿಟಿಪ್ಪಣಿಯಲ್ಲಿ ನೀಡುವುದಲ್ಲದೇ ಪ್ರಕಟಿತ ಕಾವ್ಯಾವಲೋಕನದ ತಪ್ಪು ಪಾಠಗಳನ್ನು ದೊರೆತ ಹೊಸ ಪದ್ಯಗಳಿಂದ ಗುರುತಿಸಿ ಪರಿಷ್ಕರಿಸಿದ್ದಾರೆ. ಆ ಮೂಲಕ ನಾಗವರ್ಮನು ತನ್ನ ಕಾವ್ಯಾವಲೋಕನ ಗ್ರಂಥಕ್ಕೆ ಉದಾಹರಣೆಗಳನ್ನು ವರ್ಧಮಾನ ಪುರಾಣದಿಂದಲೇ ಎತ್ತಿಕೊಂಡಿರುವುದನ್ನು ನಿದರ್ಶನ ಸಹಿತ ಎತ್ತಿ ತೋರಿಸುತ್ತಾರೆ. ಈ ಕೃತಿಗೆ ಉತ್ತಮ ಪರಿಷ್ಕರಣವೆಂದು ೧೯೯೧ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಬಹುಮಾನ ದೊರೆತಿದೆ.

ಕೃತಿಯ ಸಂಪಾದನೆ ಬಗ್ಗೆ "ಅನಿರೀಕ್ಷಿತ" ಎಂದು ಹೇಳಿದ ಎಂ.ವಿ ಸೀತಾರಾಮಯ್ಯ "ಆಕಸ್ಮಿಕ" ಎಂದು ಹೇಳಿದ ಹಂಪ ನಾಗರಾಜಯ್ಯನವರ ಬೌದ್ಧಿಕ ವ್ಯಂಗ್ಯಗಳಿಗೆ ಸಣ್ಣಯ್ಯನವರು ದಿಟ್ಟ ಉತ್ತರ ನೀಡುತ್ತಾರೆ. ಹಸ್ತಪ್ರತಿ ಅನ್ವೇಷಣೆಯಲ್ಲಿ ಆಸಕ್ತಿಯಿಲ್ಲದಲ್ಲಿ, ಪರಿಶೋಧಿಸುವಲ್ಲಿ ಪರಿಣತಿ ಇಲ್ಲದಲ್ಲಿ ತಾದಾತ್ಮ್ಯಭಾವದಿಂದ ದುಡಿಯದಿದ್ದಲ್ಲಿ ಇಂತಹ ಅಪರೂಪದ ಕೃತಿಗಳು ಸಿಗುವುದು ದುರ್ಬಲವಾಗುತ್ತವೆ ಎಂದು ಅರ್ಥಗರ್ಭಿತ ಉತ್ತರ ನೀಡುತ್ತಾರೆ.

**ಬಂಧುವರ್ಮನ ಕಾವ್ಯಗಳ ಸಂಪಾದನೆ**

ಬಂಧುವರ್ಮ ಕನ್ನಡದ ನಿರ್ಮಮಕಾರದ ವಿಶಿಷ್ಟ ಕವಿ. ಈತ ಹರಿವಂಶಾಭ್ಯುದಯ, ಜೀವಸಂಭೋದನ, ಸತಿಧರ್ಮಸಾರ ಎನ್ನುವ ಮೂರು ಕೃತಿಗಳನ್ನು ಬರೆದಿದ್ದು, ಅವನ್ನು ಶೋಧಿಸಿ ಪರಿಷ್ಕರಿಸಿ ಪ್ರಕಟಿಸಿದ ಕೀರ್ತಿ ಡಾ. ಬಿ.ಎಸ್. ಸಣ್ಣಯ್ಯನವರದು. ಕಳೆದು ಹೋಗಬಹುದಾಗಿದ್ದ ಉಪೇಕ್ಷೆಗೆ ಗುರಿಯಾಗಿದ್ದ ಬಂಧುವರ್ಮ ಕವಿ ಮತ್ತು ಕೃತಿಗಳನ್ನು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಸಮರ್ಥವಾಗಿ ತಿಳಿಸಿಕೊಟ್ಟರು. ಆ ಕಾಲದಲ್ಲಿ ಕನ್ನಡ ಭಾಷೆ ಮತ್ತು ಸಾಹಿತ್ಯದಲ್ಲಾದ ಪಲ್ಲಟಗಳನ್ನು ಬಂಧುವರ್ಮನ ಕೃತಿಗಳ ಮೂಲಕ ಸಣ್ಣಯ್ಯನವರು ಗುರುತಿಸಿದ್ದಾರೆ.

**೪. ಹರಿವಂಶಾಭ್ಯುದಯ (೧೯೭೪)**

ಬಂಧುವರ್ಮನ ಹರಿವಂಶಾಭ್ಯುದಯವು ಕನ್ನಡ ನೇಮಿಚರಿತೆಗಳ ಸಾಲಿಗೆ ಸೇರಿದ ವಿಶಿಷ್ಟ ಚಂಪು ಕೃತಿ. ಹದಿನಾಲ್ಕು ಆಶ್ವಾಸಗಳುಳ್ಳ ಈ ಕೃತಿಗೆ ಬಂಧುವರ್ಮ ಜೈನಪುರಾಣಗಳಲ್ಲಿ ಬರುವ ಪುರು. ನಾಥ. ಉಗ್ರ. ಹರಿ ಮತ್ತು ಕುರು ಎನ್ನುವ ಐದು

ವಂಶಗಳಲ್ಲಿ ನೇಮಿನಾಥನು ಹರಿವಂಶದಲ್ಲಿ ಹುಟ್ಟಿದ ಕಾರಣ ಹರಿವಂಶಾಭ್ಯುದಯ ಅಥವಾ ಹರಿವಂಶಪುರಾಣ ಎಂದು ಹೆಸರಿಸಿದ್ದಾನೆ.

೧೯೦೦ರಷ್ಟು ಹಿಂದೆಯೇ ಈ ಪ್ರತಿ ದೊರೆತಿದ್ದರೂ ಅದನ್ನು ಯಾರೂ ಪರಿಷ್ಕರಿಸಿ ಪ್ರಕಟಿಸುವ ಗೋಜಿಗೆ ಹೋಗಿರಲಿಲ್ಲ. ಡಿ.ಎಲ್. ನರಸಿಂಹಾಚಾರ್ಯರ ಒತ್ತಾಸೆಯಿಂದ ೧೯೭೪ರಲ್ಲಿ ಸಣ್ಣಯ್ಯನವರು ಈ ಕೃತಿಯನ್ನು ಏಕೈಕ ಪ್ರತಿಯ ನೆರವಿನಿಂದ ಪರಿಷ್ಕರಿಸಿ ಪ್ರಕಟಿಸುತ್ತಾರೆ. ಇದಕ್ಕೆ ಎನ್ ಬಸವಾರಾಧ್ಯ ಮತ್ತು ಡಾ. ಟಿ.ವಿ. ವೆಂಕಟಾಚಲ ಶಾಸ್ತ್ರೀಯವರ ನೆರವು ಪಡೆದದ್ದನ್ನು ಸಣ್ಣಯ್ಯನವರು ಸ್ಮರಿಸಿದ್ದಾರೆ. ಛಂದಸ್ಸು ಮತ್ತು ಅರ್ಥದ ದೃಷ್ಟಿಯಿಂದ ಬೇರೆ ಅಕ್ಷರಗಳನ್ನೋ, ಪದ್ಯಗಳನ್ನೋ ಜೋಡಿಸಿದ ಭಾಗವನ್ನು ಕಂಸದಲ್ಲಿ ಕೊಟ್ಟು ಮೂಲ ಪಾಠವನ್ನು ಅಡಿಟಿಪ್ಪಣಿಯಲ್ಲಿ ನೀಡಿದ್ದಾರೆ. ಇಷ್ಟೇ ಅಲ್ಲದೆ ಉದಯಾದಿತ್ಯಾಲಂಕಾರದಲ್ಲಿ ಉಲ್ಲೇಖವಾದ ಬಂಧುವರ್ಮನ ಕೆಲವು ಪದ್ಯಗಳು ಅಲಂಕಾರಗಳಿಗೆ ಉದಾಹರಣೆಯಾಗಿ ಬಳಕೆಯಾಗಿರುವುದನ್ನು ವಿಶೇಷವಾಗಿ ಗುರುತಿಸಿ ಪಾಠಾಂತರಗಳನ್ನು ಅಡಿಟಿಪ್ಪಣಿಯಲ್ಲಿ ನೀಡಿದ್ದಾರೆ. ಏಕೈಕ ಹಸ್ತಪ್ರತಿ ಸಹಾಯದಿಂದ ಹರಿವಂಶಾಭ್ಯುದಯವನ್ನು ಪರಿಷ್ಕರಿಸಿ ಪ್ರಕಟಿಸುತ್ತಾರೆ. ಸಣ್ಣಯ್ಯನವರು "ಪ್ರಭೆಗೆಟ್ಟ (ಡಗುವ) ತೆಱದಿಂ ನಭದಿಂ ಗಮಿಸಿದನಡಂಗಿದಂ ದಿವಸಕರಂ" ಎನ್ನುವುದಕ್ಕೆ ಪಾಠಾಂತರ ವನ್ನು ಪ್ರಬೆಗೆಟ್ಟ 'ಡಂಗು' ನವಿಸುವ ತೆರದಿಂಗ'ಡಂಗಿದಂದಿವಸಕರಂ' ಸೂರ್ಯಾಸ್ತಮಾನ ವನ್ನು 'ನಭದಿಂ ಗಮಿಸಿದನ್' ಎನ್ನುವ ಪಾಠವನ್ನು ಬಳಸಿ ಪದ್ಯವನ್ನು ಪರಿಷ್ಕರಿಸಿದ್ದಾರೆ. (ದ್ವಿಪ.೧೦) ದ್ವಿತಿಯಾಶ್ವಾಸದ ೫೭ನೇ ಪದ್ಯವನ್ನು

ಮೂಲ: ಇಂತು ಮೆನಗೆನ್ನ ರಾಜ್ಯಮ
ದನುನಯದಿಂದಕ್ಕು ಮಾಗದೋ ಮುನಿಬೆಸಸಿಂ
ಮೆಂದೊಡವರ್ ಕೇಳ್ ನೀ
ನ್ನಾತ್ಮಜೆಗಾಣ್ಮನಾದ ಭೂಚರ ಸುತನಿಂ

ಸಣ್ಣಯ್ಯನವರ ಪರಿಷ್ಕರಣೆ : ಇಂತು ಮೆನಗೆನ್ನ ರಾಜ್ಯಮ
(ದಂತನುನಯ)ದಕ್ಕು ಮಾಗದೋ ಮುನಿ ಬೆಸಸಿಂ
(ಎಂತೆ) ದೊಡ್ಡವರ್ ಕೇಳ್ ನೀ
(ನ್ನಂತಾ) ತ್ಮಜೆಗಾಣ್ಮನಾದ ಭೂಚರ ಸುತನಿಂ

ಛಂದಸ್ಸಿಗನುಗುಣವಾಗಿ ಆದಿಪ್ರಾಸವನ್ನು ಅನುಲಕ್ಷಿಸಿ ಸಣ್ಣಯ್ಯನವರು ಮೇಲಿನ ಕಂದ ಪದ್ಯವನ್ನು ಪರಿಷ್ಕರಿಸಿದ್ದಾರೆ.

**೫. ಜೀವಸಂಬೋಧನಂ**

ಜೀವಸಂಬೋಧನ ಕೃತಿಯನ್ನು ಸಣ್ಣಯ್ಯನವರು ೧೯೬೬ರಲ್ಲಿ ಪರಿಷ್ಕರಿಸಿ ಪ್ರಕಟಿಸುತ್ತಾರೆ. ಇದು ಜೈನ ದ್ವಾದಶಾನುಪ್ರೇಕ್ಷೆಗಳ ನಿರೂಪಣೆಯನ್ನು ಒಳಗೊಂಡ ಚಂಪೂ ಕೃತಿಯಾಗಿದೆ. ಶೇಷಯ್ಯಂಗಾರರು ೧೯೫೫ರಲ್ಲಿ ಒಂಭತ್ತು ಹಸ್ತಪ್ರತಿಗಳ

ಸಹಾಯದಿಂದ ಪರಿಷ್ಕರಿಸಿ ಮುದ್ರಿಸುತ್ತಾರೆ. ಇದಾದ ನಾಲ್ಕು ದಶಕಗಳ ನಂತರ ಪ್ರತಿಗಳ ಕೊರತೆ ಮತ್ತು ಕಾವ್ಯದ ಗದ್ಯಾನುವಾದದ ಅಗತ್ಯವನ್ನು ಮನಗಂಡ ಸಣ್ಣಯ್ಯನವರು ನಾಲ್ಕು ಪ್ರತಿಗಳ ಸಹಾಯದಿಂದ ಪರಿಷ್ಕರಿಸಿ ಪ್ರಕಟಿಸುತ್ತಾರೆ. ಆದರೆ ೧೯೪೪ರಲ್ಲಿ ಪ್ರತಿಯಾದ ಪ್ರತಿ ಪಾಠಗಳು ಉತ್ತಮವೆಂದು ಭಾವಿಸಿ ಅದನ್ನೇ ಮೂಲವಾಗಿಟ್ಟುಕೊಳ್ಳುತ್ತಾರೆ.

ಪೀಠಿಕೆ, ಪದ್ಯಗಳ ಅಕಾರಾದಿ ಮತ್ತು ಕನ್ನಡ ಗದ್ಯಾನುವಾದದೊಂದಿಗೆ ಸಂಪಾದಿಸಿದ್ದಾರೆ. ಪೀಠಿಕೆಯಲ್ಲಿ ಬಂಧುವರ್ಮ ನಿರ್ಲಕ್ಷಕ್ಕೆ ಗುರಿಯಾಗಿದ್ದರ ಬಗ್ಗೆ ವಿಷಾದ ವ್ಯಕ್ತಪಡಿಸುತ್ತಾರೆ. ಅದೇ ರೀತಿ ಜೀವಸಂಬೋಧನೆ ಎನ್ನುವ ಹೆಸರು ಮತ್ತು ಅದರ ಪ್ರಯೋಜನ ಕುರಿತು ಚರ್ಚಿಸುತ್ತ... ಜೀವವನ್ನು ಕುರಿತು ಮಾಡುವ ಸಂಬೋಧನೆಯಿಂದ ಈ ಕೃತಿಗೆ ಜೀವಸಂಬೋಧನ ಎನ್ನುವ ಹೆಸರು ಔಚಿತ್ಯಪೂರ್ಣ ವಾಗಿದೆ ಎಂದು ಹೇಳುತ್ತಾರೆ. ಜೈನತತ್ವವನ್ನು ಕುರಿತು ಹೇಳುವ ಕೃತಿಯಾದರೂ ಮಾನವ ಧರ್ಮಕ್ಕೆ ಸಂಬಂಧಿಸಿದ ಕೃತಿ ಇದಾಗಿರುವುದರಿಂದ ಎಲ್ಲ ವರ್ಗದ ಜನರು ಇದನ್ನು ಮೆಚ್ಚುತ್ತಾರೆ. ಈ ಮೆಚ್ಚುಗೆಗೆ ಕಾರಣವೆಂದರೆ ಲಲಿತ ಹಾಗೂ ಸರಳವಾಗಿರುವ ಪದಬಂಧವೂ ದೇಶೀಯ ಶಬ್ದಗಳಿಂದ ಕೂಡಿದ ವಾಕ್ಯರಚನೆಯೂ ಕಾರಣ ಆಗಿದೆ. ಇದು ಮೇಲ್ನೋಟಕ್ಕೆ ಶಾಸ್ತ್ರಗ್ರಂಥವಾಗಿ ಕಂಡರೂ ಕಾವ್ಯಭ್ಯಾಸಿಗಳಿಗೆ ಉತ್ತಮ ಕಾವ್ಯವಾಗಿ ತತ್ವಚಿಂತಕರಿಗೆ ಬತ್ತದ ಸೆಲೆಯಾಗಿ ಕಂಡುಬರುತ್ತದೆ" (ಜೀವಸಂ., ಪು.೨ :೧೯೬೬) ಕುಂದಕುಂದರು ಹಾಗೂ ಇತರೆ ಗ್ರಂಥಗಳಿಂದ ಬಂಧುವರ್ಮ ಉಪಕೃತನಾಗಿರುವುದನ್ನು ಹಲವು ಉದಾಹರಣೆಗಳ ಮೂಲಕ ಸಂಪಾದಕರು ವಿವರಿಸುತ್ತಾರೆ. "ಈ ಕೃತಿಯಲ್ಲಿ ಸಂಸ್ಕೃತ ಭೂಯಿಷ್ಠತೆಯನ್ನಾಗಲೀ ವರ್ಣಾಡಂಬರವನ್ನಾಗಲೀ ಕಾಣಲಾಗುವುದಿಲ್ಲ. ಇದು ಸಾಮಾನ್ಯ ಚಂಪು ಕಾವ್ಯಗಳಿಗಿಂತ ಭಿನ್ನವಾಗಿದೆ ಎಂದು ಕಾವ್ಯದ ಮಹತ್ವವನ್ನು ವಿವರಿಸುವಾಗ, ಕನ್ನಡ ಕಾವ್ಯಗಳ ನಿಜವಾದ ಸಂವಹನ ಪಾತಳಿ ಬಗ್ಗೆ ಹೇಳುತ್ತಾರೆ. ಆ ಮೂಲಕ ಕನ್ನಡದ ಬಹು ಓದಿನ ಹಾಗೂ ಅನುಸಂಧಾನದ ನೆಲೆಗಳನ್ನು ಹೇಳುತ್ತಾರೆ. ಆದರೆ ಕೃತಿಯ ಸಂಪಾದನೆಗೆ ಬಂದಾಗ ಇಂಥ ಬಹುತ್ವದ ನೆಲೆಗಳನ್ನು ಬಿಟ್ಟುಕೊಟ್ಟು ಶಾಸ್ತ್ರೀಯ ಸಂಪಾದನೆಗೆ ಬದ್ಧರಾಗುತ್ತಾರೆ. ಸಂಪಾದಕರು ಜೀವಸಂಬೋಧನೆ ಕೃತಿ ಸಾಮಾನ್ಯ ಓದುಗರಿಗೆ ಅರ್ಥವಾಗಲೆಂದು ಆಧುನಿಕ ಗದ್ಯಾನುವಾದದೊಂದಿಗೆ ಪ್ರಕಟಿಸಿದ್ದಾರೆ.

**೬. ಸತಿಧರ್ಮಸಾರ**

ಕನ್ನಡ ವಿದ್ವತ್ ಲೋಕಕ್ಕೆ ಅಪರಿಚಿತವಾಗಿದ್ದ ಜೀವಸಂಬೋಧನೆಯ ಹೆಸರಿನಲ್ಲಿ ಮರೆಮಾಚಿದ್ದ ಸತಿಧರ್ಮಸಾರ ಕೃತಿಯನ್ನು ಡಾ. ಸಣ್ಣಯ್ಯನವರು ೧೯೭೭ರಲ್ಲಿ ಮೊದಲ ಬಾರಿಗೆ ಪರಿಷ್ಕರಿಸಿ ಪ್ರಕಟಿಸುತ್ತಾರೆ. ಕೃತಿಯ ಆಂತರಿಕ ಸಾಕ್ಷ್ಯಗಳನ್ನೇ ಬಳಸಿ ಕೊಂಡು ಕೃತಿಯ ಹೆಸರು ಸತಿಧರ್ಮಸಾರವೆಂದೂ ಇದರ ಕರ್ತೃ ಬಂಧುವರ್ಮನೆಂದು ಸಿದ್ಧಪಡಿಸುತ್ತಾರೆ.

ಮೂಡಬಿದಿರೆಯ ಜೈನಧರ್ಮಶಾಲೆಯಲ್ಲಿ ಜೀವಸಂಬೋಧನೆ ಹೆಸರಿನ ಹಸ್ತಪ್ರತಿಗಳಲ್ಲಿ ಅಡಗಿದ್ದ ಕೃತಿಯನ್ನು ಶೋಧಿಸಿ ಏಕೈಕ ಹಸ್ತಪ್ರತಿಯ ಸಹಾಯದಿಂದ

ಗದ್ಯಾನುವಾದದೊಡನೆ ಸಂಪಾದಿಸಿಕೊಟ್ಟರು. ಅರ್ಥಪೂರ್ಣ ಪೀಠಿಕೆ, ಅರ್ಥಕೋಶ, ಪದ್ಯಗಳ ಅಕಾರಾದಿ ಪಟ್ಟಿ ನೀಡಿದ್ದಲ್ಲದೆ ತಾನು ತಿದ್ದುಪಡಿ ಮಾಡಿರುವ ಭಾಗವನ್ನು ಕಂಸದಲ್ಲಿ ನೀಡಿ ಪಾಠಾಂತರಗಳನ್ನು ಅಡಿಟಿಪ್ಪಣಿಯಲ್ಲಿ ಕೊಟ್ಟಿದ್ದಾರೆ. ಅಲ್ಲದೆ ಸತಿಧರ್ಮಸಾರವು ಶ್ರಾವಕಿಯರಿಗೆ ಹಿತವಚನವನ್ನು ಹೇಳುವುದರೊಂದಿಗೆ ಮಹಿಳೆಯರಿಗೆ ಅತ್ಯುಪಯುಕ್ತವಾದುದೆಂಬುದನ್ನು ಮನಗಾಣಿಸುತ್ತಾರೆ. ಪದ್ಯ ಎಂಟರ "ಸ್ಥಿತಿಯಂ ಜಿನಪತಿಯ ನುಡಿಯಂ" ಎಂಬ ಸಾಲಿಗೆ "ಸ್ಥಿತಿಯಂ ಜಿನಪತಿನುಡಿ" ಎಂದೂ ಹಳಗನ್ನಡ ರೂಪಕ್ಕೆ ಪರಿವರ್ತಿಸಿಕೊಡುತ್ತಾರೆ. ಸಣ್ಣಪುಟ್ಟ ತಿದ್ದುಪಡಿಗಳೊಂದಿಗೆ ಅಜ್ಞಾತವಾಗಿದ್ದ ಕೃತಿಯೊಂದನ್ನು ಬೆಳಕಿಗೆ ತಂದಿದ್ದಲ್ಲದೆ ಬಂಧುವರ್ಮನ ಮೂರು ಕೃತಿಯನ್ನು ಸಂಪಾದಿಸಿದ ಶ್ರೇಯಸ್ಸಿಗೆ ಸಣ್ಣಯ್ಯನವರು ಕಾರಣವಾಗಿದ್ದಾರೆ.

**೭. ಸಾಹಸಭೀಮವಿಜಯ**

ಡಾ. ಬಿ.ಎಸ್. ಸಣ್ಣಯ್ಯನವರು ಸಾಹಸಭೀಮವಿಜಯ ಕೃತಿಯನ್ನು ರಾ.ಗೌ. ಅವರೊಂದಿಗೆ ಸಂಪಾದಿಸಿ ೧೯೮೫ರಲ್ಲಿ ಪ್ರಕಟಿಸಿದ್ದಾರೆ. ಇದಕ್ಕೆ ಮೊದಲ ೧೯೨೫ರ ಹಿಂದೆಯೇ ಎಂ.ಎ. ರಾಮಾನುಜಯ್ಯಂಗಾರ ಮತ್ತು ಎಸ್.ಜಿ.ನರಸಿಂಹಾಚಾರ್ಯರಿಂದ ಮುದ್ರಣಗೊಂಡಿತ್ತು. ನಂತರ ೧೯೨೫ರಲ್ಲಿ ಎಂ.ಎ ರಾಮಾನುಜಯ್ಯಂಗಾರರು ತಾವೊಬ್ಬರೆ ಪರಿಷ್ಕರಿಸಿ ಪ್ರಕಟಿಸಿದರು. ನಂತರ ಕೆ.ವಿ. ಕೃಷ್ಣಭಟ್ ಪ್ರಕಟಿಸಿದರು. (೧೯೪೬, ೧೯೭೫) ಸುಬ್ರಾಯ ಭಟ್ಟರು (೧೯೭೫) ಮುಂತಾದವರು ಪರಿಷ್ಕರಿಸಿ ಪ್ರಕಟಿಸಿದರು. ೧೯೪೯ರಲ್ಲಿ 'ಗದಾಯುದ್ಧಸಂಗ್ರಹ' ಉತ್ತಮ ಪಾಠಗಳೊಂದಿಗೆ ಪ್ರಕಟವಾಯಿತು.

ಸಮಗ್ರ ಕಾವ್ಯದ ಪರಿಷ್ಕರಣದ ಅಗತ್ಯವನ್ನು ಮನಗಂಡು ಮುದ್ರಿತ ಪ್ರತಿಗಳ ಅಲಭ್ಯತೆ ಹಿನ್ನೆಲೆಯಲ್ಲಿ ಸಣ್ಣಯ್ಯನವರು ರಾ.ಗೌ. ಅವರೊಂದಿಗೆ ಸೇರಿ ಹಿಂದಿನ ಮುದ್ರಿತ ಪ್ರತಿಗಳ ಜೊತೆಗೆ ಇತರ ಎರಡು ಹಸ್ತಪ್ರತಿಗಳನ್ನು ಬಳಸಿ 'ಸಾಹಸಭೀಮ ವಿಜಯಂ' ಕಾವ್ಯವನ್ನು ಮತ್ತೊಮ್ಮೆ ಸಂಪಾದಿಸಿದರು. ಕಾಲದ ದೃಷ್ಟಿಯಿಂದ ಪ್ರಾಚೀನವಾದ (೧೨೬೪) ಓಲೆಪ್ರತಿಯನ್ನು ಆಧಾರವಾಗಿಟ್ಟುಕೊಂಡು ಕಾವ್ಯಾವಲೋಕನ, ಶಬ್ದಮಣಿ ದರ್ಪಣ, ಶಬ್ದಾನುಶಾಸನ ಮೊದಲಾದ ಕಾವ್ಯಗಳಲ್ಲಿ ಉಲ್ಲೇಖವಾಗಿರುವ ಗದಾಯುದ್ಧದ ಪದ್ಯಗಳನ್ನು ಗುರುತಿಸಿ ಪರಿಷ್ಕರಣೆಗೆ ಬಳಸಿಕೊಂಡರು.

'ಶಂತನುಜ' 'ಶಕ್ರಸುತ' 'ವಡ್ಡವಾರ' 'ನೀನುತ್ತಿ ನೀರೊಳಗೆ' ಮುಂತಾದ ಪಾಠದೋಷಗಳನ್ನು ಕೃತಿಯ ಸಾಂದರ್ಭಿಕ ಅರ್ಥಗಳಲ್ಲೆ ಹುಡುಕಿ ಪರಿಷ್ಕರಿಸುವ ಅವರ ವೈಧಾನಿಕತೆ ಗಮನಿಸುವಂಥದ್ದು. ವಿದ್ವತ್‌ಪೂರ್ಣ ಪ್ರಸ್ತಾವನೆಯಲ್ಲಿ ಕವಿ ಕಾವ್ಯ ವಿಚಾರಗಳ ಜೊತೆಗೆ ಹತ್ತನೇ ಶತಮಾನದ ರಾಜಕೀಯ, ಸಾಮಾಜಿಕ, ಧಾರ್ಮಿಕ ವಿಚಾರಗಳ ಕುರಿತು ಚರ್ಚಿಸಿದ್ದಾರೆ. ಸೂಕ್ತ ಅನುಬಂಧ, ಕಥಾಸಾರ, ಪದ್ಯಗಳ ಅಕಾರಾದಿಯನ್ನು ವ್ಯವಸ್ಥಿತವಾಗಿ ನೀಡಿದ್ದಾರೆ. ವಿಶೇಷವಾಗಿ ಗದಾಯುದ್ಧ ಶೀರ್ಷಿಕೆಯ ಗೊಂದಲದ ಬಗ್ಗೆ ಚರ್ಚಿಸುತ್ತ ಕವಿ ತನ್ನ ಕಾವ್ಯವನ್ನು ಸಾಹಸಭೀಮವಿಜಯಂ ಎಂದು ಕರೆದಾಗಲೂ ಬೇರೆ ಹೆಸರಿನಿಂದ ಕರೆಯುವುದು ಉಚಿತವಲ್ಲ ಎಂಬುದನ್ನು ಹೇಳುತ್ತಾರೆ.

೮. ಅಜಿತ ತೀರ್ಥಂಕರ ಪುರಾಣ

ಅಜಿತ ತೀರ್ಥಂಕರ ಪುರಾಣ ತಿಲಕ ಅಥವಾ ಅಜಿತನಾಥ ಪುರಾಣವು ತೀರ್ಥಂಕರನ ಕಥೆಯ ಮೂಲಕ ಆಧ್ಯಾತ್ಮಿಕವಾಗಿಯೂ ಸಗರನ ಕಥೆ ಮೂಲಕ ವ್ಯವಹಾರಿಕ ಸತ್ಯಗಳನ್ನು ಮೈಗೂಡಿಸಿಕೊಂಡು ಬೆಳೆದ ಕೃತಿಯಾಗಿದೆ. ಇಂತಹ ಉತ್ತಮ ಹಾಗೂ ವಿಭಿನ್ನ ಕೃತಿಯನ್ನು ಮೊದಲು ಸಂಪಾದಿಸಿ ಪ್ರಕಟಿಸಿದವರು ಎಂ.ಎ. ರಾಮಾನುಜಯ್ಯಂಗಾರರು. ೧೯೧೦ರಲ್ಲಿ ಕರ್ನಾಟಕ ಕಾವ್ಯ ಕಲಾನಿಧಿ ಪ್ರಕಾಶನದ ಮೂಲಕ ಪ್ರಕಟಿಸುತ್ತಾರೆ. ಮೊದಲು ಎರಡು ಆಶ್ವಾಸಗಳನ್ನು ಬಿಟ್ಟರೆ ರನ್ನನ ಅಜಿತ ತೀರ್ಥಂಕರ ಪುರಾಣ ಕಾವ್ಯವನ್ನು ಸಂಪೂರ್ಣವಾಗಿ ಪ್ರಕಟಿಸಿದ ಮೊದಲ ಕೀರ್ತಿ ರಾಮಾನುಜಯ್ಯಂಗಾರರಿಗೇ ಸಲ್ಲಬೇಕು. ಈ ಆವೃತ್ತಿಯೇ ಮುಂದಿನ ಸಂಪಾದಕರಿಗೆ ಆಧಾರವಾಯಿತು.

ಐವತ್ತು ವರುಷದ ನಂತರ ಹೆಚ್. ದೇವಿರಪ್ಪನವರು ಮತ್ತು ದೇ. ಜವರೇಗೌಡ ಅವರು ೧೯೫೯ರಲ್ಲಿ ಶ್ರವಣಬೆಳಗೊಳದಲ್ಲಿ ದೊರೆತ ಪ್ರತಿಯ ಜೊತೆಗೆ ಮತ್ತೆ ಮೂರು ಹಸ್ತಪ್ರತಿಗಳು (ಕೆ.೮,ಎ.೧೮,ಎ೫೩) ಮತ್ತು ಮುದ್ರಿತ ಪ್ರತಿಗಳ ಸಹಾಯದಿಂದ ಪರಿಷ್ಕರಿಸಿ ಪ್ರಕಟಿಸುತ್ತಾರೆ. ಪ್ರಕಟಿತ ಕೃತಿಗಳ ಅಭಾವವನ್ನರಿತ ಡಾ. ಸಣ್ಣಯ್ಯನವರು ೧೯೮೮ರಲ್ಲಿ ಡಾ. ರಾಗೌ ಅವರೊಂದಿಗೆ ಆರು ಹಸ್ತಪ್ರತಿಗಳ ಮತ್ತು ಮುದ್ರಿತ ಪ್ರತಿಗಳ ನೆರವಿನಿಂದ ಅಜಿತತೀರ್ಥಂಕರ ಪುರಾಣ ಕೃತಿಯನ್ನು ಪರಿಷ್ಕರಿಸಿ ಪ್ರಕಟಿಸುತ್ತಾರೆ.

ಪ್ರಸ್ತಾವನೆಯಲ್ಲಿ ಕವಿ, ಕಾವ್ಯ, ವಿಚಾರ, ಕಾವ್ಯದಲ್ಲಿನ ಚಾರಿತ್ರಿಕ ಸಂಗತಿಗಳು, ಅತ್ತಿಮಬ್ಬೆ ಚಿತ್ರಣ, ಸಗರಪ್ರಕರಣ, ಜೈನ ಪುರಾಣಗಳ ತಾತ್ವಿಕತೆ, ಹಿಂದು ಪುರಾಣಕಥೆಯು ಜೈನಸಂಪ್ರದಾಯದಲ್ಲಿ ಮೂಡಿಬಂದ ರೀತಿಯನ್ನು ಚರ್ಚಿಸುತ್ತಾರೆ. ಸಂಪಾದಕದ್ವಯರು ತಾವು ಬಳಸಿದ ಕ, ಗ, ಚ, ಜ ಪ್ರತಿಗಳಲ್ಲಿ ತ್ರುಟಿತವಾದ ಹಾಗೂ ಲುಪ್ತವಾದ ಭಾಗಗಳನ್ನು ಅಡಿಟಿಪ್ಪಣಿಯಲ್ಲಿ ನೀಡಿದ್ದಾರೆ. ಪ್ರತಿಗಳಲ್ಲಿನ ಹೆಚ್ಚಿನ ಪದ್ಯಗಳನ್ನು ಗುರುತುಮಾಡಿದ್ದಾರೆ. ಯಾವುದೇ ನಿರ್ದಿಷ್ಟ ಹಸ್ತಪ್ರತಿಯನ್ನು ಬಳಕೆ ಮಾಡಿಲ್ಲ. ರಾಮಾನುಜಯ್ಯಂಗಾರರು ಎಚ್ ದೇವಿರಪ್ಪ ಮತ್ತು ದೇ. ಜವರೇಗೌಡರು ತಮ್ಮ ಆವೃತ್ತಿಗಳಲ್ಲಿ ಅರ್ಥವಾಗದೆ ಬಿಟ್ಟ ಪದ್ಯಗಳನ್ನು ಅವುಗಳ ಸಾಂದರ್ಭಿಕ ಅರ್ಥಗಳೊಂದಿಗೆ ವಿವರಿಸಿದ್ದಾರೆ ಪಾಠದೋಷಗಳನ್ನು ಸರಿಪಡಿಸಿದ್ದಾರೆ.

ಉದಾ: ಪ್ರಥಮಾಶ್ವಾಸದ ಇಪ್ಪತ್ತೊಂದನೆ ಪದ್ಯದ ಪಾರಿಜಾತಮಲ್ಲದೆ ಪರಾಜಿತಮಲ್ಲ (ಕ.ಪ್ರತಿ) ಎನ್ನುವ ಪಾಠವನ್ನು 'ಸುಪ್ರಳಾಪವಿಲ್ಲದೆ ವಿಪ್ರಳಾಪಮಿಲ್ಲ ವಿಪ್ರಯುಕ್ತರಲ್ಲದ ವಿಪ್ರಯುಕ್ತರಿಲ್ಲ' ಎಂಬ ವಚನದಂತೆ ಪಾರಿಜಾತಮಲ್ಲದ ಪಾರಾಜಿತಮಿಲ್ಲ ಎಂದು ತಿದ್ದುತ್ತಾರೆ.

ಅದೇ ರೀತಿ ತೃತೀಯಾಶ್ವಾಸ ಪದ್ಯ ಏಳರ ತೊಡೆ 'ವನಲಕ್ತ' 'ರಸದಿಂ (ಕ.ಚ.ಜ ಪ್ರತಿ) ತೊಡೆದನವಲಕ್ತ' ರಸದಿಂದ (ಗ ಪ್ರತಿ) ಯಲ್ಲಿನ ಪಾಠಾಂತರಗಳನ್ನು ಗರ್ಭಶೋಧನಾ ವಿಧಿಗೆ ಬಂದ ಅಮರಾಂಗನೆಯರು ವಿಜಯ ಸೇನಾ ದೇವಿಗೆ ಅಲಕ್ತಕ ರಸವನ್ನು

ಆಕೆಯ ಕಾಲುಗಳಿಗೆ ಸವರುತ್ತಿರುವುದನ್ನು ಕವಿ ಚಿತ್ರಿಸಿದ್ದಾನೆ. 'ಅಲಕ್ತರಸವೆಂದರೆ' 'ಅರಗಿನರಸ' ಇಲ್ಲಿ 'ಅಲಕ್ತಕ' ಎಂಬ ಪಾಠ 'ನಲವಕ್ತ'ವಾಗಿದೆ. ಮೊದಲಿನ ಮೂರು ಆವೃತ್ತಿಯಲ್ಲಿ ಉಳಿದ ದೋಷವನ್ನು ಜೈನ ತಾತ್ವಿಕತೆ ಹಾಗೂ ಸಂಪ್ರದಾಯದ ಅರಿವಿನ ಬಲದಿಂದ ಸಣ್ಣಯ್ಯನವರು 'ತೊಡೆವ ಅಲಕ್ತರಸದಿಂ' ಎಂದು ಸರಿಪಡಿಸುತ್ತಾರೆ. ಅದೇ ರೀತಿ ಅರಳೆಲೆ (೫ ಪದ್ಯ. ೬೨) ಪದವನ್ನು ಅರಳೆಲೆ (ಅರಳಿ ಎಲೆಯ ಆಕಾರದ ಒಡವೆ) ಎಂದು, ಅಷ್ಟಕಂ (೭-೧೪) ಎನ್ನುವುದನ್ನು ತೀರ್ಥಂಕರನಿಗೆ ಒದಗಿ ಬರುವ ಮಹಿಮೆಗಳು ಎನ್ನುವ ಅರ್ಥಸಾದೃಶ್ಯದ ಮೂಲಕ ಪ್ರಾತಿಹಾರ್ಯಾಷ್ಟಕಂ ಎಂದು ಓದುತ್ತಾರೆ. ಇಂತಲ್ಲಿ ಮತ್ತೆ ಮತ್ತೆ ಪದ್ಯದ ಸಾಂದರ್ಭಿಕ ಹಾಗೂ ಆಗಮಿಕಾರ್ಥಗಳನ್ನೇ ತಿದ್ದುಪಡಿಗೆ ಬಳಸಿಕೊಳ್ಳುವುದನ್ನು ಕಾಣುತ್ತೇವೆ.

### ೯. ರತ್ನಕರಂಡಕ ಶ್ರಾವಕಾಚಾರ್ಯ

ಚೂಡಾಮಣಿ ಸಮಂತಭದ್ರ ಆಚಾರ್ಯರಿಂದ ಸಂಸ್ಕೃತದಲ್ಲಿ ರಚಿತವಾದ ರತ್ನಕರಂಡಕ ಶ್ರಾವಕಾಚಾರ್ಯ ಎನ್ನುವ ಕೃತಿಯನ್ನು ಕನ್ನಡದಲ್ಲಿ ಆಯತವರ್ಮ ಅನುವಾದಿಸಿದ್ದಾನೆ. ಗುಣಶೀಲ ಸ್ವಭಾವಗಳ ಬಗ್ಗೆ ಹೇಳುವ ಈ ಆಯತವರ್ಮನ ಈ ಕೃತಿಯನ್ನು ಮಿರ್ಜಿಅಣ್ಣಾರಾಯರು ಹೊಸಗನ್ನಡಕ್ಕೆ ಅನುವಾದಿಸಿದ್ದಾರೆ. ಜೈನ ಧಾರ್ಮಿಕ ಪದ್ಧತಿಗಳನ್ನು ವಿಶಿಷ್ಟವಾಗಿ ನಿರೂಪಿಸುವ ಜೈನಕಥಾ ಪರಂಪರೆಯಲ್ಲಿ ತನ್ನದೇ ಆದ ವಿಶಿಷ್ಟ ಮಹತ್ವ ಪಡೆದ ಈ ಕೃತಿಯನ್ನು ಡಾ. ಸಣ್ಣಯ್ಯನವರು ೨೦೦೨ರಲ್ಲಿ ಏಕೈಕ ಹಸ್ತಪ್ರತಿಯ ಸಹಾಯದಿಂದ ಪರಷ್ಕರಿಸಿ ಪ್ರಕಟಿಸಿದ್ದಾರೆ. ಬಳಸಿದ್ದು ಮೂರು ಪ್ರತಿಗಳಾದರು ಅವು ಒಂದರ ನಕಲು ಮತ್ತೊಂದಾಗಿವೆ ಎಂದು ಹೇಳುತ್ತಾರೆ.

'ದೊರೆತ ಅಶುದ್ಧ ಅಸಮಗ್ರ ಏಕೈಕ ಹಸ್ತಪ್ರತಿಯಿಂದ ಪಾಠಪರಿಷ್ಕರಣ ಮಾಡಬೇಕಾದ ಅನಿವಾರ್ಯತೆ ಒದಗಿಬಂದ ಕಾರಣ ಇಲ್ಲಿ ಕಂಡುಬರುವ ಅಕ್ಷರ ಸ್ಖಾಲಿತ್ಯಗಳನ್ನು ಸರಿಪಡಿಸಿ ಪಾಠ ಸಮಸ್ಯೆಗಳನ್ನು ಪರಿಹರಿಸಿ ಮೂಲ ಪಾಠವನ್ನು ಒಪ್ಪಗೊಳಿಸಬೇಕಾದ ಹೊಣೆಕಾರಿಕೆಯಿದೆ' ಎಂದು ಪೀಠಿಕೆಯಲ್ಲಿ ಹೇಳುತ್ತಾರೆ. ಸಮ್ಯಕ್‌ದರ್ಶನಸ್ವರೂಪ, ಸಮ್ಯಕ್‌ಜ್ಞಾನಸ್ವರೂಪ ಹಾಗೂ ಸಮ್ಯಕ್‌ಚಾರಿತ್ರಸ್ವರೂಪ ಎಂದು ಮೂರು ಅಧ್ಯಾಯಗಳಲ್ಲಿ ಕೃತಿಯನ್ನು ಸಂಪಾದಿಸಿ ವಿಸ್ತೃತವೂ ಉಪಯುಕ್ತವೂ ಆದ ಪ್ರಸ್ತಾವನೆ ಬರೆದು ವಿಷಯಸೂಚಿ ಅರ್ಥಕೋಶಗಳನ್ನು ನೀಡಿದ್ದಾರೆ.

ಪ ಕಾರ ಚ ಕಾರದ ಸಾಮ್ಯತೆ ಮತ್ತು ಸಮಸ್ಯೆಗಳು 'ಪುದುಹಳ್ದಂ' ಎಂಬುದನ್ನು 'ಪುದುವಾಳ್ದಂ' ಎನ್ನುವ ಹತ್ತು ಹಲವಾರು ಅಕ್ಷರ ಸ್ಖಾಲಿತ್ಯಗಳನ್ನು ಪರಿಷ್ಕರಿಸಿದ್ದಲ್ಲದೆ ಲುಪ್ತವಾದ ಭಾಗಗಳನ್ನು ಸಂಕೇತಗಳ ಮೂಲಕ ಸೂಚಿಸುತ್ತಾರೆ. ಹಸ್ತಪ್ರತಿಯಲ್ಲಿಯೇ ಉಳಿದಿದ್ದ ರತ್ನಕರಂಡಕ ಕೃತಿಯನ್ನು ಪ್ರಕಟಿಸಿ ಶ್ರಾವಕರಿಗೆ ಸಾಧಕರಿಗೆ ಅನುಕೂಲ ವಾಗಿಸಿದ್ದಾರೆ. ಇದು ಅಹಿಂಸೆಯ ನೆಲೆಯಲ್ಲಿ ಜೈನ ಗೃಹಸ್ಥರ ಆಚರಣೆಗಳನ್ನು ಪ್ರತಿಪಾದಿಸುತ್ತದೆ.

## ೧೦. ಪುಷ್ಪಾಂಜಲಿ ಮತ್ತು ಜೀವದಯಾಷ್ಟಮಿ ನೋಂಪಿಗಳು

ಸಣ್ಣಯ್ಯನವರು ಸಂಪಾದಿಸಿರುವ (೨೦೦೩) ಅಜ್ಞಾತ ಕವಿಯ 'ಪುಷ್ಪಾಂಜಲಿ ನೋಂಪಿ' ಮತ್ತು ಚಂದವರ್ಣಿಯ 'ಜೀವದಯಾಷ್ಟಮಿನೋಂಪಿ' ಕಥೆಗಳು ವಿಶಿಷ್ಟವಾಗಿವೆ. ಮೊದಲನೆಯದು ಚಂಪುವಿನಲ್ಲಿದ್ದರೆ, ಎರಡನೆಯದು ಷಟ್ಪದಿಯಲ್ಲಿದೆ.

ಸಣ್ಣಯ್ಯನವರು ಮೂರು ಓಲೆ ಪ್ರತಿಗಳನ್ನು ಉಪಯೋಗಿಸಿಕೊಂಡು ಗದ್ಯಾನುವಾದದೊಡನೆ ಈ ಕೃತಿಯನ್ನು ಸಂಪಾದಿಸಿದ್ದಾರೆ. ಪಾಠದೋಷಗಳನ್ನು ಸರಿಪಡಿಸಿ, ಗದ್ಯ ರೂಪದಲ್ಲಿದ್ದ ಕಥೆಗಳನ್ನು ಪದ್ಯರೂಪದಲ್ಲಿಯೂ ಪರಿಷ್ಕರಿಸಿ ಪ್ರಕಟಿಸಿದ್ದಾರೆ. ಕಂದ ವೃತ್ತಗಳ ರಚನಾಶೈಲಿ ದೇಸೀ ಪದಗಳಿಂದ ಕೂಡಿದ ವೈಶಿಷ್ಟ್ಯವನ್ನು ಸಂಪಾದಕರು ಗುರುತಿಸಿದ್ದಾರೆ.

## ೧೧. ಗೊಮ್ಮಟಸಾರ

ಕೇಶಣ್ಣ ಕವಿಯ ಗೊಮ್ಮಟಸಾರದ ಬೃಹತ್ ಕೃತಿಯ ಮೂರು ಸಂಪುಟಗಳನ್ನು ಡಾ. ಸಣ್ಣಯ್ಯನವರು ಪರಿಷ್ಕರಿಸಿ ಪ್ರಕಟಿಸಿದ್ದಾರೆ. (೨೦೦೫) ಧವಲಾ, ಜಯದವಲಾ, ಮಹಾಧವಲಾ ಈ ಮೂರು ಕೃತಿಗಳ ಒಟ್ಟು ಸಂಕ್ಷಿಪ್ತ ರೂಪವೇ ಗೊಮ್ಮಟಸಾರ ಕೃತಿಯಾಗಿದೆ.

ಹತ್ತು ಚಂಪು ಕಾವ್ಯಗಳನ್ನು ಡಾ. ಸಣ್ಣಯ್ಯನವರು ಸಂಪಾದಿಸಿದ್ದಾರೆ. ಆದರೆ ಈ ಎಲ್ಲ ಕೃತಿಗಳು ನಾವು ಚಂಪು ಎಂದು ಕರೆಯುವ ಬಂಧಕ್ಕಿಂತ ಹೆಚ್ಚು ಭಿನ್ನವಾದಂತವು. "ಕವಿ ಚತುರ್ಮುಖನಾದ ರನ್ನನು ಅಜಿತ ಪುರಾಣವನ್ನು ಕಂದ, ವೃತ್ತ, ವಚನ, ರಗಳೆಗಳೆಂಬ ಛಂದಸ್ಸಿನಲ್ಲಿ ಕಟ್ಟಿರುತ್ತಾನೆಂದು" ಹೇಳುವ ಎಚ್. ದೇವಿರಪ್ಪ ಮತ್ತು ದೇ. ಜವರೇಗೌಡರ ಮಾತು ಗಮನಸುವಂತದ್ದು. ಜೊತೆಗೆ 'ಉತ್ತಮ ಮಾತೃಕೆಗಳು ದೊರಕಲಿಲ್ಲ' 'ಪ್ರಕಟಿತ ಕೃತಿಗಳ ಅಭಾವ' ಅಶುದ್ಧ ಸ್ಖಾಲಿತ್ಯ ಎನ್ನುವ ಮಾತುಗಳು ಕನ್ನಡದ ಪಠ್ಯದ ಚಲನಶೀಲ ಹಾಗೂ ಸಡಿಲ ಬಂಧವನ್ನು ತಿಳಿಸುವಂಥವು. 'ನೇಮಿಚಂದ್ರ ಧರ್ಮದ ಕಟ್ಟುಪಾಡುಗಳಿಗೆ ಅಧೀನವಾಗದೆ ಅಲ್ಲಲ್ಲಿ ಹೊಸ ಮಾರ್ಪಾಡುಗಳನ್ನು ರೂಢಿಸಿದ್ದಾನೆ. ಈ ಕಸಿಮಾಡುವಿಕೆಯಿಂದ ಅರ್ಧನೇಮಿ ಪುರಾಣ ಕಾವ್ಯದ ಚೆಲುವು ಮೂಲಕ್ಕಿಂತ ಹೆಚ್ಚಿದೆ' ಎಂದು ನೇಮಿನಾಥ ಪುರಾಣದ ಬಗ್ಗೆ ಹೇಳುವ ಮಾತಾಗಲೀ, "ನಾಗಚಂದ್ರ ಮತ್ತು ಬಂಧುವರ್ಮರಂತವರು ಸಾಮಾಜಿಕ ಬದ್ಧತೆಗಿಂತ ಧಾರ್ಮಿಕ ಬದ್ಧತೆಯನ್ನೇ ತಮ್ಮ ಕಾವ್ಯೋದ್ದೇಶವಾಗಿ ಸ್ವೀಕರಿಸಿದ್ದು ಮಹತ್ವದ ಬದಲಾವಣೆಯೇ ಆದರೂ ಇದರಿಂದ ಸೃಜನಶೀಲತೆಗೊಂದು ಮಿತಿ ಪ್ರಾಪ್ತವಾಯಿತು ಎಂದು ಹೇಳಬೇಕು" (ರಾಗೌ ೧೯೯೬) ಬಂಧುವರ್ಮ ಸರಳವಾಗಿ ದೇಶೀ ಪದಗಳ ಮೂಲಕ ಮನಮುಟ್ಟುವಂತೆ ನಿರೂಪಿಸಿದ್ದಾನೆ. ಗದಾಯುದ್ಧ, ಅಜಿತ ಪುರಾಣದಿಂದ ಹಿಡಿದು ಪುಷ್ಪಾಂಜಲಿ ಮತ್ತು ಜೀವದಯಾಷ್ಟಮಿ ಕೃತಿಯವರೆಗೂ ಆಯಾ ಕವಿ ಮತ್ತು ಕಾವ್ಯಬಂಧದಲ್ಲಿನ ಚಲನಶೀಲತೆಯನ್ನು ಅದರ ಸೃಜನಶೀಲತೆಯನ್ನು ಸಣ್ಣಯ್ಯನವರು ಮತ್ತು ರಾಗೌ

ಅವರು ಪ್ರಮುಖವಾಗಿ ಗುರುತಿಸುತ್ತಾರೆ. ಕವಿ ಮತ್ತು ಕಾವ್ಯದ ಅಗಾಧ ಅನುಸಂಧಾನದ ಸಾಧ್ಯತೆಗಳನ್ನು ಅದರ ದೇಶೀ ಸಂವೇದನೆಗಳನ್ನು ಪಾಠಪರಿಷ್ಕರಣದ ಬಹುಮುಖ್ಯ ವೈಧಾನಿಕತೆಯನ್ನಾಗಿಸಿ ಕೊಳ್ಳುತ್ತಲೇ ಪಠ್ಯದ ಮುದ್ರಿತರೂಪ ಆಕಾರಗೊಳ್ಳುವಾಗ ಅದು ಹೆಚ್ಚು ಸಂಸ್ಕೃತ ಅಥವಾ ವಸಾಹತು ವೈಧಾನಿಕತೆಯನ್ನು ನೆಚ್ಚಿಕೊಳ್ಳುತ್ತದೆ. ತಮ್ಮ ಅಗಾಧ ಲೋಕಾನುಭವ ಹಾಗೂ ಪಾಂಡಿತ್ಯಗಳ ಮೂಲಕ ಪಠ್ಯದ ಅಂತರಾತ್ಮ ದೊಳಗಿಂದಲೇ ಪಾಠ ಪರಿಷ್ಕರಣದ ಆಕರಗಳನ್ನು ಸೃಷ್ಟಿ ಮಾಡಿಕೊಳ್ಳುವ ಸಣ್ಣಯ್ಯನವರು ಅದನ್ನು ಕೃತಿರೂಪಕ್ಕಿಳಿಸುವಾಗ ಮತ್ತೆ ರೂಢಿಗತ ನೆಲೆಯಲ್ಲಿಯೇ ನಿಂತು ಬಿಡುತ್ತಾರೆನಿಸುತ್ತದೆ.

### ೨. ಷಟ್ಪದಿ ಸಾಹಿತ್ಯ ಸಂಪಾದನೆ

ವಾಸ್ತವವಾಗಿ ಡಾ. ಸಣ್ಣಯ್ಯನವರು ಗ್ರಂಥಸಂಪಾದನ ಕ್ಷೇತ್ರಕ್ಕೆ ಪ್ರವೇಶ ಪಡೆಯುವುದೇ ಷಟ್ಪದಿ ಸಾಹಿತ್ಯ ಸಂಪಾದನೆಯ ಮೂಲಕ. ಇದು ಅವರ ದೇಸೀ ಮನಸ್ಸಿನ ಪ್ರತೀಕವಾಗಿದೆ. ಷಟ್ಪದಿ ಪ್ರಕಾರದಲ್ಲಿ ಬಹುಮುಖ್ಯವಾಗಿ ಕುಮಾರವ್ಯಾಸ ಭಾರತದ ದ್ರೋಣಪರ್ವ, ಕುಮಾರ ವಾಲ್ಮೀಕಿ ವಿರಚಿತ ತೊರವೆ ರಾಮಾಯಣದ ಎರಡು ಸಂಪುಟಗಳು ಲಕ್ಷ್ಮೀಶನ ಜೈಮಿನಿಭಾರತ ಕೃತಿಗಳಲ್ಲಿ ಹೆಸರಿಸಬಹುದು.

### ೧. ತೊರವೆ ರಾಮಾಯಣ

ಕುಮಾರ ವಾಲ್ಮೀಕಿ ಅಥವಾ ನರಹರಿ ಕವಿ ವಿರಚಿತ ತೊರವೆ ರಾಮಾಯಣ ಕೃತಿಗಳ ಪರಿಷ್ಕರಣವನ್ನು ಮಾಡಿ ೧೯೬೫ರಲ್ಲಿ ಪ್ರಾಚ್ಯಸಂಶೋಧನಾಲಯದಿಂದ ಪ್ರಕಟಿಸುತ್ತಾರೆ. ಇದು ಬಿ.ಎಸ್. ಸಣ್ಣಯ್ಯನವರ ವಿದ್ವತ್ತಿನ ಮೊದಲ ಸಂಪಾದಿತ ಕೃತಿ. "ಇದರ ಎರಡು ಸಂಪುಟಗಳಲ್ಲಿ ಮೊದಲನೆ ಸಂಪುಟವನ್ನು ಪ್ರೊ ಎಸ್. ಬಸವಾರಾಧ್ಯರು ಎರಡನೆ ಸಂಪುಟವನ್ನು ಡಾ. ಬಿ.ಎಸ್ ಸಣ್ಣಯ್ಯನವರು ಪರಿಷ್ಕರಿಸುತ್ತಾರೆ" (ಡಾ. ಎ.ಆರ್. ಮದನ್‌ಕುಮಾರ್, ೨೦೦೯; ೨೧೮) ಈ ಮೊದಲು ಸದರಿ ಕೃತಿಯನ್ನು ಹೊ ರಾಮಸ್ವಾಮಿ ಮತ್ತು ಇತರರು ಸಂಪಾದಿಸಿ ಬೆಂಗಳೂರಿನ ಕೃಷ್ಣರಾಜ ವಿಲಾಸ ಮುದ್ರಾಕ್ಷರ ಶಾಲೆಯಲ್ಲಿ ೧೮೭೦ರಲ್ಲಿ ಪ್ರಕಟಿಸಿರುತ್ತಾರೆ. ಇದು ತೆಲುಗು ಲಿಪಿಯಲ್ಲಿದೆ. ನಂತರ ೧೮೯೧ರಲ್ಲಿ ಬೆಂಗಳೂರು ಬುಕ್ ಡಿಪೊದಿಂದ ಪ್ರಕಟವಾಗಿದೆ. ಆದರೆ ಸಂಪಾದಕರ ಹೆಸರಿಲ್ಲ. ಹಾಗೆ ೧೯೦೪ ಮತ್ತು ೧೯೧೦ರಲ್ಲಿ ಪ್ರಕಟವಾದ ಆವೃತ್ತಿಗಳಲ್ಲಿ ಸಂಪಾದಕರ ಮಾಹಿತಿಯಿಲ್ಲ. ನಂತರ ೧೯೧೦ರಲ್ಲಿ ಮೈಸೂರಿನಿಂದ ೧೯೨೧ರಲ್ಲಿ ಬೆಂಗಳೂರಿನಿಂದ ಪ್ರಕಟವಾಗಿದೆ. ಹಾಗೆ ೧೯೩೫ ಮತ್ತು ೧೯೫೪ರ ಪ್ರಕಟಿತ ಆವೃತ್ತಿಗಳು ಸಿಗುತ್ತವೆ.

ಎಸ್. ಬಸವಾರಾಧ್ಯರು ಮತ್ತು ಡಾ. ಸಣ್ಣಯ್ಯನವರು ಸೇರಿ ಒಂದು ತಾಳೆಗರಿ ಮತ್ತು ಒಂದು ಕಾಗದದ ಹಸ್ತಪ್ರತಿ ಬಳಸಿ, ಮೊದಲ ಸಂಪುಟವನ್ನು ಎಸ್. ಬಸವರಾಧ್ಯರು (೧೯೫೬), ಎರಡನೆ ಸಂಪುಟವನ್ನು ಬಿ.ಎಸ್. ಸಣ್ಣಯ್ಯನವರು (೧೯೫೬), ಪರಿಷ್ಕರಿಸಿ

ಪ್ರಕಟಿಸುತ್ತಾರೆ. ಈ ಎರಡೂ ಸಂಪುಟಗಳಿಗೆ ಹೆಚ್. ದೇವಿರಪ್ಪನವರು ಪ್ರಸ್ತಾವನೆ ಬರೆದಿದ್ದಾರೆ. ಸಣ್ಣಯ್ಯನವರು ಪರಿಷ್ಕರಣಕ್ಕೆ ಪಠ್ಯದ ಆಂತರಿಕ ಸಾಕ್ಷ್ಯಗಳನ್ನೇ ಅವಲಂಬಿಸಿರುವುದು ಇಲ್ಲಿ ಎದ್ದು ಕಾಣುತ್ತದೆ. ಉದಾ: 'ರಣಕಾ ರಣರಸ'>'ರಣಕಾ ರಣರಸದ' ಎಂದೂ (ಸಂಧಿ ೧೭ ಪದ್ಯ ೩೨, ಪಾದ.೨) 'ಬಳಕೆ ಎಂಬುದನ್ನು ಬಳಸೆ (ಸಂಧಿ. ೨೩ ಪದ್ಯ. ೯, ಪಾದ. ೩) ತಟ್ಟಿಸಿದ ಚಿಂತೆಯಲ್ಲಿ ಇಂದ್ರಜಿತುವಿನ (ಸಂಧಿ. ೧೫ ಪದ್ಯ. ೩, ಪಾಠ. ೫) ಎಂದು ಯುದ್ಧಕಾಂಡದ ನ್ಯೂನತೆಗಳನ್ನು ಸುಸಂಬದ್ಧವಾಗಿ ಪರಿಷ್ಕರಿಸಿದ್ದು ಗಮನಿಸುವಂಥವು. ಇಂದ್ರಜಿತುವಿನ ಮನೋಧರ್ಮವನ್ನು ತಿಳಿದು ಪಾಠ ಪರಿಷ್ಕರಿಸಿದ ರೀತಿ ವಿಶೇಷವಾದದ್ದು. ಅತನಿಗೆ ಗೆಲ್ಲಬೇಕೆಂಬುದನ್ನು ಮನಸ್ಸಿಗೆ ತರಿಸಿ ಗೆಲ್ಲದಿದ್ದರೆ ರಾವಣನಿಗೆ ಮುಖತೋರಿಸಲು ಸಾಧ್ಯವಿಲ್ಲ ಎನ್ನುವ ಚಿಂತೆಯ ಎಳೆಹಿಡಿದು 'ತೇಲಿಸಿದ ಚಿಂತೆಯಲಿ' ಎನ್ನುವ ಪಾಠವನ್ನು ಹೊಂದಿಸಿಕೊಂಡು ಮಿಕ್ಕ ಪಾಠಗಳನ್ನು ನಿರಾಕರಿಸುತ್ತಾರೆ. ಇವರ ನಂತರ ೧೯೩೯ರಲ್ಲಿ ಬಸಪ್ಪ ಬಿಳಿಅಂಗಡಿಯವರು ತೊರವೆ ರಾಮಾಯಣ ಸಂಗ್ರಹವನ್ನು ೧೯೭೭ರಲ್ಲಿ ಕೆ.ಎಸ್. ಕೃಷ್ಣಮೂರ್ತಿ ತೊರವೆ ರಾಮಾಯಣದ ಗದ್ಯಾನುವಾದವನ್ನು ಪ್ರಕಟಿಸುತ್ತಾರೆ.

**೨. ದ್ರೋಣ ಪರ್ವ ಸಂಗ್ರಹ**

೧೯೬೮ರಲ್ಲಿ ಕುಮಾರವ್ಯಾಸನ ದ್ರೋಣಪರ್ವ ಸಂಗ್ರಹವನ್ನು ನರಸಣ್ಣನವರೊಂದಿಗೆ ಸೇರಿ ಪರಿಷ್ಕರಿಸುತ್ತಾರೆ. "ಮೂಲವನ್ನು ರಸಭಂಗವಾಗದಂತೆ ಸಂಗ್ರಹಿಸಿ ಸಾಮಾನ್ಯ ಓದುಗರನ್ನು ಕಾವ್ಯದತ್ತ ಸೆಳೆಯುವುದು ಇಂಥ ಸಂಗ್ರಹಗಳ ಉದ್ದೇಶವೆಂದು" ಸಂಪಾದಕರೇ ಹೇಳುತ್ತಾರೆ. ಸಂಗ್ರಹದ ಪೂರ್ಣಭಾಗವನ್ನು ಕರುಣರಸ ಮತ್ತು ವೀರರಸಗಳು ಆವರಿಸಿವೆ. ವ್ಯಾಸ ಮತ್ತು ಪಂಪರಲ್ಲಿ ಈ ಪ್ರಸಂಗ ರೂಪಗೊಂಡ ಭಿನ್ನ ಬಗೆಗಳನ್ನು ತುಲನಾತ್ಮಕವಾಗಿ ವಿವರಿಸಿದ್ದಾರೆ. ಪ್ರಕೃತ ಸಂಗ್ರಹದಲ್ಲಿ ಮೂಲದ ೧೩೦೦ ಪದ್ಯಗಳನ್ನು ೪೨೫ ಪದ್ಯಗಳಿಗೆ ಸೀಮಿತಗೊಳಿಸಿದ್ದಾರೆ. ಹದಿನೇಳು ವಿಭಾಗ ಮಾಡಿ ಪ್ರತಿಯೊಂದಕ್ಕೂ ಕಥಾ ಶೀರ್ಷಿಕೆ ನೀಡಲಾಗಿದೆ. ಕಥಾಸರಣಿಗೆ ಭಂಗಬಾರದಂತೆ ಕೃತಿಯನ್ನು ಸಂಗ್ರಹಿಸಲಾಗಿದೆ.

**೩. ಲಕ್ಷ್ಮೀಶನ ಜೈಮಿನಿ ಭಾರತ**

ತನ್ನ ನಾದಮಾಧುರ್ಯದಿಂದಲೇ ಪ್ರಸಿದ್ಧಿ ಪಡೆದಿರುವ ಕೃತಿ ಜೈಮಿನಿ ಭಾರತ. ರಾಗೌ ಅವರೊಂದಿಗೆ ಸೇರಿ ಸಣ್ಣಯ್ಯನವರು ೧೯೭೩ರಲ್ಲಿ ಐದು ಓಲೆಪ್ರತಿ, ಒಂದು ಕಾಗದ ಪ್ರತಿ ಮತ್ತೊಂದು ಕಲ್ಲಚ್ಚಿನ ಪ್ರತಿ ಹೀಗೆ ಏಳು ಹಸ್ತಪ್ರತಿಗಳ ಸಹಾಯದಿಂದ ಪರಿಷ್ಕರಿಸಿದ್ದಾರೆ. ೧೭೭೭ರ ಕಾಲ ನಮೂದಿತ ಪ್ರತಿಯನ್ನು ಮುಖ್ಯ ಆಕರವಾಗಿಸಿ ಕೊಂಡಿದ್ದಾರೆ.

ಜೈಮಿನಿ ಭಾರತ ಕೃತಿ ಈ ಮೊದಲು ೧೮೪೮ರಲ್ಲಿ ಕಲ್ಲಚ್ಚಿನ ಮೂಲಕ ಹೊರ ಬಂದು ಗಮಕದ ಮೂಲಕ ಜನಪ್ರಿಯತೆಯನ್ನು ಗಳಿಸಿತ್ತು. ನಂತರ ಮೊಗ್ಲಿಂಗ್, ವೆಂಕಟರಂಗೋಕಟ್ಟಿ, ಹೊಳಕಲ್ಲು ಶ್ರೀನಿವಾಸ ಪಂಡಿತ, ದಕ್ಷಿಣಾಮೂರ್ತಿಶಾಸ್ತ್ರೀ, ಪಿ.ಆರ್.

ಕರಿಬಸವಶಾಸ್ತ್ರೀ, ದೊಡ್ಡಬೆಲೆ ನಾರಾಯಣಶಾಸ್ತ್ರೀ, ಬಿ. ಭೀಮಸೇನರಾವ್ ಮುಂತಾದವರು ಪರಿಷ್ಕರಿಸಿ ಪ್ರಕಟಿಸಿದ್ದಾರೆ. ವೆಂಕಟರಂಗೋಕಟ್ಟೆ ಅವರಿಂದ ೧೮೭೫ರಲ್ಲಿ ವ್ಯಾಖ್ಯಾನಸಹಿತ ಕಲ್ಲಚ್ಚಿನಲ್ಲಿ ಪ್ರಕಟವಾಗಿದ್ದಲ್ಲದೆ ೧೮೯೭ ರಿಂದ ೧೯೭೫ರ ವರೆಗೆ ಈ ಕಾವ್ಯದ ಟೀಕು, ತಾತ್ಪರ್ಯ, ವ್ಯಾಖ್ಯಾನಗಳಲ್ಲದೆ ಇಂಗ್ಲಿಷ್ ಅನುವಾದ ಕೂಡ ಪ್ರಕಟವಾಗಿವೆ. ಜೈಮಿನಿ ಭಾರತದ ಪೂರ್ಣರೂಪ ಸಿಗುವುದು ಬಿ. ಭೀಮಸೇನರಾವ್ ಅವರ ಸಂಪಾದನೆಯಲ್ಲಿ (೧೯೯೩) ನಂತರ ೧೯೫೧ರಲ್ಲಿ ಬಿ.ಎಸ್. ಕೃಷ್ಣಪ್ಪ ೧೯೫೯ರಲ್ಲಿ ದೇಜಗೌ ಅವರ ಜೈಮಿನಿ ಭಾರತ ಸಂಗ್ರಹ, ೧೯೫೪ರ ತ.ಸು. ಶಾಮರಾವ್ ಅವರ ಜನಪ್ರಿಯ ಆವೃತ್ತಿ ೧೯೬೭, ೧೯೭೯ರ ಆವೃತ್ತಿಗಳ ನಂತರ ಸಣ್ಣಯ್ಯನವರು ಇದರ ಸಂಪೂರ್ಣ ಪರಿಷ್ಕರಣವನ್ನು ಪ್ರಕಟಿಸುತ್ತಾರೆ (೧೯೯೩).

ಡಾ. ಸಣ್ಣಯ್ಯನವರು ಪರಿಷ್ಕರಿಸಿ ಪ್ರಕಟಿಸಿದ ಚಂಪು ಮತ್ತು ಷಟ್ಪದಿ ಸಾಹಿತ್ಯದ ಪ್ರಕಾರಗಳಲ್ಲಿ ಈಗಾಗಲೇ ಪ್ರಕಟಿತವಾದ ಕೃತಿಗಳ ಹೊಸ ಪರಿಷ್ಕರಣೆಗಳೂ ಇವೆ. ಮೊದಲಬಾರಿಗೆ ಪರಿಷ್ಕರಣಗೊಂಡವೂ ಇವೆ. ಹೊಸ ಹಸ್ತಪ್ರತಿಗಳನ್ನು ಶೋಧಿಸಿ ಪರಿಷ್ಕರಿಸಿ ಪ್ರಕಟಿಸಿದ ಕೃತಿಗಳೂ ಇವೆ. ಕನ್ನಡ ಪ್ರಸಿದ್ಧ ಕಾವ್ಯಗಳನ್ನು ಪರಿಷ್ಕರಿಸಿದಂತೆ ಪ್ರಸಿದ್ಧವಲ್ಲದ ಮತ್ತು ಕನ್ನಡ ವಾಚಕ ಲೋಕದ ಕಣ್ಣಿಂದ ಮರೆಯಾಗಿದ್ದ ವಿಶೇಷ ಕೃತಿಗಳನ್ನು ಬೆಳಕು ಕಾಣಿಸಿದ್ದಾರೆ. ವಿದ್ವತ್ ಸಂಪಾದನೆ ಜೊತೆಗೆ ಸಂಗ್ರಹಗಳನ್ನು, ಗದ್ಯಾನುವಾದಗಳನ್ನು ಮಾಡಿದ್ದಾರೆ. ವಚನ, ಕಂದ, ಸಾಂಗತ್ಯ, ಶಾಸ್ತ್ರ ಕೃತಿಗಳನ್ನೂ ಪರಿಷ್ಕರಿಸಿದ್ದಾರೆ.

ಅಂದರೆ ಕನ್ನಡ ಸಾಹಿತ್ಯದ ಎಲ್ಲ ಛಂದೋರೂಪದ ಕೃತಿಗಳನ್ನು ಪಂಡಿತ ಹಾಗೂ ಜನಪ್ರಿಯ ಆವೃತ್ತಿಗಳಲ್ಲಿ ಡಾ. ಸಣ್ಣಯ್ಯನವರು ಪ್ರಕಟಿಸಿದ್ದಾರೆ. ಪರಿಷ್ಕರಣದಲ್ಲಿ ಮುಖ್ಯವಾಗಿ ಅವರು ಅವಲಂಬಿಸುವುದು ಕಾವ್ಯದ ಒಳಧ್ವನಿ ಮತ್ತು ಸಾಂದರ್ಭಿಕ ಅರ್ಥವನ್ನು. ಮೇಲೆ ಚರ್ಚಿಸಿದ ಹೆಚ್ಚಿನ ಕೃತಿಗಳನ್ನು ಅವರು ಕೇವಲ ಶಾಬ್ದಿಕ ಪರಿಷ್ಕರಣಕ್ಕೆ ಅಳವಡಿಸದೆ ಅದರ ಸಾಹಿತ್ಯಿಕ, ಭಾಷಿಕ ಹಾಗೂ ಪಠ್ಯದ ಸಾಂದರ್ಭಿಕ ಅರ್ಥ ಹಾಗೂ ಧ್ವನಿಸಾಧ್ಯತೆಗಳನ್ನು ಪಾಠ ಪರಿಷ್ಕರಣದ ಮೂಲತತ್ವಗಳನ್ನಾಗಿಸಿಕೊಂಡಿರುವುದು ಅವರ ಕನ್ನಡ ಗ್ರಂಥಸಂಪಾದನೆ ವೈಧಾನಕತೆಯ ಭಿನ್ನ ನಡೆಯಾಗಿದೆ. ಆದರೆ ಕೃತಿಯ ಸಂಪಾದನೆ ಮತ್ತು ಪರಿಷ್ಕರಣೆಗೆ ಅವರು ಅನುಸರಿಸುವ ಸಂಸ್ಕೃತ ಮತ್ತು ವಸಾಹತು ಪ್ರಣೀತ ತಾಂತ್ರಿಕ ಸ್ವರೂಪವು ಅವರ ಸಶಕ್ತ ಪರ್ಯಾಯ ಚಿಂತನೆಯನ್ನು ದುರ್ಬಲಗೊಳಿಸಿಬಿಡುತ್ತದೆ. ಆ ಮೂಲಕ ಕನ್ನಡ ಗ್ರಂಥಸಂಪಾದನೆ ಕನ್ನಡದೊಳಗಿಂದಲೇ ರೂಪಗೊಳ್ಳಬಹುದಾಗಿದ್ದ ಬಹುದೊಡ್ಡ ಚಾರಿತ್ರಿಕ ಅವಕಾಶವನ್ನು ಕಳೆದುಕೊಂಡಂತಾಗಿದೆ.

(ವಿ.ಸೂ: ಕನ್ನಡ ವಿಶ್ವವಿದ್ಯಾಲಯದ ಬೆಳ್ಳಿಹಬ್ಬದ ವಿಶೇಷ ಕಾರ್ಯಕ್ರಮದ ನಿಮಿತ್ತ ಹಸ್ತಪ್ರತಿಶಾಸ್ತ್ರ ವಿಭಾಗವು ದಿನಾಂಕ ೨೨.೧೧.೨೦೧೭ರಂದು ಶ್ರವಣಬೆಳಗೊಳದಲ್ಲಿ ನಡೆಸಿದ ಡಾ. ಬಿ.ಎಸ್. ಸಣ್ಣಯ್ಯನವರ ಬದುಕು-ಬರಹ ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧದ ಬರಹರೂಪ.)

■

## ಗ್ರಂಥಋಣ


೧. ರಾ.ಗೌ. (ಪ್ರ ಸಂ) ಪರಿಣತ, (ಬಿ.ಎಸ್. ಸಣ್ಣಯ್ಯನವರ ಅಭಿನಂದನಾ ಗ್ರಂಥ) ಬಿ.ಎಸ್. ಸಣ್ಣಯ್ಯ, ಅಭಿನಂದನ ಸಮಿತಿ, ಮೈಸೂರು, ೨೦೧೩.

೨. ಮದನಕುಮಾರ್ ಎ.ಆರ್., ಬಿ.ಎಸ್. ಸಣ್ಣಯ್ಯ ವ್ಯಕ್ತಿ ಮತ್ತು ಸಾಹಿತ್ಯ, ಎಂ.ಎಲ್. ಶ್ರೀಕಂಠೇಗೌಡ ಸಂಶೋಧನಾ ಕೇಂದ್ರ, ಮಂಡ್ಯ, ೨೦೦೯

೩. ವೀರೇಶ ಬಡಿಗೇರ, ಕನ್ನಡ ವಿಶ್ವವಿದ್ಯಾಲಯ ಹಸ್ತಪ್ರತಿಸೂಚಿ ಸಂಪುಟ-೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

೪. ಎಫ್.ಟಿ. ಹಳ್ಳಿಕೇರಿ, ರವೀಂದ್ರನಾಥ ಕೆ., ಸಿರಿಸಂಪದ (ಡಾ. ಬಿ.ವಿ. ಶಿರೂರ ಅಭಿನಂದನ ಗ್ರಂಥ) ಡಾ. ಬಿ.ವಿ. ಶಿರೂರ ಅಭಿನಂದನ ಸಮಿತಿ, ಯಲಬುರ್ಗಾ, ೨೦೦೨.

೫. ಭಾನುಮತಿ ವೈ.ಸಿ. ಗ್ರಂಥಸಂಪಾದನ ಸಂಕಥನ, ಸಿ.ವಿ.ಜಿ. ಇಂಡಿಯಾ, ೨೦೧೩.

೬ ಸಣ್ಣಯ್ಯ ಬಿ.ಎಸ್. ಪ್ರಾಚೀನ ಕನ್ನಡ ಗ್ರಂಥಸಂಪಾದನೆ, ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು, ೨೦೦೨.

೭. ವೀರೇಶ ಬಡಿಗೇರ, ಹಲಗೆ ಬಳಪ, ಮಯ ಪ್ರಕಾಶನ, ಕಮಲಾಪುರ, ೨೦೦೫.

೮. ವೀರೇಶ ಬಡಿಗೇರ, ಹಸ್ತಪ್ರತಿ ಸಂಕಥನ, ಮಯ ಪ್ರಕಾಶನ, ಕಮಲಾಪುರ, ೨೦೧೪.

# ರತ್ನಾಕರವರ್ಣಿಯ ಕಾವ್ಯದ ಅನನ್ಯತೆ : ಒಂದು ವಿಶ್ಲೇಷಣೆ



ಡಾ. ಆರ್. ಲಕ್ಷ್ಮೀನಾರಾಯಣ

ಒಂದು ಸಿದ್ಧ ಕಥಾವಸ್ತುವನ್ನು ಕಾವ್ಯಕ್ಕೆ ವಸ್ತುವನ್ನಾಗಿ ಆಯ್ದುಕೊಂಡೂ, ಮಹಾಕಾವ್ಯಕ್ಕೆ ಅಷ್ಟೇನೂ ಸರಿಹೊಂದದ ಸಾಂಗತ್ಯದಂಥ ಒಂದು ಛಂದೋ ರೂಪವನ್ನು ಅಳವಡಿಸಿಕೊಂಡೂ ರತ್ನಾಕರವರ್ಣಿ ಒಬ್ಬ ಅನನ್ಯ ಕವಿಯೆನಿಸಿದ್ದು ಹೇಗೆ ಮತ್ತು ಅವನ ಭರತೇಶ ವೈಭವ ಒಂದು ಅತ್ಯಂತ ವಿಶಿಷ್ಟವೆನಿಸಿದ ಮಹಾ ಕೃತಿ ಎನಿಸಿದ್ದು ಹೇಗೆ ಎಂಬುದನ್ನು ವಿಶ್ಲೇಷಿಸಿ ನೋಡುವುದು ನಿಜಕ್ಕೂ ಅತ್ಯಂತ ಕುತೂಹಲಕಾರಿಯದ ಸಂಗತಿ.

ರತ್ನಾಕರವರ್ಣಿ ಭರತೇಶ ವೈಭವದ ರಚನೆಯಲ್ಲಿ ಒಮ್ಮೆಗೇ ಎರಡು ಬಗೆಯ ಸವಾಲುಗಳನ್ನು ಎದುರಿಸುವ ಒಂದು ರೀತಿಯ ರಿಸ್ಕ್ ಅನ್ನು ತನಗೆ ತಾನೇ ಆಹ್ವಾನಿಸಿ ಕೊಂಡಿದ್ದಾನೆ. ಅದೆಂದರೆ ಸ್ವತಃ ಜೈನನಾಗಿಯೂ ಅದುವರೆಗಾಗಲೇ ಸಿದ್ಧವಾಗಿದ್ದ ಕಥಾವಸ್ತುವಿನಲ್ಲಿ ತನಗೆ ಬೇಕೆನಸುವಷ್ಟು ಬದಲಾವಣೆಗಳನ್ನು ಮಾಡಿಕೊಂಡದ್ದೇ ಆ ಇಬ್ಬಗೆಯ ಸಾಹಸ.

ಕನ್ನಡ ಸಾಹಿತ್ಯದ ಪ್ರಾರಂಭ ಕಾಲದಿಂದಲೂ ಜೈನ ಕವಿಗಳು ಅನುಸರಿಸುತ್ತಿದ್ದ ಜೈನಧರ್ಮದಲ್ಲಿನ ತಮ್ಮಶ್ರದ್ಧೆ ನಂಬಿಕೆ ಮತ್ತು ತಾತ್ವಿಕತೆಗಳನ್ನು ಅಭಿವ್ಯಕ್ತಿಸಲು ತೀರ್ಥಂಕರ ಪುರಾಣವನ್ನು ರಚಿಸುತ್ತಿದ್ದ ಪದ್ಧತಿಯನ್ನು ಬಿಟ್ಟುಕೊಟ್ಟು ಒಬ್ಬ ಚಕ್ರವರ್ತಿಯಾದ ಭರತನ ಕಥೆಯನ್ನು ಕಾವ್ಯ ವಸ್ತುವನ್ನಾಗಿ ಆಯ್ದುಕೊಂಡದ್ದರಲ್ಲೇ ರತ್ನಾಕರನ ವಿಶಿಷ್ಟತೆಯಿದೆ. ಜೊತೆಗೆ ಜೈನಧರ್ಮವನ್ನು ತೀರಾ ಬೇರೆಯೇ ಆದೊಂದು ನೆಲೆಗಟ್ಟಿನಿಂದ ನೋಡಿದ್ದ ರಲ್ಲಿಯೇ ಅವನ ವಿಶಿಷ್ಟತೆ ಎದ್ದುಕಾಣುವುದು. ತೀರ್ಥಂಕರ ಪುರಾಣಗಳೆಂದರೆ ಭವಭವ ಗಳಲ್ಲಿ ಎಣೆಯಿಲ್ಲದ ರಾಜಭೋಗಗಳಲ್ಲಿಯೇ ತೇಲಿ ಮುಳುಗಾಡುತ್ತಿದ್ದ ಜೀವವೊಂದು "ಎನಿತಾನುಂ ಅಂಬುನಿಧಿಗಳನ್ ಅನೇಕ ನಾಕಂಗಳಲ್ಲಿ ಕುಡಿದುಂ ಪೋಯಿತ್ತಿಲ್ಲೆನಗೆ. ನರಭೋಗಮೆಂಬೀ ಪನಿಪುಲ್ಲಂ ಸಕ್ಕೆ ತೃಷ್ಣೆ ಪೇಳ್ ಪೋದಪುದೆ?" (ಆದಿಪುರಾಣ) ಎಂದು ಭೋಗಕ್ಕೆ ಹೇಸಿ "ಇಂ ತಿರಿಯಲಾರೆಂ ಭವಾಂಬೋಧಿಯೊಳ್" ಎಂದು

ನಿಶ್ಚಯಿಸಿ ವೈರಾಗ್ಯದ ಕಡೆಗೆ ಮುಖಮಾಡಿ ಉಗ್ರತಪಸ್ಸಿದ್ಧಿಯಿಂದ ಕೇವಲಜ್ಞಾನವನ್ನು ಸಾಧಿಸುವುದು. ಅಸೀಮವಾದ ಭೋಗದ ಬಗೆಗಿನ ಜಿಹಾಸೆಯಿಂದ ಮೂಡುವ ತ್ಯಾಗ, ಮಿತಿಯಿಲ್ಲದ ವೈಭೋಗದ ಕೊನೆ ವೈರಾಗ್ಯ ಎಂದು ಕಂಡುಕೊಳ್ಳುವುದು ಇದೇ ಎಲ್ಲ ತೀರ್ಥಂಕರ ಪುರಾಣಗಳಲ್ಲಿ ಕಂಡುಬರುವ ಚಿತ್ರ. ಈ ಚಿತ್ರಕ್ಕೆ ಸಂಪೂರ್ಣ ವಿರುದ್ಧವಾಗಿರುವುದೆಂದರೆ ತ್ಯಾಗ ಅಥವಾ ಯೋಗ-ಭೋಗಸಮನ್ವಯದ ಒಂದು ಸಿದ್ಧಾಂತ. ತ್ಯಾಗ ಭೋಗಗಳು, ವೈಭೋಗ ವೈರಾಗ್ಯಗಳು ಜೊತೆ ಜೊತೆಯಲ್ಲಿ ಸಾಗುವುದು ಜೈನತತ್ವಕ್ಕೆ ತೀರಾ ವಿರುದ್ಧವಾದದ್ದು. ಅದರ ಮೂಲವನ್ನೇನಿದ್ದರೂ ನಾವು ವೈದಿಕ ಪರಂಪರೆಯಲ್ಲಿ, ಗುರುತಿಸಬೇಕು. ಹದಿನಾರು ಸಾವಿರ ಗೋಪಿಕಾಸ್ತ್ರೀಯರೊಂದಿಗೆ ರಾಸಲೀಲೆ ನಡೆಯಿಸಿದ ಭಾಗವತದ ಭೋಗೀಶ್ವರ ಕೃಷ್ಣನು ಭಗವದ್ಗೀತೆಯನ್ನು ಬೋಧಿಸಿದ ಯೋಗೀಶ್ವರನೂ ಹೌದು. ಅವನು ಉಂಡು ಉಪವಾಸಿ; ಬಳಸಿ ಬ್ರಹ್ಮಚಾರಿ. ಜೊತೆಗೆ ರಾಜರ್ಷಿಯೆನಿಸಿದ ಜನಕನಂಥವರು ಯೋಗಭೋಗ ಸಮನ್ವಯದ ಬದುಕಿನ ಪ್ರತೀಕಗಳಾಗಿರುವುದು ನಮಗೆ ತಿಳಿದೇ ಇದೆ. ಕೃಷ್ಣನ ಪಾತ್ರವು ಭರತೇಶವೈಭವದ ಕಥಾನಾಯಕನ ವ್ಯಕ್ತಿತ್ವದ ರೂಹಣದಲ್ಲಿ ಅಚ್ಚಳಿಯದ ಪ್ರಭಾವ ಬೀರಿರುವುದನ್ನು ಕಾಣಬಹುದು.

ಇದರ ಜೊತೆಜೊತೆಗೇ ರತ್ನಾಕರನು ಗಾಢವಾದ ಪ್ರಭಾವಕ್ಕೊಳಗಾಗಿರುವುದು ವೀರಶೈವಧರ್ಮದಿಂದ. ಅದು ಎರಡು ರೀತಿಯಲ್ಲಿ ರತ್ನಾಕರನಿಗೆ ಅನುಭವಕ್ಕೆ ಬಂದಿತ್ತು. ಮೊದಲನೆಯದಾಗಿ ಅವನು ಬಾಳಿ ಬದುಕಿದ್ದು ವಿಜಯನಗರ ಸಾಮ್ರಾಜ್ಯವು ತನ್ನ ಉತ್ತುಂಗ ಕೀರ್ತಿ ವೈಭವದ ಶಿಖರವನ್ನೇರಿ ಕೆಳಕ್ಕೆ ಇಳಿಯುತ್ತಿದ್ದ ಕಾಲದಲ್ಲಿ. ವಿಜಯನಗರ "ದಕ್ಷಿಣಭಾರತದ ಕನ್ನಡ, ತೆಲುಗು, ತಮಿಳು ಮಲೆಯಾಳ ಮುಂತಾದ ಎಲ್ಲ ಭಾಷೆಗಳ, ಹಾಗೂ ಶೈವ ವೈಷ್ಣವ, ವೀರಶೈವ, ಜೈನ, ಮುಸ್ಲಿಮ್ ಮುಂತಾದ ಎಲ್ಲ ಮತಗಳ ಆಶ್ರಯಸ್ಥಾನವಾಯಿತು. ಸಮಗ್ರ ಭಾರತದ ಪೂರ್ವ ಪರಂಪರೆಯಲ್ಲಿನ ವೈದಿಕ ಧರ್ಮವನ್ನು ಅದು ಎತ್ತಿಹಿಡಿಯಿತು. ಕನ್ನಡಿಗರ ಸಮನ್ಯಯ ಬುದ್ಧಿ ಈ ಕಾಲದಲ್ಲಿ ಕಳಶ ಮುಟ್ಟಿತು"[೧] ಒಂದು ರೀತಿಯಲ್ಲಿ ಆ ಕಾಲದ ಮನೋಧರ್ಮವೇ ಸಮನ್ವಯ ದೃಷ್ಟಿಯಾಗಿತ್ತು. ಜೊತೆಗೆ ಜೈನಧರ್ಮ ತನ್ನ ಮೊದಲಿನ ಉಚ್ಛ್ರಾಯ ಸ್ಥಿತಿಯಿಂದ ಹಿಂದೆ ಸರಿದು ವೈದಿಕದ ಶಾಖೆಗಳಂತಿದ್ದ ವೈಷ್ಣವ ಮತ್ತು ಶ್ರೀ ವೈಷ್ಣವ ಧರ್ಮಗಳೊಂದಿಗೆ ತನ್ನ ಅಸ್ತಿತ್ವಕ್ಕಾಗಿ ಸೆಣಸಬೇಕಾಗಿತ್ತು. ಪಶ್ಚಿಮ ಕರಾವಳಿಯಲ್ಲಿ ವೀರಶೈವ ಸಾಕಷ್ಟು ಪ್ರಭಾವಶಾಲಿಯಾಗಿತ್ತು. ಅದುವರೆಗಾಗಲೇ ಕಂದಾಚಾರಗಳಿಂದ ಇಡಿಕಿರಿದಿದ್ದ ವೈದಿಕ ಧರ್ಮಕ್ಕೆ ಪ್ರಬಲವಾದ ಪೈಪೋಟಿಯ ಧರ್ಮವಾಗಿ ಬೇರೂರಿದ್ದ ವೀರಶೈವಧರ್ಮ ಆಧ್ಯಾತ್ಮಸಿದ್ಧಿಗೆ ಸಂಸಾರ ತ್ಯಾಗಮಾಡುವುದು ಬೇಕಿಲ್ಲ. ಸಂಸಾರದಲ್ಲಿದ್ದೂ ಶಿವಯೋಗವನ್ನು ಸಾಧಿಸಬಹುದೆಂಬುದನ್ನು ಸಾರಿಹೇಳಿತು. ಮಾತ್ರವಲ್ಲ; ವಚನಕಾರರ ಬದುಕೇ ಅದಕ್ಕೆ ನಿದರ್ಶನವಾಗಿತ್ತು. ಸದಾ ಇಹಲೋಕದ ಬದುಕನ್ನು ನಿರಾಕರಿಸುತ್ತ ನಿವೃತ್ತಿಪರವಾದ ತತ್ವವನ್ನು ಎತ್ತಿಹೇಳುತ್ತಿದ್ದ ಜೈನಧರ್ಮ ಜನರ ಆಕರ್ಷಣೆ ಗಳಿಸುವುದು ಕಷ್ಟ ಸಾಧ್ಯವೆಂದು, ಕಾಲಕ್ಕೆ ತಕ್ಕಂತೆ ಅನ್ಯಧರ್ಮಗಳ ಉತ್ತಮಾಂಶಗಳನ್ನು ಸ್ವೀಕರಿಸಿ ಬದಲಾವಣೆ

ಆಚರಣೆ ಮಾಡಲಾಗುತ್ತದೆ. ದಶಮಿಯಿಂದ ಈ ಆಚರಣೆಗಳು ಪ್ರಾರಂಭವಾಗುತ್ತವೆ. ಐದೂ ದಿನ ಪ್ರವಚನ, ಭಜನೆ, ಪಲ್ಲಕ್ಕಿ ಉತ್ಸವ ನಡೆಯುತ್ತವೆ. ಫಾಲ್ಗುಣ ತ್ರಯೋದಶಿ ಯಂದು ಚಂಡಿ-ಸೋಮೇಶ್ವರ ಕಲ್ಯಾಣಮಹೋತ್ಸವ ನಡೆಯುತ್ತದೆ. ಅಂದೇ ಸೋಮೇಶ್ವರನ ತೇರು ಎಳೆಯುತ್ತದೆ.

**ಸೋಮೇಶ್ವರ ಲಿಂಗದಿಂದ ಆದಿರೇಣುಕರ ಉದ್ಭವ**

ಸ್ವಯಂಭು ಸೋಮೇಶ್ವರ ದೇವಾಲಯದ ಗರ್ಭಗೃಹ ಚಿಕ್ಕದಾಗಿದ್ದು, ಮೂಲ ಶಿವಲಿಂಗದ ಪೀಠಿಕೆಯು ಸು. ಎರಡು-ಎರಡುವರಿ ಅಡಿ ಅಗಲ, ನಾಲ್ಕು-ನಾಲ್ಕುವರಿ ಅಡಿಗಳಷ್ಟು ಉದ್ದವಾಗಿದ್ದು, ಎಡಹರಿ ಪೀಠವನ್ನು ಹೊಂದಿದೆ. ಲಿಂಗ ಗೋಳಕವೂ ದೊಡ್ಡದಾಗಿದೆ. ಶಿವಲಿಂಗದಿಂದ ಆದಿರೇಣುಕ-ರೇವಣಸಿದ್ಧರು ಉದ್ಭವವಾಗಿದ್ದಾರೆಂಬ ಐತಿಹ್ಯ ದೊರೆಯುತ್ತದೆ. ಈ ಸಂಗತಿ ಹರಿಹರನ ಕಾಲದಿಂದಲೂ (ಕ್ರಿ.ಶ. ೧೨೦೦-೧೨೩೦) ಪ್ರಚಲಿತದಲ್ಲಿದೆ. ಈಗ ಶಿವಲಿಂಗದ ಗೋಳಕದ ನೆತ್ತಿಯಲ್ಲಿ ಕಾಣಿಸಿಕೊಂಡಿರುವ ಕೂದಲೆಳೆಯ ಬಿರುಕು ತೋರಿಸಿ, ಈ ಬಿರುಕಿನಿಂದಲೇ ಆದಿರೇಣುಕರು/ರೇವಣಸಿದ್ಧರು ಉದ್ಭವವಾಗಿದ್ದಾರೆಂದು ತೋರಿಸುತ್ತಾರೆ. ಈ ಹಿನ್ನೆಲೆಯಲ್ಲಿ ಶ್ರೀ ರಂಭಾಪುರಿ ರುದ್ರಮುನೀಂದ್ರ ಶಿವಾಚಾರ್ಯರು, ರೇಣುಕಾಚಾರ್ಯರದೆಂದು ಹೇಳುವ ಒಂದು ಶಿಲಾಮೂರ್ತಿಯನ್ನು ತಯಾರಿಸಿ, ಮೂಲ ಶಿವಲಿಂಗದ ಹಿಂದೆ ೧೯೭೩ರಲ್ಲಿ ಸ್ಥಾಪಿಸಿದ್ದಾರೆಂದು ಈಗಿನ ಸೋಮೇಶ್ವರ ದೇವಾಲಯದ ಪೂಜಾರಿಗಳಾದ ಶ್ರೀ ಸೋಮೇಶ್ವರ ಗೌಂಡ್ಲಮಠ ಅವರು ಸ್ಪಷ್ಟಪಡಿಸುತ್ತಾರೆ. ಈ ಬಗೆಗೆ ಡಾ. ಎಂ. ಚಿದಾನಂದ ಮೂರ್ತಿ ಅವರು ಹೀಗೆ ಬರೆಯುತ್ತಾರೆ: "ಸೋಮೇಶ್ವರನ ವಿಗ್ರಹದ ಹಿಂದೆ ಲಿಂಗೋದ್ಭವ ರೇಣುಕರ ಪ್ರತಿಮೆಯು ಇಪ್ಪತ್ತನೆಯ ಶತಮಾನದ ಕೊನೆಯಲ್ಲಿ ಸ್ಥಾಪಿತವಾಗಿದೆ". (ರೇವಣಸಿದ್ಧ: ಹಿನ್ನೆಲೆ-ಮುನ್ನೆಲೆ, ಪು. ೯).

**ಜ. ಆದಿ ರೇಣುಕ-ಶರಣ ರೇವಣಸಿದ್ಧ ಭಿನ್ನರು**

ಜಗದ್ಗುರು ಆದಿ ರೇಣುಕರು ಹಾಗೂ ಶರಣ ರೇವಣಸಿದ್ಧರು ಈ ಇಬ್ಬರೂ ಬೇರೆ ಬೇರೆಯಾಗಿದ್ದು, ಇವರ ಬಗೆಗಿನ ಸಂಗತಿಗಳು ಬೆರೆತುಕೊಂಡು ಪ್ರಚಾರದಲ್ಲಿವೆ. ಇದು ಕನ್ನಡದ ಪ್ರಸಿದ್ಧ ಕವಿ ಹರಿಹರನಿಂದಲೂ ಬೆಳೆದುಕೊಂಡು ಬಂದಿದೆ. ಜಗದ್ಗುರು ಆದಿ ರೇಣುಕರನ್ನು ಪುರಾಣ ಪುರುಷರಂತೆ ವರ್ಣಿಸಲಾಗುತ್ತದೆ. ಇವರು ಕೊಲ್ಲಿಪಾಕಿಯ ಸೋಮೇಶ್ವರ ಲಿಂಗದಿಂದ ಉದ್ಭವವಾಗಿ, ೭೦೦ ವರ್ಷಗಳ ವರೆಗೆ ಬದುಕಿ, ಅನೇಕ ಅಸಾಧಾರಣ ಮಹಿಮೆಗಳನ್ನು ತೋರಿ, ಕೊನೆಯಲ್ಲಿ ಕೊಲ್ಲಿಪಾಕಿಯ ಸೋಮನಾಥ ಲಿಂಗದಲ್ಲಿಯೇ ಒಂದಾದವರು. ಈ ವಿಷಯ 'ಸಿದ್ಧಾಂತ ಶಿಖಾಮಣಿ' ಅಲ್ಲದೆ ಡಾ. ಜ.ಚ.ನಿ. ಅವರು ಸಂಶೋಧಿಸಿ ಬರೆದ 'ಜಗದ್ಗುರು ಆದಿ ರೇಣುಕರು' (ಕ್ರಿ.ಶ. ೧೯೮೮) ಎಂಬ ಗ್ರಂಥದಲ್ಲಿ ವಿವರವಾಗಿ ನಿರೂಪಿಸಲ್ಪಟ್ಟಿದೆ. ಅಸಾಧಾರಣ ಶಕ್ತಿ ಹೊಂದಿದ ಜ. ಆದಿ ರೇಣುಕರು ವಾಯುಮಾರ್ಗವಾಗಿ ಚಲಿಸುವ ಸಾಮರ್ಥ್ಯ ಹೊಂದಿದವರು. ಅಗಸ್ತ್ಯಮುನಿಗಳಿಗೆ ಏಕೋತ್ತರ ಶತಸ್ಥಲವನ್ನು ಅನುಗ್ರಹಿಸಿದವರು. ಲಂಕೆಗೆ ಹೋಗಿ

ವಿಭೀಷಣನಿಗೆ ಮೂರುಕೋಟಿ ಶಿವಲಿಂಗಗಳನ್ನು ಸ್ಥಾಪಿಸಲು ನೆರವಾದವರು. ಇವರು ರಾಮಾಯಣದ ಕಾಲಕ್ಕೆ ಸುಮಾರು ೩೫೦೦ ವರ್ಷಗಳಿಗೂ ಹಿಂದೆ ಇದ್ದವರು. ಈ ವಿಷಯವನ್ನು ಕುರಿತು ಜಚನಿ ಅವರು ಹೀಗೆ ಬರೆದಿದ್ದಾರೆ: 'ಅತ್ತ ಅಗಸ್ತ್ಯ ಋಷಿಯನ್ನು, ಇತ್ತ ವಿಭೀಷಣ ರಾಜನನ್ನು ಅನುಗ್ರಹಿಸಿದ್ದು ರೇಣುಕರ ಕಾಲವಾವುದೆಂದು ಕೇಳಬೇಕಿಲ್ಲ. ಮೂರುವರೆ ಸಾವಿರಕ್ಕಿಂತ ಕಡಿಮೆಯಿಲ್ಲೆಂದು ಧಾರಾಳವಾಗಿ ಹೇಳಬಹುದಾಗಿದೆ' (ಜ.ಆದಿ ರೇಣುಕ, ಪು. ೩).

ಡಾ. ಜ.ಚ.ನಿ. ಅವರು ಈ ಮೇಲೆ ಉಲ್ಲೇಖಿಸಿದ ತಮ್ಮ ಗ್ರಂಥದಲ್ಲಿ ಜಗದ್ಗುರು ಆದಿ ರೆಣುಕರು ಬೇರೆ, ರೇವಣಸಿದ್ಧ ಬೇರೆ ಎಂಬುದನ್ನು ಸ್ಪಷ್ಟವಾಗಿ ಹೇಳಿದ್ದಾರೆ. "ಹರಿಹರಾದಿ ಕವಿಗಳು ಕನ್ನಡದಲ್ಲಿಯೂ ಕಾವ್ಯರಚನೆ ಮಾಡಿದ್ದಾರೆ. ಆದರೆ ರೇಣುಕ–ರೇವಣರ ಚರಿತ್ರೆಗಳನ್ನು ಕಲಸುಮೇಲೋಗರ ಮಾಡಿದ್ದಾರೆ. ಆದಿ ರೇಣುಕರನ್ನು ಪ್ರತ್ಯೇಕವಾಗಿ ನೋಡಿದ ಕೃತಿ ಸಿದ್ಧಾಂತ ಶಿಖಾಮಣಿ ಒಂದೇ!" (ಅದೆ, ಪು.೧೧).

ಡಾ. ಎಂ. ಚಿದಾನಂದ ಮೂರ್ತಿ ಅವರು ಹೀಗೆ ಬರೆಯುತ್ತಾರೆ : "ಸಿದ್ಧಾಂತ ಶಿಖಾಮಣಿ ಎಂಬ ಅನಿರ್ದಿಷ್ಟ ಕಾಲದ (ಕ್ರಿ.ಶ. ಸು. ೧೨೦೦–೧೨೫೦ ಎಂದು ಹೇಳಬಹುದಾದ) ಸಂಸ್ಕೃತ ವೀರಶೈವ ಸಿದ್ಧಾಂತದ ಕೃತಿಯು ಕೊಲ್ಲಿಪಾಕೆಯ ಸೋಮೇಶ್ವರ ಲಿಂಗದಿಂದ ಮೂಡಿ ಬಂದ ರೇಣುಕನೇ ಅಗಸ್ತ್ಯನಿಗೆ ವೀರಶೈವ ಧರ್ಮದ ತತ್ವಗಳನ್ನು ಬೋಧಿಸಿದ್ದು ಎಂದು ಆರಂಭವಾಗಿ, ಬಿಡಿ ಬಿಡಿಯಾಗಿ ರೇಣುಕನ ಬಾಯಿಂದ ಅದರ ತತ್ವಗಳನ್ನು ತಿಳಿಸುತ್ತದೆ. ರೇಣುಕ, ಅಗಸ್ತ್ಯರಿಬ್ಬರೂ ಪೌರಾಣಿಕ ಕಲ್ಪನೆಗಳು ಎಂಬುದು ಸ್ಪಷ್ಟ" (ರೇವಣಸಿದ್ಧ: ಹಿನ್ನೆಲೆ–ಮುನ್ನೆಲೆ, ಪು. ೧೭).

ಈ ಎಲ್ಲ ವಿವರಣೆಗಳಿಂದ ಜಚನಿ ಹಾಗೂ ಎಂ. ಚಿದಾನಂದ ಮೂರ್ತಿ ಅವರ ಅಭಿಪ್ರಾಯದಂತೆ, ಆದಿ ರೇವಣುಕರು ರಾಮಯಣದ ಕಾಲದಲ್ಲಿ ಬದುಕಿದ್ದವರು. ರೇವಣಸಿದ್ಧರು ಬಸವಣ್ಣನವರ ಕಾಲಕ್ಕೆ ಬದುಕಿದ್ದವರು. ಹೀಗಾಗಿ ಇಬ್ಬರೂ ಬೇರೆ ಬೇರೆ ವ್ಯಕ್ತಿಗಳಾಗಿದ್ದಾರೆ ಎಂಬುದು ಸ್ಪಷ್ಟ. ಇನ್ನು ಮುಂದೆ ಇಬ್ಬರನ್ನೂ ಪ್ರತ್ಯೇಕವಾಗಿ ಸರಳವಾಗಿ ಗುರುತಿಸಲು ಅನುಕೂಲವಾಗುವಂತೆ ಜ. ಆದಿ ರೇಣುಕರು ಮತ್ತು ಶರಣ ರೇಣುಕರು ಎಂದು ಬಳಸಲಾಗುತ್ತದೆ.

**ಶರಣ ರೇವಣಸಿದ್ಧರ ವ್ಯಕ್ತಿತ್ವ**

ರೇವಣಸಿದ್ಧರು ಬಸವಣ್ಣನವರ ಹಿರಿಯ ಸಮಕಾಲೀನರು. ಸಿದ್ಧರಾಮೇಶ್ವರರು ಹುಟ್ಟುವ ಸೂಚನೆ ಕೊಟ್ಟವರು. ಶರಣ ರುದ್ರಮುನಿಗಳ ತಂದೆ. ಮಂಗಳವೇಡೆಯಲ್ಲಿ ಬಿಜ್ಜಳನಿಗೆ ಭೇಟಿಯಾದವರು. ಕೆರೆಕಟ್ಟೆಗಳನ್ನು ನಿರ್ಮಿಸುತ್ತ ಜನೋಪಯೋಗಿ ಕೆಲಸ ಮಾಡಿದವರು. ರೇವಣಸಿದ್ಧರು ೧೨ನೇ ಶತಮಾನದ ಶರಣರಾಗಿದ್ದು, ಒಬ್ಬ ಐತಿಹಾಸಿಕ ವ್ಯಕ್ತಿಯಾಗಿದ್ದುದರಿಂದ ಅನೇಕ ಶಾಸನಗಳಲ್ಲಿ ಉಲ್ಲೇಖಗೊಂಡಿದ್ದಾರೆ. ಶರಣರ ವಚನಗಳಲ್ಲಿ ದಾಖಲಾಗಿದ್ದಾರೆ. ಕ್ರಿ.ಶ. ೧೧೮೭ರ ಸಿರವಾಳ ಶಾಸನದಲ್ಲಿ ಇವರ ವ್ಯಕ್ತಿತ್ವದ ವರ್ಣನೆ ಇದ್ದು, ಸರ್ವಜ್ಞರೆಂದೂ, ಶಿವಸಿದ್ಧಚಕ್ರವರ್ತಿ ಎಂದೂ, ತುಂಜಿ ಬಂದ

ಹೊಳೆಯನ್ನು ಹರಗೋಲಿನ ಸಹಾಯವಿಲ್ಲದೆ ಈಜಿ ಕಡೆಗಾಗಬಲ್ಲವರೆಂದೂ, ಅದ್ಭುತವಾದ ಸಂಗೀತ ಹಾಗೂ ನೃತ್ಯ ಬಲ್ಲವರೆಂದೂ ಅಲ್ಲಿ ವರ್ಣಿಸಲಾಗಿದೆ. ಬಸವಾದಿ ಶರಣರ ತತ್ತ್ವಗಳಿಗೆ ಮಾರುಹೋದ ಈ ರೇವಣಸಿದ್ಧರು ಕೊಲ್ಲಿಪಾಕಿಯಲ್ಲಿ ಒಂದೊಂದು ಸಮುದಾಯಕ್ಕೆ ಒಂದೊಂದು ಮಠವನ್ನು ನಿರ್ಮಿಸಿ, ಆಯಾ ಸಮಾಜದವರಿಗೆ ಪೂಜೆಯ ಅಧಿಕಾರವನ್ನು ವಹಿಸಿ, ಜಾತಿಜಾತಿಗಳಲ್ಲಿರುವ ಮೇಲುಕೀಳು ಭಾವನೆಯನ್ನು ದೂರ ಮಾಡಲು ಪ್ರಯತ್ನಿಸಿದ್ದಾರೆ. ಶರಣ ರೇವಣಸಿದ್ಧರನ್ನು ಕುರಿತು ಡಾ. ಚಿದಾನಂದ ಮೂರ್ತಿ ಅವರು ಹೀಗೆ ಬರೆದಿದ್ದಾರೆ : "ಹನ್ನೆರಡನೆಯ ಶತಮಾನದ ರೇವಣಸಿದ್ಧನು ರೇಣುಕರ ಅವತಾರ ಪುರಷನೆಂಬ ಕಲ್ಪನೆ, ಅವನು ಪಂಚಪೀಠಗಳಿಗೆ ಸೇರಿದವನು, ಮಡಿವಂತ, ಅವನು ಬರೀ ಪವಾಡ ಪುರುಷ, ಮನುಷ್ಯನಲ್ಲ ಎಂಬ ತಿಳುವಳಿಕೆ; ಅವನಿಗೂ ಬಸವಣ್ಣನ ಆಂದೋಲನಕ್ಕೂ ಸಂಬಂಧವಿಲ್ಲ-ಇವೇ ಕೆಲವು ತಪ್ಪು ಭಾವನೆಗಳಿಂದ ರೇವಣಸಿದ್ಧ ಬಹುತೇಕರ ಅವಜ್ಞೆಗೆ ಒಳಗಾಗಿದ್ದಾನೆ. ಅವನು ಹನ್ನೆರಡನೆಯ ಸತಮಾನದ ಐತಿಹಾಸಿಕ ವ್ಯಕ್ತಿ ಎಂಬಲ್ಲಿ ಲವಲೇಶವೂ ಅನುಮಾನವಿಲ್ಲ" (ರೇವಣಸಿದ್ಧ: ಹಿನ್ನೆಲೆ-ಮುನ್ನೆಲೆ, ಪು. ೧).

ರೇವಣಸಿದ್ಧರು ಕೊಲ್ಲಿಪಾಕಿಗೆ ಹಲವಾರು ಸಲ ಹೋಗಿರಬೇಕು. ಏಕೆಂದರೆ ಅವರು ಸೋಮೇಶ್ವರನ ಭಕ್ತರಾಗಿರುವುದು ಇದಕ್ಕೆ ಮುಖ್ಯ ಕಾರಣ. ಜೈನ ಸಂಸ್ಕೃತಿಯ ಬೀಡಾಗಿದ್ದ ಈ ಗ್ರಾಮದಲ್ಲಿ ಶೈವ ಸಂಪ್ರದಾಯ ಹೆಚ್ಚಲು ರೇವಣಸಿದ್ಧರು ಕಾರಣ ರಾಗಿರಬಹುದಾಗಿದೆ. ಆದರೆ ರೇವಣಸಿದ್ಧರ ವ್ಯಕ್ತಿತ್ವವನ್ನು ಗಮನಿಸಿದರೆ ಅವರು ಸಂಘರ್ಷಕ್ಕೆ ಇಳಿಯದ, ಹಿಂಸೆಯನ್ನು ಗೈಯ್ಯದ ಅಪರೂಪದ ಶೈವ ಸಂಸ್ಕೃತಿಯ ನಾಯಕರು. ಹೀಗಾಗಿ ಜೈನ ಸಂಸ್ಕೃತಿಯನ್ನು ವಿರೂಪಗೊಳಿಸುವಲ್ಲಿ ರೇವಣಸಿದ್ಧರ ಪಾಲು ಇರಲಾರದು. ಅವರು ಸಂಸ್ಕೃತಿ ನಿರ್ಮಾಪಕರು, ವಿರೂಪಕರು ಅಲ್ಲವೆಂದೇ ಹೇಳಬೇಕು. ಆದರೆ ಕೊಲ್ಲಿಪಾಕಿ ಸೋಮೇಶ್ವರ ದೇವಾಲಯದ ಪ್ರವೇಶದ ಎರಡೂ ಮಗ್ಗುಲಿರುವ ಶಿಲ್ಪಕಲೆಯ ಸಂಗ್ರಹಾಯಲವನ್ನು ಗಮನಿಸಿದರೆ, ಅಲ್ಲಿ ಜೈನ ಮತ್ತು ಶೈವ ಸಂಪ್ರದಾಯದ ನೂರಾರು ಶಿಲ್ಪಕಲೆಗಳು ಕಾಣಸಿಗುತ್ತವೆ. ಇದರಿಂದ ಎರಡೂ ಸಂಸ್ಕೃತಿಗಳ ನಡುವೆ ಸಂಘರ್ಷ ನಡೆದಿರುವಂತೆ ತೋರುತ್ತದೆ. ಬಹುಶಃ ಇದು ರೇವಣಸಿದ್ಧರಿಗಿಂತ ಮುಂಚೆ ಅಥವಾ ರೇವಣಸಿದ್ಧರ ಅನುಪಸ್ಥಿತಿಯಲ್ಲಿ ನಡೆದಿರುವ ಸಂಘರ್ಷವಾಗಿರಬಹುದು.

ಶರಣ ಆದಯ್ಯನಂತೆ, ಏಕಾಂತರಾಮಯ್ಯನಂತೆ ರೇವಣಸಿದ್ಧರು ಕೂಡ ಸೋಮೇಶ್ವರನ ಭಕ್ತರಾಗಿದ್ದಾರೆ. ಪುಲಿಗೆರೆಯ ಸೋಮೇಶ್ವರ ದೇವಾಲಯದಿಂದ ಸಾಸಲು ಸೋಮೇಶ್ವರನವರೆಗೆ ಆದಯ್ಯನ ಪ್ರಯಾಣವನ್ನು ಗುರುತಿಸಬಹುದು. ಏಕಾಂತ ರಾಮಯ್ಯನ ಪ್ರಯಾಣವನ್ನು ಆಳಂದ ಸೋಮೇಶ್ವರನಿಂದ ಲಕ್ಷ್ಮೇಶ್ವರ ಸೋಮೇಶ್ವರನ ವರೆಗೆ, ಅಲ್ಲಿಂದ ಅಬಲೂರು ಸೋಮೇಶ್ವರನವರೆಗೆ ಗುರುತಿಸಬಹುದು. ಹಾಗೆಯೇ ಮಾಸನೂರು ಸ್ವಯಂಭೂ ಸೋಮೇಶ್ವರನಿಂದ ಕೊಲ್ಲಿಪಾಕಿ ಸ್ವಯಂಭೂ ಸೋಮೇಶ್ವರನ ವರೆಗೆ ರೇವಣಸಿದ್ದೇಶ್ವರರ ಪ್ರಯಾಣವನ್ನು ಗುರುತಿಸಬಹುದಾಗಿದೆ. (ಇದನ್ನು ಮುಂದೆ

ಕೊಡಲಾಗಿದೆ). ಆದರೆ ಆದಯ್ಯ ಮತ್ತು ಏಕಾಂತರಾಮಯ್ಯನವರಂತೆ ರೇವಣಸಿದ್ಧರು ಅನ್ಯಮತೀಯರೊಂದಿಗೆ ಸಂಘರ್ಷಕ್ಕೆ ಇಳಿದ ದೃಷ್ಟಾಂತಗಳು ನಮಗೆ ದೊರೆಯಲಾರವು. ಇದು ರೇವಣಸಿದ್ಧರ ಅಪರೂಪದ ವ್ಯಕ್ತಿತ್ವ

**ಮಠಗಳ ನಿರ್ಮಾಣ**

ಬಸವಣ್ಣನವರ ಸಿದ್ಧಾಂತವನ್ನು ಒಪ್ಪಿಕೊಂಡ ರೇವಣಸಿದ್ಧ ಹಾಗು ಮಗ ರುದ್ರಮುನಿ ಕೂಡಿ, ಕೊಲ್ಲಿಪಾಕಿಯಲ್ಲಿರುವ ಎಲ್ಲ ಜನಾಂಗದವರಿಗೆ ಒಂದೊಂದು ಮಠವನ್ನು ಕಟ್ಟಿಸಿ, ಅವರಿಗೆ ಪೂಜೆಯ ಹಕ್ಕು ದೊರಕಿಸಿಕೊಟ್ಟಂತೆ ತೋರುತ್ತದೆ. ಇವತ್ತಿಗೂ ಅಲ್ಲಿಯ ಜನ ತಮ್ಮೂರಿನಲ್ಲಿರುವ ಮಠಗಳೆಲ್ಲವನ್ನೂ ನಿರ್ಮಿಸಿದವರು ರೇವಣಸಿದ್ಧರು ಎಂದು ಹೇಳುತ್ತಾರೆ.

ಹದಿನೆಂಟು ಮಠಗಳ ಹೆಸರುಗಳು ನಮಗೆ ದೊರೆಯುತ್ತವೆ. ನಾವು ಕ್ಷೇತ್ರಕಾರ್ಯ ಮಾಡಿದ ೧೮ ಮಠಗಳಲ್ಲಿ ಮೂರ್‍ನಾಲ್ಕು ಮಠಗಳನ್ನು ಬಿಟ್ಟರೆ ಉಳಿದೆಲ್ಲ ಮಠಗಳು ಉತ್ತಮಸ್ಥಿತಿಯಲ್ಲಿದ್ದು, ಅಲ್ಲಿಯ ಶಿವಲಿಂಗಗಳು ಇವತ್ತಿಗೂ ಪೂಜೆಗೊಳ್ಳುತ್ತಲಿವೆ. ಜಾತಿಗೊಂದರಂತೆ ಮಠಗಳ ನಿರ್ಮಾಣವಾಗಿರುವುದು, ಬಹುಶಃ ಎಲ್ಲಜಾತಿಗಳನ್ನು ಸಮಾನವಾಗಿ ಕಾಣುವ ಒಂದು ದೃಷ್ಟಿಯ ಕೆಲಸವೆಂದೇ ತೋರುತ್ತದೆ. ಇದು ಬಸವಣ್ಣನವರ ಪ್ರಭಾವದಿಂದಾಗಿಯೇ ರೇವಣಸಿದ್ಧರು ಗೈದ ಕೆಲಸವಾಗಿರುವಂತಿದೆ. ಸಿದ್ಧರಾಮ ಸೊಲ್ಲಾಪುರವನ್ನು, ಬಸವಣ್ಣನವರು ಕಲ್ಯಾಣವನ್ನು, ರೇವಣಸಿದ್ಧರು ಕೊಲ್ಲಿಪಾಕಿಯನ್ನು ತಮ್ಮ ಕಾಯಕದ ವಿಶೇಷ ಕ್ಷೇತ್ರಗಳಾಗಿ ಆರಿಸಿಕೊಂಡಂತೆ ತೋರುತ್ತದೆ.

**ರೇವಣಸಿದ್ಧೇಶ್ವರರು ಕಟ್ಟಿಸಿದ ಮಠಗಳು**

೧. ಜಾಂದೂ(ಜಾಂಡ್ರ) ಮಠಂ, –(ಕಲ್ಲುಕುಟಿಗಕರ ಮಠ)
೨. ಮೇದರಿ ಮಠಂ, –(ಮೇದಾರ, ಶ್ರೀ ಕೇತೇಶ್ವರ ಆಲಯಂ)
೩. ಚಾಕಲಿಮಠಂ (ಸಾಗಲಿ, –ಅಗಸರ ಮಠ)
೪. ಮಂಗಲ(ಲಿ) ಮಠಂ, (ಹಡಪದ ಮಠ)
೫. ಕೋಮಟ್ಲ ಮಠಂ, (ವೈಶ್ಯ ಮಠಂ)
೬. ಪದ್ಮಶಾಲೆ ಮಠಂ, (ನೇಕಾರರ ಮಠ)
೭. ಕುರುಮ ಮಠಂ, (ಕುಮ್ಮರಿ ಮಠಂ, –ಕುರುಬರ ಮಠ)
೮. ಸಂಗರಿ ಮಠ, (ಸಮ್ಮಗಾರ ಮಠ).
೯. ನಕಾಶ ಮಠಂ (ಹಾಳಾಗುತ್ತಲಿದೆ, ಶಂಬರಿ ಮಠ, ಶಿಲ್ಪಮಠ)
೧೦. ಗೌಂಡ್ಲಮಠಂ, (ಈಡಿಗ ಮಠ)
೧೧. ಪೆರಿಕ ಮಠಂ, (ಪುರಗಿರಿ ಕ್ಷತ್ರಿಯ ಮಠ)
೧೨. ಗಾಂಡ್ಲ ಮಠಂ (ಗಾಣಿಗಮಠ)
೧೩. ಮೇರುಮಠಂ, (ಬಟ್ಟೆ ಹೊಲಿಯುವವರ–ಸಿಂಪಿಗ ಮಠ)

೧೪. ಪಂಚದಾಯಿಮಠ, (ಪಂಚದಂಡಿಮಠ, ನೆಲದ ಆಳದಲ್ಲಿದೆ, ಬಡಿಗ, ಕಮ್ಮಾರ, ಅಕ್ಕಸಾಲಿಗ, ಕಂಚಿಗ, ಶಿಲ್ಪಿ)

೧೫. ಕಾಪುಲ ಮಠಂ, (ರೆಡ್ಡಿಮಠ)?

೧೬. ಯಾದವ ಮಠಂ, (ಗೊಲ್ಲಮಠಂ, ಹಾಳಾಗಿ ಬೀಳುತ್ತಿದೆ)

೧೭. ಮಾಲಮಠಂ, (ಮೂಲಮಠಂ, ಹರಿಜನರ ಮಠ)

೧೮. ಆದಿಜಾಂಬವ ಮಠಂ, (ಮಾದಿಗ ಮಠ)

ರೇವಣಸಿದ್ಧೇಶ್ವರರ ಬಗೆಗೆ ಇನ್ನಷ್ಟು ಸಂಗತಿಗಳು

**ಹರಿಹರ ಗ್ರಹಿಸಿದ ರೇವಣಸಿದ್ಧರ ಚಿತ್ರ**

ಹರಿಹರನ 'ರೇವಣಸಿದ್ದೇಶ್ವರ ರಗಳೆ'ಯೇ ಶರಣ ರೇವಣಸಿದ್ಧರ ಬಗೆಗೆ ಒಂದು ಚಿತ್ರ ಕೊಡಲು ಪ್ರಯತ್ನಿಸಿದ ಪುರಾತನ ಕೃತಿ. ಅದರಲ್ಲಿಯ ಪೌರಾಣಿಕ ಸಂಗತಿಗಳನ್ನು ಆಯ್ದು ತೆಗೆದರೆ, ಉಳಿದಂತೆ ರೇವಣಸಿದ್ಧರ ಒಂದು ವ್ಯಕ್ತಿತ್ವದ ಚಿತ್ರಣವನ್ನು ಪಡೆಯಲು ಸಾಧ್ಯವಿದೆ.

ಹರಿಹರನ 'ರೇವಣಸಿದ್ದೇಶ್ವರ ರಗಳೆ'ಯಲ್ಲಿ ರೇವಣಸಿದ್ಧರ ಓಡಾಡಿದ ಗ್ರಾಮಗಳು ಮತ್ತು ಅಲ್ಲಿ ನಡೆದ ಘಟನೆಗಳು ಕ್ರಮವಾಗಿ ಹೀಗಿವೆ :'ಕೊಲ್ಲಿಪಾಕಿ>ಚೋಳರಾಜ್ಯದ ಕಾಂಚೀಪುರ>ಮಾಸನೂರು>ಕಲ್ಯಾಣ>ಮಂಗಳವೇಡೆ>ಲಂಕೆ>ಮಂಗಳವೇಡೆ> ಕೊಲ್ಲಾಪುರ> ವಾರಣಾಸಿ> ಮಂಗಳವೇಡೆ> ಚೋಳದೇಶ ಮುಂತಾದ ದಕ್ಷಿಣದೇಶಗಳ ಪರ್ಯಟನ> ಮಂಗಳವೇಡೆ> ಹಾವಿನಹಾಳ>ಸೊಲ್ಲಾಪುರ> ಕೊಲ್ಲಿಪಾಕಿ'.

ಹರಿಹರನು ಕೊಡುವ ರೇವನಸಿದ್ಧರ ಈ ಓಡಾಟದಲ್ಲಿ ಅವರು ಮಂಗಳವೇಡೆಗೆ ಮೇಲಿಂದಮೇಲೆ ಬರುವುದನ್ನು ಗಮನಿಸಬೇಕು. ಇನ್ನು ಹರಿಹರನು ಆಯಾ ಗ್ರಾಮದಲ್ಲಿ ಜರಗುವ ಘಟನೆಗಳನ್ನು ಹೀಗೆ ಕೊಡುತ್ತಾನೆ :

ಕೋಲ್ಲಿಪಾಕಿ : ಸೋಮನಾಥ ಲಿಂಗದಿಂದ ಉದ್ಭವ.

ಚೋಳದೇಶದ ಕಾಂಚಿಪುರ : ಇಲ್ಲಿಯ ಅರಸ ವಿಷ್ಣುವಿನ ಭಕ್ತ. ರೇವಣಸಿದ್ಧ ಪಿಣ್ಣಾಂಕ ಎಂಬ ಹೆಸರಿನಲ್ಲಿ, ವಿಷ್ಣುಪ್ರತಿಮೆಯನ್ನು ನುಡಿಸಿ, ಪ್ರತಿಷ್ಠೆ ಮಾಡಿಸಿದ.

ಮಾಸನೂರು: ಸೋಮೇಶ್ವರ ದೇವಾಲಯದ ಆಲದ ಮರದಲ್ಲಿ ಮಿಥುನ ರಾಕ್ಷಸರು ಶಾಪಗ್ರಸ್ಥರಾಗಿ, ತಗಣೆಗಳಾಗಿ ಇದ್ದು, ಪ್ರಾಣಿವಧೆ ಮಾಡುತ್ತಿದ್ದವು. ರೇವಣಸಿದ್ಧ ತನ್ನ ಬಿಸುಗಣ್ಣಿನಿಂದ ನೋಡಲಾಗಿ ಅವು ಎರಡು ಉಕ್ಕಿನ ಗುಂಡುಗಳಾದವು. ಈ ಗುಂಡುಗಳಿಂದ ಎರಡು ಖಡ್ಗಗಳನ್ನು ಮಾಡಿಸಿದ. ಗಂಡು ಗುಂಡಿನಿಂದ ತಯಾರಾದ ಖಡ್ಗ ಭಯಂಕರವಾಗಿತ್ತು. ಕಾರಣ ಅದನ್ನು ದೇವಾಲಯದ ಎದುರಿನ ಭೀಮಾನದಿಯ ಮಡುವಿನಲ್ಲಿ ನಿಲ್ಲಿಸಿದನು. ಅಲ್ಲಿಂದ ಹೆಣ್ಣು ಗುಂಡಿನಿಂದ ಮಾಡಿದ ಖಡ್ಗವನ್ನು ಜಯಂತಿ ಪುರದಲ್ಲಿದ್ದ (ಬನವಾಸಿ) ಆರನೇ ವಿಕ್ರಮಾದಿತ್ಯನಿಗೆ (೧೦೭೬-೧೧೨೭) ಇತ್ತನು.

ಕಲ್ಯಾಣ : ಕಲ್ಯಾಣದಲ್ಲಿ ಗಾಣಿಗರ ಕಲ್ಲಿಸೆಟ್ಟಿ ಮನೆಯಲ್ಲಿ ಗಾಣ ಹೊಡೆದ. ಕಲ್ಲಿಸೆಟ್ಟಿ ಮತ್ತವನ ಹೆಂಡತಿಯ ಹಾಗೂ ಅವರ ಎತ್ತುಗಳ ಹೋದ ಒಂದೊಂದು ಕಣ್ಣುಗಳೂ ಬಂದವು. ಇಲ್ಲಿ ಒಂದು ವಿಷಯವನ್ನು ಗಮನಿಸಬೇಕು; ಈ ಸಂಗತಿ ನಡೆದುದು ರಟಗಲ್ಲ ಗ್ರಾಮದಲ್ಲಿ ಎಂಬ ಮಾಹಿತಿ ದೊರೆಯುತ್ತದೆ. ರಟಗಲ್ಲಿನಲ್ಲಿ ರೇವಣಸಿದ್ಧ ತಪಸ್ಸು ಮಾಡಿದ ಸ್ಥಳವೆಂದು ಹೇಳುವ ಒಂದು ಮಠವಿದೆ. ಅದರ ಎದುರಿಗೆ ಗಾಣಿಗರ ಮನೆಯಲ್ಲಿ ಗಾಣ ಹೊಡೆದನೆಂದು ತೋರಿಸುವ ಕಲ್ಲಿನ ಗಾಣಬರಿ ಈಗಲೂ ಇದೆ. ಬಹುಶಃ ಹರಿಹರನಿಗೆ ಗ್ರಾಮದ ಹೆಸರು ಸರಿಯಾಗಿ ತಿಳಿದಿರಲಿಕ್ಕಿಲ್ಲ ಎನಿಸುತ್ತದೆ.

ಮಂಗಳವೇಡೆ : ಮಂಗಳವೇಡೆಯಲ್ಲಿ ಮಾಯಿದೇವಿ ಎಂಬ ದೇವದಾಸಿಯ ಮನೆಯಲ್ಲಿ ನೀರು ಹೊತ್ತು ಅವಳ ಜೊತೆಗೆ ಉಳಿದನು. ಒಂದು ದಿನ ಮನೆಯ ಹೊರಗೆ ಮಲಗಿದ್ದ ರೇವಣಸಿದ್ಧ ಏನು ಮಾಡುತ್ತಿದ್ದಾನೆಂದು ಮಾಯಿದೇವಿ ಹೊರಗೆ ಬಂದು ನೋಡಿದರೆ, ಅತ್ಯಂತ ಸುಂದರವಾದ ಕನ್ನಿಕೆಯರು ಅವನ ಕೈಕಾಲುಗಳನ್ನು ಒತ್ತುತ್ತಿದ್ದರಂತೆ. ಇದನ್ನು ನೋಡಿ ಮಾಯಿದೇವಿ ಗಾಬರಿಯಾದಳು. ರೇವಣಸಿದ್ಧ ಆಕೆಯಿಂದ ಎರಡು ವಿಭೂತಿ ಉಂಡಿಗಳನ್ನು ತರಿಸಿ, ಒಂದರಿಂದ ಲಿಂಗವನ್ನು, ಇನ್ನೊಂದರಿಂದ ಹೊನ್ನನ್ನು ಮಾರ್ಪಡಿಸಿ, ಲಿಂಗಪೂಜಿಸುತ್ತ, ಸಂಪತ್ತನ್ನು ಅನುಭವಿಸುತ್ತ ಇರಲು ಹೇಳಿದನು. ಈಕೆಗೆ ರೇವಣಸಿದ್ಧನಿಂದ ಹುಟ್ಟಿದ ಮಗಳೇ ಚೆನ್ನರೇವಣದೇವಿ.

ನಮ್ಮ ಕ್ಷೇತ್ರಕಾರ್ಯದಲ್ಲಿ ನಾವು ನೋಡಿದ ರೇವಣಸಿದ್ದೇಶ್ವರರ ಸ್ಮಾರಕಗಳಿರುವ ಎಡೆಯಲ್ಲಿ ತಪ್ಪದೇ ಮಾಯಿಯ ಪ್ರತಿಷ್ಠಾಪನೆಯೂ ಕಂಡುಬಂದಿದೆ. ಹೀಗಾಗಿ ಮಂಗಳವೇಡೆಯ ಈ ದೇವದಾಸಿ ಮಾಯಿ ರೇವಣಸಿದ್ಧರ ಪತ್ನಿಯೆಂದೇ ಗ್ರಹಿಸಬೇಕು. ಬಹುಶಃ ಈಕೆ ರೇವಣಸಿದ್ಧರ ಜೊತೆ ಅಡ್ಡಾಡಿದಂತೆ ತೋರುತ್ತದೆ.

ಮಂಗಳವೇಡೆ : ರೇವಣಸಿದ್ಧನು ಬಿಜ್ಜಳನ ಮನೆ ಮುಂದೆ ಹೋಗಿ ನಿಂತನು. ಬಿಜ್ಜಳ ಈತನಿಗೆ ಬೇಕೆಂತಲೇ ಬಿಸಿಬಿಸಿ ಅನ್ನವನ್ನು ನಿಡಿದನು. ಇದನ್ನು ಕಂಡು ರೇವಣಸಿದ್ಧನು ಈ ಅನ್ನವನ್ನು ಅರಮನೆಯ ಕಂಬಕ್ಕೆ ಸವರಿದನು. ಕೂಡಲೇ ಉರಿ ಹತ್ತಿಕೊಂಡಿತು. ಉರಿಯು ಪಸರಿಸುವುದನ್ನು ಕಂಡು ಬಿಜ್ಜಳನು ಗಾಬರಿಯಾಗಿ ರೇವಣಸಿದ್ಧರ ಮೊರೆ ಹೋದನು. ರೇವಣಸಿದ್ಧರು ಬೆಂಕಿಯನ್ನು ನಂದಿಸಿದರು.

ಈ ಬಿಜ್ಜಳ ೧ನೆಯವನೋ (೧೦೫೭) ೨ನೆಯವನೋ (೧೧೩೦–೧೧೬೭) ಎಂದು ವಿಚಾರಿಸಲಾಗಿ, ಕಾಲದ ಸಮೀಕರಣದಲ್ಲಿ ಈತ ಬಸವಣ್ಣನವರು ಮಂತ್ರಿಯಾಗಿದ್ದ ೨ನೇ ಬಿಜ್ಜಳನೆಂಬುದು ಖಚಿತ. ಬಹುಶಃ ಬಿಜ್ಜಳನ ಯೌವ್ವನದಲ್ಲಿ ನಡೆದ ಘಟನೆ ಇದಾಗಿದೆ.

ಕೊಲ್ಹಾಪುರ : ಮಂಗಳವೇಡೆಯಿಂದ ರೇವಣಸಿದ್ಧರು ಕೊಲ್ಹಾಪುರಕ್ಕೆ ಹೋದರು. ಅಲ್ಲಿ ನಾಥಪಂಥದ ಗೋರಕ್ಷ ಇವರನ್ನು ಅರಿಯದೆ ಗರ್ವದಿಂದ್ದನು. ಆತನ ಅನುಯಾಯಿ ಲಕ್ಕಾದೇವಿ ರೇವಣಸಿದ್ಧನ ಪಾತ್ರೆಗೆ ಖಡ್ಗ ಹಾಕಿದಳು. ಅದನ್ನು ಬಿರುಗಣ್ಣಿನಿಂದ ನೋಡಲು

ಕರಗಿ ದ್ರವವಾಯಿತು. ಅದನ್ನು ರೇವಣಸಿದ್ಧ ಕುಡಿಯಲಾಗಿ, ಗೋರಕ್ಷನ ಎದೆಯಲ್ಲಿ ಖಡ್ಗವಾಗಿ ಸೇರಿತು. ತೊಂದರೆಯಿಂದ ಆತ ಒದ್ದಾಡಿದ. ಲಕ್ಕಾದೇವಿಯು ಮಹಾಲಕ್ಷ್ಮಿಯ ಮೊರೆಹೋಗಲು ಆಕೆ ಬಂದು ಮಧ್ಯಸ್ಥಿಕೆ ವಹಿಸಲಾಗಿ, ಖಡ್ಗರಸವನ್ನು ರೇವಣಸಿದ್ಧ ಉಗುಳಿದ. ಆಗ ಗೋರಕ್ಷನ ಎದೆಯಿಂದ ಖಡ್ಗ ಕಡೆಗಾಗಿ ಆತ ಶರಣಾಗತನಾದನು.

**ವಾರಣಾಸಿ:** ಕೊಲ್ಹಾಪುರದಿಂದ ವಾರಣಾಸಿಗೆ ತೆರಳಿ ಅಲ್ಲಿ ಇರತೊಡಗಿದ.

**ಮಂಗಳವೇಡೆ:** ಮಂಗಳವೇಡೆಯಲ್ಲಿ ಮಾಸನೂರಿನ ಮಡುವಿನಲ್ಲಿ ರೇವಣಸಿದ್ಧರು ನಿಲ್ಲಿಸಿದ ಖಡ್ಗವನ್ನು ಹೇಗಾದರೂ ಮಾಡಿ ಪಡೆದರೆ ಅದರಿಂದ ತಾನು ಸಾಮ್ರಾಟನಾಗಬಹುದೆಂದು ಬಿಜ್ಜಳ ಬಯಸಿದನು. ಒಬ್ಬ ಖರ್ಪರನಿಗೆ ಹಿಡಿತರಿಸಿದನು. ಆತ ೧೨ ಸಾವಿರ ಕನ್ನಿಕೆಯರನ್ನು ಬಲಿಕೊಡಬೇಕೆಂದು ಅನುಮತಿ ಪಡೆದು ಕನ್ನಿಕೆಯರನ್ನು ಸಂಗ್ರಹಿಸಲು ತೊಡಗಿದನು. ಕೊನೆಗೆ ಒಬ್ಬ ಕನ್ನಿಕೆ ಕಡಿಮೆಯಾಗಿ, ದೇವದಾಸಿ ಮಾಯಿದೇವಿಯ ಮಗಳು ಚೆನ್ನರೇವಣದೇವಿಯನ್ನು ಹಿಡಿತರುವಾಗ ಮಾಯಿದೇವಿ ರೇವಣಸಿದ್ಧರನ್ನು ಪ್ರಾರ್ಥಿಸಿದಳು. ಮಾಯಿದೇವಿಯ ಆರ್ತನಾದ ರೇವಣಸಿದ್ಧರಿಗೆ ಮುಟ್ಟಿತು. ತನ್ನ ಮಗಳಿಗೆ ಬಂದ ಈ ಗತಿಯನ್ನು ತಾಳದೆ ಕೂಡಲೆ ಮಂಗಳವೇಡೆಗೆ ಆಗಮಿಸಿ, ಅರಸನ ಮುಂದೆ ಪ್ರತ್ಯಕ್ಷರಾದರು. ಬಿಜ್ಜಳ ರೇವಣಸಿದ್ಧರಿಗೆ ಮೊರೆಹೋದನು. ರೇವಣದೇವಿಯ ಜೊತೆ ಹಾರ ಕೊಡಲು ತಂದಿದ್ದ ಎಲ್ಲ ಕನ್ನಿಕೆಯರನ್ನು ಬಿಡುಗಡೆಗೊಳಿಸಿದನು. ಬಿಜ್ಜನನ್ನು ಮಾಸನೂರಿನ ಭೀಮಾನದಿ ಮಡುವಿಗೆ ಕರೆದುಕೊಂಡು ಹೋಗಿ, ಖಡ್ಗವನ್ನು ಕಿತ್ತಿ ಹಿಡಿದಾಗ, ಅದರ ಆರ್ಭಟ ನೋಡಿ, ಬಿಜ್ಜಳ ಹೆದರಿ, ಅದನ್ನು ಮೊದಲಿದ್ದಂತೆಯೇ ಇರಿಸಲು ವಿನಂತಿಸಿದನು.

**ದಕ್ಷಿಣದೇಶಗಳ ಪರ್ಯಟನ :** ರೇವಣಸಿದ್ಧರು ಇಲ್ಲಿಂದ ನಾನಾ ದೇಶಗಳನ್ನು ವಿಶೇಷವಾಗಿ ದಕ್ಷಿಣದ ದೇಶಗಳನ್ನು ಪರ್ಯಟನ ಮಾಡುತ್ತ, ಶಿವದೇವಾಲಯಗಳಿಗೆ ಭೇಟಿಯಾಗುತ್ತ, ಅಲ್ಲಲ್ಲಿಯ ರಾಜಕುಮಾರಿಯರನ್ನು ಮದುವೆಯಾಗುತ್ತ ಹೊರಟರು.

**ಮಂಗಳವೇಡೆ :** ರೇವಣಸಿದ್ಧ ಮತ್ತೆ ಮಂಗಳವೇಡೆಗೆ ಬಂದು, ಒಂದು ಸುಂದರವಾದ ಕೆರೆ ನಿರ್ಮಾಣ ಮಾಡಬೇಕೆಂದು, ತಾನೇ ಮಣ್ಣು ಅಗೆಯಲು ಪ್ರಾರಂಭಿಸಿದನು. ತನ್ನ ಮಡದಿಯರಿಗೆ ಮಣ್ಣು ಹೊತ್ತು ಹಾಕಲು ಆದೇಶಿಸಿದನು. ಆದರೆ ಚೋಳದೇಶದ ರಾಜಕುಮಾರಿ ಮೂರು ತಿಂಗಳ ಬಸುರಿ. ಆಯಾಸಗೊಂಡಳು. ರೇವಣಸಿದ್ಧ ಈಕೆಯ ಆಯಾಸಕ್ಕೆ ಕಾರಣವಾದ ಗರ್ಭವನ್ನು ಪಡೆದು, ಕೆರೆಯ ದಂಡೆಯಲ್ಲಿ ಜೋಪಾನವಾಗಿ (ಗಡಿಗೆಯಲ್ಲಿ ಹಾಕಿ?) ಮುಚ್ಚಿಟ್ಟನು. ಒಂಭತ್ತು ತಿಂಗಳ ನಂತರ ಮುಚ್ಚಳ ತೆಗೆಯಲು ಗಂಡುಮಗು ಹೊರಬಂದಿತು. ಅವನಿಗೆ ರುದ್ರಮುನಿ ಎಂದು ಹೆಸರಿಟ್ಟನು. ರುದ್ರಮುನಿಗೆ ಎಂಟು ವರ್ಷಗಳು ತುಂಬಲು ಅವನಿಗೆ ಶೈವ ದೀಕ್ಷೆಯನ್ನು ಇತ್ತನು.

ರುದ್ರಮುನಿ ಜನನದ ಘಟನೆ ಇಂದಿನ ಪ್ರನಾಳ ಶಿಶುವಿನ ಕಲ್ಪನೆಯಂತಿದೆ. ಇಲ್ಲಿ ರೇವಣಸಿದ್ಧರ ಅದ್ಭುತವಾದ ಜ್ಞಾನದ ದರ್ಶನವಾಗುತ್ತದೆ. ಮಹಾಭಾರತದ ದ್ರೋಣನ ಕುಂಭೋದ್ಭವದ ಕಲ್ಪನೆಯನ್ನೂ ಇಲ್ಲಿ ಜ್ಞಾಪಿಸಿಕೊಳ್ಳಬಹುದು.

**ಹಾವಿನಹಾಳ:** ಓಡಾಟದಲ್ಲಿ ರೇವಣಸಿದ್ಧರ ಜೊತೆಗೆ ಮಗ ರುದ್ರಮುನಿ ಮತ್ತು ಸತಿಯರಲ್ಲಿ ವಿಶೇಷವಾಗಿ ಮಾಯಿದೇವಿ ಇದ್ದಳೆಂದು ತೋರುತ್ತದೆ. ಸಂಚಾರ ಹೊರಟು, ಹಾವಿನಹಾಳ ಗ್ರಾಮಕ್ಕೆ ಬಂದನು. ಅಲ್ಲಿ ಕಲ್ಲಯ್ಯನಿಗೆ ರುದ್ರಮುನಿಯಿಂದ ಶೈವದೀಕ್ಷೆ ಕೊಡಿಸಿದನು.

**ಸೊನ್ನಲಿಗೆ :** ಸೊನ್ನಲಾಪುರಕ್ಕೆ ಬಂದನು. ಚಾಮಲಾದೇವಿ ಬರಮಾಡಿಕೊಂಡಳು. ಪಲ್ಲಕ್ಕಿಯಿಂದ ಇಳಿದು, ಬರಿಗಾಲಿನಿಂದ ಮುದ್ದುಗೌಡ–ಸುಗ್ಗವ್ವೆಯರ ಮನೆಗೆ ತೆರಳಿ, ಸಿದ್ಧರಾಮನ ಜನನದ ಸೂಚನೆ ಕೊಟ್ಟು, ಚಾಮಲಾದೇವಿಗೆ ಆ ಮಗುವನ್ನು 'ಸ್ವತಃ ನಾನೇ' ಎಂದು ಕಾಣಬೇಕೆಂದು ಆದೇಶಿಸಿದನು.

**ಕೊಲ್ಲಿಪಾಕ :** ಕೊಲ್ಲಿಪಾಕ ಗ್ರಾಮಕ್ಕೆ ಬಂದು ಸೋಮನಾಥ ಲಿಂಗ ಸೇರಿದನು.

ಹರಿಹರನಿಂದ ರೇವಣಸಿದ್ಧನ ಚರಿತ್ರೆಯಲ್ಲಿ ವರ್ಣಿತವಾಗಿ ಉಳಿದು ಬಂದ ಘಟನೆಗಳು ಇಷ್ಟು. ಈ ಘಟನೆಗಳಲ್ಲಿಯ ಸಂಗತಿಗಳನ್ನು ಹೀಗೆ ಗುರುತಿಸಬಹುದಾಗಿದೆ.

**ಪೌರಾಣಿಕ ಸಂಗತಿಗಳು:** ಕೈಲಾಸದಿಂದ ಕಾವ್ಯ ಪ್ರಾರಂಭವಾಗುವುದು ಭಕ್ತಿಯುಗದ ಒಂದು ಪೌರಾಣಿಕ ಸಂಗತಿ. ಶಿವನ ಅಪ್ಪಣೆಯ ಮೇರೆಗೆ ಶಿವಗಣರಲ್ಲಿ ಒಬ್ಬರಾದ ರೇಣುಕ ಭೂಲೋಕದ ಕೊಲ್ಲಿಪಾಕಿ ಸೋಮನಾಥ ಲಿಂಗದಲ್ಲಿ, ವಸ್ತ್ರಾಲಂಕಾರ ಸಹಿತ ಉದ್ಭವಾಗುವುದು. ಕೊನೆಯಲ್ಲಿ ಈ ಲಿಂಗದಲ್ಲಿಯೇ ಸೇರುವುದು. ಅಗಸ್ತ್ಯನ ಆಶ್ರಮಕ್ಕೆ ಆಗಮಿಸಿ ಭಕ್ತಿಗೋಷ್ಠಿ ನಡೆಸುವುದು. ಮುಂದೆ ಲಂಕೆಯಿಂದ ವಿಭೀಷಣ ರೇಣುಕರನ್ನು ಹುಡುಕುತ್ತ ಬಂದು, ಲಂಕೆಗೆ ಕರೆದುಕೊಂಡು ಹೋಗುವುದು. ಅಲ್ಲಿ ರಾವಣನ ಕೊನೆಯ ಇಚ್ಛೆಯಾದ ಮೂರು ಕೋಟಿ ಲಿಂಗ ಸ್ಥಾಪನೆಯನ್ನು ರೇಣುಕರಿಂದ ಮಾಡಿಸುವುದು. ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಆಕಾಶ ಮಾರ್ಗವಾಗಿ ನೆಗೆದು ಹೋಗುವುದು. ಇಷ್ಟು ಹರಿಹರನ ಚಿತ್ರಣದಲ್ಲಿ ಪೌರಾಣಿಕ ಸಂಗತಿಗಳಾಗಿದ್ದು, ಇವು ಪುರಾಣಪುರುಷ ಜಗದ್ಗುರು ಆದಿ ರೇಣುಕರ ಚಿತ್ರಣಕ್ಕೆ ಸಂಬಂಧಿಸಿದವೆಂದು ಇಟ್ಟುಕೊಳ್ಳಬಹುದು. ಉಳಿದ ಸಂಗತಿಗಳೆಲ್ಲ ಶರಣ ರೇವಣಸಿದ್ಧರಿಗೆ ಸಂಬಂದಿಸಿ ಇಟ್ಟುಕೊಳ್ಳಬಹುದಾಗಿದೆ.

**ಸ್ಮಾರಕಗಳು ಹೇಳುವಂತೆ ರೇವಣಸಿದ್ಧರ ಓಡಾಟ**

ರೇವಣಸಿದ್ಧರು ಕಲಚೂರಿ ವಂಶದವರ ಮೂಲ ಗ್ರಾಮವಾದ ಮಂಗಳವೇಡೆಯ ಭಾಗದವರಾಗಿರಬಹುದಾಗಿದೆ ಎಂದು ಹೇಳಲು ನಮಗೆ ಹಲವಾರು ಸಂಗತಿಗಳು ದೊರೆಯುತ್ತವೆ.

೧. ಮಂಗಳವೇಡೆಯ ಸುತ್ತಮುತ್ತಲ ಪ್ರದೇಶದಲ್ಲಿ ರೇವಣಸಿದ್ಧರಿಗೆ ಸಂಬಂಧಿಸಿದ ಪ್ರಸಿದ್ಧ ಸ್ಮಾರಕಗಳಿವೆ. ಮಂಗಳವೇಡೆಯ ಕೋಟೆಯ ಮಗ್ಗುಲಿಗೆ, ಅದೂ ಕೋಟೆಯ ಬಾಗಿಲು ಇರುವ ಪೂರ್ವದ ಗೋಡೆಯ ದಕ್ಷಿಣದ ತುದಿಯಲ್ಲಿ ಪುರಾತನ ಲಕ್ಷಣವುಳ್ಳ ರೇವಣಸಿದ್ಧರ ಗುಡಿ ಇದೆ. ಇದರ ಗರ್ಭಗೃಹವಂತೂ ನೆಲದ ಆಳದಲ್ಲಿದೆ. ಈ

ಗ್ರಾಮದ ಹೊರಮಗ್ಗಲು ಪಶ್ಚಿಮದಿಕ್ಕಿನಲ್ಲಿ ರೇವಣಸಿದ್ಧರು ನಿರ್ಮಿಸಿದ ಒಂದು ಕೆರೆಯೂ (ಕೃಷ್ಣಕೆರೆ?) ಇದೆ. ರುದ್ರಮುನಿ ಹುಟ್ಟಿದ್ದು ಈ ಕೆರೆಯ ನಿರ್ಮಾಣದ ಕಾಲಕ್ಕೆ ಎಂದು ಹರಿಹರನ ರೇವಣಸಿದ್ಧ ರಗಳೆ ಹೇಳುತ್ತದೆ.

೨. ಮಂಗಳವೇಡೆಯಿಂದ ೧೫ ಕಿ.ಮೀ. ದೂರದಲ್ಲಿರುವ ಸಿದ್ಧನಕೆರೆ ಎಂಬ ಇನ್ನೊಂದು ಗ್ರಾಮದಲ್ಲಿ ರೇವಣಸಿದ್ಧರು ನಿರ್ಮಿಸಿದರೆಂದು ಹೇಳುವ ಕೆರೆ ಒಂದಿದೆ. ಅದಕ್ಕೆಂತಲೇ ಆ ಕೆರೆಗೆ ಸಿದ್ಧನಕೆರೆ ಎಂದು ಹೆಸರು ಬಂದಿದೆ. ಈ ಕೆರೆಯ ಮಗ್ಗುಲಿಗೆ ಹುಟ್ಟಿಕೊಂಡ ಗ್ರಾಮಕ್ಕೂ ಸಿದ್ಧನಕೆರೆ ಎಂಬ ಹೆಸರೇ ರೂಢಿಗೆ ಬಂದಿದೆ. ಕೆರೆಯ ದಂಡೆಯ ಮೇಲೆ ರೇವಣಿಸಿದ್ಧರು ನಿರ್ಮಿಸಿದ ಶಿವಮಂದಿರವು ಇಂದು ರೇವಣಸಿದ್ಧನ ಮಂದಿರವೆಂದೇ ಪ್ರಸಿದ್ಧವಾಗಿದೆ.

೩. ಅತ್ಯಂತ ಪ್ರಸಿದ್ಧವಾಗಿರುವ ರೇವಣಸಿದ್ಧರ ಗುಡಿಯೊಂದು ಸೋಲಾಪುರ ಜಿಲ್ಲೆಯ ಮಾಸನೂರು ಗ್ರಾಮದಲ್ಲಿದೆ. ಮೂಲತಃ ಇದೊಂದು ಸೋಮನಾಥ ದೇವಾಲಯ. ಇದನ್ನು ರೇವಣಸಿದ್ಧರು ಪ್ರವೇಶ ಮಾಡಿದ ನಂತರ ಇದು ರೇವಣಸಿದ್ಧೇಶ್ವರ ದೇವಾಲಯವೆಂದೇ ಪ್ರಸಿದ್ಧವಾಗಿದೆ. ಇಲ್ಲಿ ರೇವಣಸಿದ್ಧರು ಸುರಗಿ(ಖಡ್ಗ) ಪವಾಡ ನಡೆಸಿದರೆಂದು ಹೇಳಲಾಗುವ ಜಟಾಶಂಕರ ಗುಡಿಯೊಂದು ರೇವಣಸಿದ್ಧೇಶ್ವರ ಗುಡಿಯ ಮುಂದೆ ಆವಾರ ಗೋಡೆಗೆ ಹತ್ತಿಕೊಂಡು ಹರಿಯುವ ಭೀಮಾನದಿಯ ದೊಡ್ಡ ಮಡುವಿನಲ್ಲಿದೆ.

೪. ಮಾಸನೂರಿನ ಸೋಮೇಶ್ವರ ದೇವಾಲಯವು ಕೊಲ್ಲಿಪಾಕಿಯಲ್ಲಿರುವ ಸೋಮೇಶ್ವರ ದೇವಾಲಯಕ್ಕಿಂತ ಪ್ರಾಚೀನವಾಗಿದೆ, ವಿಸ್ತಾರವಾಗಿದೆ. ಸೋಮೇಶ್ವರನ ಭಕ್ತನಾದ ರೇವಣಸಿದ್ಧ ಮಾಸನೂರಿನ ಸೋಮೇಶ್ವರನಿಂದ ಕೊಲ್ಲಿಪಾಕಿ ಸೋಮೇಶ್ವರನ ವರೆಗೆ ಹಲವಾರು ಸಲ ಸಂಚಾರ ಮಾಡಿರುವುದು ಸಹಜವೆನಿಸುತ್ತದೆ.

೫. ರೇವಣಸಿದ್ಧರ ಸ್ಮಾರಕಗಳು ಮಂಗಳವೇಡೆ, ಮಾಸನೂರು, ಸಿದ್ಧನಕೆರೆ ಗ್ರಾಮಗಳಲ್ಲಿ ಇರುವ ಜೊತೆಗೆ ಮಂಗಳವೇಡೆಯ ಭಾಗದಿಂದಲೇ ರೇವಣಸಿದ್ಧರು ಸಿದ್ಧರಾಮೇಶ್ವರರ ಸೋಲಾಪುರದ ಕಡೆ ಬಂದಿರಬಹುದೆನಿಸುತ್ತದೆ. ಸೋಲಾಪುರದಲ್ಲಿ, ರೇವಣಸಿದ್ಧರು ಪಲ್ಲಕ್ಕಿಯಿಂದ ಇಳಿದು ಸೊಲ್ಲಾಪುರದ ಭೂಮಿಯನ್ನು ಸ್ಪರ್ಶಮಾಡಿ ವಂದನೆಗೈದರೆಂದು ಹೇಳುವ ಸ್ಥಳದಲ್ಲಿ ಮತ್ತೊಂದು ರೇವಣಸಿದ್ದರ ಗುಡಿ ನಿರ್ಮಾಣವಾಗಿದೆ.

೬. ರೇವಣಸಿದ್ಧರ ಗುಡಿಗಳು ಇದ್ದಲ್ಲಿ ಅವರು ಕೆರೆ ಕಟ್ಟೆಗಳನ್ನು ನಿರ್ಮಿಸುತ್ತ ಬಂದಿರುವುದು ಕಂಡುಬರುತ್ತದೆ. ಸೋಲಾಪುರದಿಂದ ರೇವಣಸಿದ್ಧರು ಭೀಮಾನದಿಯ ಗುಂಟ ತಮ್ಮ ಪ್ರವಾಸವನ್ನು ಕಲ್ಯಾಣದ ಕಡೆ ಬೆಳೆಸಿದರೆಂದು ತೋರುತ್ತದೆ. ಅವರು ಸಾಗಿದ ಈ ದಾರಿಯಲ್ಲಿ ಮತ್ತೆ ಪ್ರಸಿದ್ಧ ಸ್ಮಾರಕವೊಂದು ದೊರೆಯುವುದು ಬಸವಣ್ಣನವರ ಹುಟ್ಟೂರಾದ ಇಂಗಳೇಶ್ವರ ಗ್ರಾಮದ ಹೊರಗಿರುವ ಬೆಟ್ಟದಲ್ಲಿ. ಆ ಬೆಟ್ಟದ ಉತ್ತರದ ಇನ್ನೊಂದು ತುದಿಯಲ್ಲಿಯೇ ಅಕ್ಕನಾಗಮ್ಮನ ಗವಿಯೂ ಇದೆ.

೭. ನಂತರ ರೇವಣಸಿದ್ಧರ ಸ್ಮಾರಕ ದೊರೆಯುವುದು ಕಲಬುರಗಿ ಜಿಲ್ಲೆಯ ಜೇವರ್ಗಿ ತಾಲೂಕಿನ ಭೀಮಾನದಿಯ ದಂಡೆಯ ಮೇಲಿರುವ ಕೋಳಕೂರ ಹಾಗೂ ಕಟ್ಟಿಸಂಗಾವಿ ಎಂಬ ಗ್ರಾಮಗಳಲ್ಲಿ. ಕೋಳಕೂರ ಗ್ರಾಮವು ಭೀಮಾನದಿಯ ದಂಡೆಯ ಮೇಲಿದೆ. ಪೂರ್ವಕ್ಕೆ ಭೀಮಾನದಿಗೆ ಇಳಿದುಹೋಗುವ ಕೊರಕಲು ಪ್ರದೇಶದಲ್ಲಿ ಒಂದು ಪ್ರಾಚೀನ ಈಶ್ವರ ದೇವಾಲಯವಿದೆ. ಕೋಳಕೂರ ಗ್ರಾಮದಲ್ಲಿ ದೊರೆತ ೧೧೮೦ರ ಒಂದು ಶಾಸನದಲ್ಲಿ ಶ್ರೀ ಚಂದೇಶ್ವರ ದೇವರು, ವಿನಾಯಕ ದೇವರು, ಹಾಗೂ ರೇವಣೇಶ್ವರ ದೇವರುಗಳ ಪ್ರಸ್ತಾಪ ಬರುತ್ತದೆ. ಮುಂದೆ ಕಟ್ಟಿಸಂಗಾವಿಯ ಉತ್ತರದ ತುದಿಯನ್ನು ಕೊರೆದುಕೊಂಡೇ ಭೀಮಾನದಿ ಹರಿಯುತ್ತದೆ. ಹೀಗೆ ನದಿಯ ದಂಡೆಯ ಮೇಲೆಯೇ ರೇವಣಸಿದ್ದೇಶ್ವರ ಮಠ ಇದೆ. ಇಲ್ಲಿ ಕೆಲವು ದಿನ ಇದ್ದ ರೇವಣಸಿದ್ಧರು ತುಂಬಿ ಹರಿಯುವ ಭೀಮಾನದಿಯನ್ನು ಕಂಬಳಿ ಹಾಕಿ ದಾಟಿ, ಆ ಕಡೆ ದಡ ಸೇರಿ, ಕಲಬುರಗಿ ಕಡೆ ಹೊರಟು, ಕುಸನೂರ (ಗುಲಬರ್ಗಾ ವಿಶ್ವವಿದ್ಯಾಲಯ ಸ್ಥಾಪನೆಯಾಗಿರುವುದು ಈ ಗ್ರಾಮದ ಜಮೀನಿನಲ್ಲಿಯೇ) ಗ್ರಾಮದ ಕಡೆ ಹೋದರೆಂದು ಹೇಳಲಾಗುತ್ತದೆ. ಕುಸನೂರ ಗ್ರಾಮದಲ್ಲಿ ಪುರಾತನವಾದ ಕಲ್ಲಾಲಿಂಗೇಶ್ವರ ಗುಡಿಯೊಂದಿದೆ. ಅಲ್ಲಿಂದ ಸುಮಾರು ೩೦ ಕಿ.ಮೀ. ದೂರದಲ್ಲಿ ಮಹಾಗಾಂವ ಗ್ರಾಮದಲ್ಲಿ ಹಲವಾರು ಶರಣರ ಸ್ಮಾರಕಗಳಿದ್ದು ಇಲ್ಲಿ ರೇವಣಸಿದ್ದೇಶ್ವರ ಗುಡಿಯೂ ಇದೆ. ಇಲ್ಲಿಂದ ಸುಮಾರು ಇಪ್ಪತ್ತು ಕಿ.ಮೀ. ದೂರದಲ್ಲಿ ಪೂರ್ವಕ್ಕೆ ರಟಕಲ್ಲ ಗ್ರಾಮವಿದ್ದು, ಅಲ್ಲಿ ರೇವಣಸಿದ್ದೇಶ್ವರರ ಒಂದು ಮಠವಿದೆ. ಅದು ಅವರು ಅನುಷ್ಠಾನ ಮಾಡಿದ ಸ್ಥಳ ಎನ್ನುತ್ತಾರೆ. ಮಠದ ಎದುರಿಗೆ ರೇವಣಸಿದ್ಧರು ಬಳಸಿದ ಒಂದು ಗಾಣದ ಕಲ್ಲು (ಗಾಣಬರಿ) ಇವತ್ತಿಗೂ ಇದೆ. ಈ ಭಾಗದಲ್ಲಿ ರೇವಣಸಿದ್ಧರು 'ರಟಕಲ್ಲ ರೇವಣಸಿದ್ಧ' ಎಂದೇ ಪ್ರಸಿದ್ಧರಾಗಿದ್ದಾರೆ. ಇಲ್ಲಿಂದ ಸುಮಾರು ೧೨ ಕಿ.ಮೀ. ದೂರದಲ್ಲಿ ಕಮರಿಮಠ, ರೇವಣಗಿರಿಗಳಿವೆ. ರೇವಣಗಿರಿಯಲ್ಲಿರುವ ರೇವಣಸಿದ್ದೇಶ್ವರ ದೇವಾಲಯ ಪ್ರಸಿದ್ಧವಾಗಿದೆ. ಇಲ್ಲಿಂದ ಮುಂದೆ ಅವರು ಕಲ್ಯಾಣದ ಕಡೆ ಹೊರಟುಹೋದರೆಂದು ಹೇಳಲಾಗುತ್ತದೆ.

೮. ಬಸವಕಲ್ಯಾಣದ ತ್ರಿಪುರಾಂತಕ ಕೆರೆಯನ್ನು ರೇವಣಸಿದ್ಧರೇ ಅಗೆಸಿದರು ಎನ್ನಲಾಗುತ್ತದೆ. ಈ ಕೆರೆಯ ಪಶ್ಚಿಮ ದಡದಲ್ಲಿ, ಈಗಿನ ಅನುಭವ ಮಂಟಪದ ದಾಸೋಹ ಮನೆಯ ಹಿಂದುಗಡೆ, ತ್ರಿಪುರಾಂತಕ ಕೆರೆಯ ದಂಡೆಯ ಮೇಲೆ ರೇವಣಸಿದ್ಧ ಹಾಗೂ ಅವರ ಮಗ ರುದ್ರಮುನಿಗಳ ಹೆಸರಿಗೆ ಒಂದು ದೊಡ್ಡ ಮಠ-ಗವಿ ಇರುವುದು ಗಮನಾರ್ಹ.

೯. ರೇವಣಸಿದ್ಧರು ಹೀಗೆ ಬಸವಕಲ್ಯಾಣದಲ್ಲಿ ಬಸವಣ್ಣನವರ ಚಿಂತನೆಗಳಿಗೆ ಮಾರುಹೋಗಿ ಕೆಲದಿನಗಳವರೆಗೆ ಇದ್ದರೆಂದು ತೋರುತ್ತದೆ. ಮಗ ರುದ್ರಮುನಿಯು ಬಸವಣ್ಣನವರ ಅನುಯಾಯಿಯಾಗಿ ಪರಿವರ್ತನೆ ಹೊಂದಿರುವುದೂ ಇದಕ್ಕೆ ಮುಖ್ಯ ಕಾರಣ ಆಗಿರಬಹುದು. ರೇವಣಸಿದ್ಧರು ಸದಾ ಸಂಚಾರದಲ್ಲಿ ಇರುವವರೇ ಆದುದರಿಂದ ಬಸವಕಲ್ಯಾಣದ ಸುತ್ತಮುತ್ತ ಕಲಬುರಗಿಯವರೆಗೆ ಹಾಗೂ ಕಲಬುರಗಿ ಸುತ್ತಮುತ್ತ ರೇವಣಸಿದ್ಧರು ಸದಾ ಅಡ್ಡಾಡಿದಂತೆ ಕುರುಹುಗಳು ದೊರೆಯುತ್ತವೆ. ಈ ಭಾಗದ

ಅನೇಕ ಗ್ರಾಮಗಳಲ್ಲಿ ರೇವಣಸಿದ್ಧರ ಪುರಾತನ ಗುಡಿಗಳು ನಮಗೆ ನೋಡಲು ದೊರೆಯುತ್ತವೆ. ಬಸವಕಲ್ಯಾಣದಿಂದ ದಕ್ಷಿಣಕ್ಕೆ ಮಂಠಾಳ, ಸಲಗರ ಹೀಗೆ ಅನೇಕ ಗ್ರಾಮಗಳಲ್ಲಿ ರೇವಣಸಿದ್ಧರ ಗುಡಿಗಳಿವೆ. ರೇವಣಸಿದ್ಧರು ಅಲ್ಲಮಪ್ರಭುಗಳೊಂದಿಗೆ ತಿರುಗಾಡಿದ ಹಲವಾರು ನಿಶಾನೆಗಳನ್ನು ಈ ಭಾಗದ ಗ್ರಾಮಗಳಲ್ಲಿರುವ ಸ್ಮಾರಕಗಳು ಹೇಳಿಕೊಡುತ್ತವೆ. ಕಲಬುರಗಿ ಹಾಗೂ ಆಳಂದ ಈ ನಗರ ಪ್ರದೇಶಗಳ ನಡುವಿನ ಹುಣಸಿ ಹಡಗಿಲ, ಮಾಡ್ಯಾಳ, ಜಿರೋಳಿ ಹಾಗೂ ಹೆಬಳಿ ಗ್ರಾಮಗಳಲ್ಲಿ ಅಲ್ಲಮನೊಂದಿಗೆ ರೇವಣಸಿದ್ಧರು ಇದ್ದ ಗುಡಿಗಳು ನಮಗೆ ಸಾಕ್ಷಿಯಾಗಿ ದೊರೆಯುತ್ತವೆ.

೧೦. ಕಲ್ಯಾಣದಲ್ಲಿ ಕ್ರಾಂತಿಯಾದ ನಂತರ ಶರಣರು ಉಳವಿಯೆಡೆಗೆ ಹೋಗುವಾಗ ರೇವಣಸಿದ್ಧ ಮತ್ತು ರುದ್ರಮುನಿಗಳು ಚೆನ್ನಬಸವಣ್ಣನವರ ತಂಡದೊಂದಿಗೆ ಇದ್ದರೆಂಬುದಕ್ಕೆ ಕಲಬುರಗಿ ಜಿಲ್ಲೆಯ ಜೇವರ್ಗಿ ತಾಲೂಕಿನ ಜೇರಟಗಿ, ಬಳುಂಡಗಿ ಗ್ರಾಮಗಳಲ್ಲಿ ಚೆನ್ನಬಸವಣ್ಣ, ಮಡಿವಾಳ ಮಾಚಿದೇವ, ಸಿದ್ಧರಾಮೇಶ್ವರ ಮುಂತಾದ ಶರಣರ ಜೊತೆಗೆ ರೇವಣಸಿದ್ಧರ ಸ್ಮಾರಕಗಳೂ ಕಂಡುಬರುತ್ತವೆ. ರುದ್ರಮುನಿಯಂತೂ ಬೆಳಗಾವಿ ಜಿಲ್ಲೆಯ ಕಾದರೊಳ್ಳಿ ಮಗ್ಗುಲಿನ ಹುಣಸಿಕಟ್ಟಿ ಗ್ರಾಮದವರೆಗೆ ಹೋಗಿರುವುದನ್ನು ಸ್ಮಾರಕಗಳು ಸ್ಪಷ್ಟಪಡಿಸುತ್ತವೆ. ಜೇವರ್ಗಿ ತಾಲೂಕಿನ ಜೇರಟಗಿಯಿಂದ ತಿರುಗಿ ರೇವಣಸಿದ್ಧರು ಎಲ್ಲಿಗೆ ಹೋದರು? ಎಂಬ ಬಗ್ಗೆ ನಮಗೆ ಸ್ಪಷ್ಟವಾಗುತ್ತಿಲ್ಲ. ಈ ಬಗೆಗೆ ಹೆಚ್ಚಿನ ಶೋಧಗಳು ನಡೆಯಬೇಕು.

**ವಚನಕಾರ ರೇವಣಸಿದ್ಧ**

ರೇವಣಸಿದ್ಧರು ವಚನಗಳನ್ನೂ ಬರೆದಿದ್ದಾರೆ ಎಂದು ಡಾ. ಎಂ. ಚಿದಾನಂದ ಮೂರ್ತಿ ಅವರು 'ಮುಕ್ತಿಕಂಠಾಭರಣ' ಎಂಬ ವಚನ ಸಂಗ್ರಹದಲ್ಲಿ ಪ್ರಕಟವಾಗಿರುವ ಒಂದು ವಚನವನ್ನು ಆಯ್ದು ಕೊಡುತ್ತಾರೆ.

ಆದವಲ್ಲ ದಶದಿಕ್ಕಿನಲ್ಲಿ ದಶನಾದಂಗಳು
ಆದವಲ್ಲ ಪುಷ್ಪವೃಷ್ಟಿ ಕಲ್ಯಾಣಪುರದಲ್ಲಿ
ಆಯಿತಲ್ಲ ಸರ್ವ ಗಣಂಗಳಿಗತ್ಯಾನಂದ
ಇನ್ನು ಬಾರನೆ ತ್ರಿಪುರಾಂತಕ ಸೋಮಲಿಂಗ ಚನ್ನಬಸವಯ್ಯನು.

ತ್ರಿಪುರಾಂತಕ ಕೆರೆ ರೇವಣಸಿದ್ಧ ನಿರ್ಮಿಸಿದ್ದು ಮತ್ತು ಅವರು ಸೋಮೇಶ್ವರ ಭಕ್ತರು ಎಂಬ ಸಂಗತಿಗಳು, ಡಾ. ಚಿದಾನಂದ ಮೂರ್ತಿಗಳು ಈ ವಚನ ರೇವಣ ಸಿದ್ಧರದೆಂದು ನಿರ್ಣಯಿಸಲು ಕಾರಣಗಳಾಗಿವೆ. 'ಅವನಿಗೆ ಬಹುಜನ ಪತ್ನಿಯರಿದ್ದರು ಎಂಬುದು ಬಹುಶಃ ಒಂದು ವಾಸ್ತವ' (ರೇವಣಸಿದ್ಧ: ಹಿನ್ನೆಲೆ–ಮುನ್ನೆಲೆ, ಪು.೧೫) ಎನ್ನುವ ಡಾ. ಚಿದಾನಂದ ಮೂರ್ತಿ ಅವರು ವೇದ ಕಂಚುಕಿ, ಸೌಂದರ ದೇವಿ, ಶಾಂಭವಿ ಈ ಮೂವರ ಹೆಸರಿಗೆ ಒಂದೊಂದು ವಚನವನ್ನು ಆಯ್ದುಕೊಟ್ಟು, "ರೇವಣಸಿದ್ಧ ಮತ್ತು ಅವನ ಪತ್ನಿಯರ ವಚನಗಳ ನೈಜತೆ ಬಗ್ಗೆ ಹಿಂದೆ ನಾನು ಸ್ವಲ್ಪ ಸಂದೇಹವನ್ನು ಉಳಿಸಿಕೊಂಡಿದ್ದೆ; ಆದರೆ ಈಚೆಗೆ ಆ ಸಂದೇಹವನ್ನು ಕೈ ಬಿಟ್ಟಿದ್ದೇನೆ.

ಅವು ಖೋಟಾ ವಚನಗಳು ಎಂಬುದನ್ನು ಸಾಬೀತು ಮಾಡುವ ಸಾಕ್ಷ್ಯಾಧಾರಗಳಿಲ್ಲ" (ಅದೇ, ಪು. ೧೬) ಎಂದು ಡಾ. ಎಂ. ಚಿದಾನಂದಮೂರ್ತಿಗಳು ಅಭಿಪ್ರಾಯ ಪಟ್ಟಿದ್ದಾರೆ.

'ರೇವಣಸಿದ್ಧಯ್ಯಗಳ ಪುಣ್ಯಸ್ತ್ರೀ ರೇಕಮ್ಮನ ಲಭ್ಯ ಏಕೈಕ ವಚನ'
ಲಿಂಗ ಬಾಹ್ಯನ ಆಚಾರ ಭ್ರಷ್ಟನ ವ್ರತ ತಪ್ಪುಕನ
ಗುರುಲಿಂಗ ಜಂಗಮನ ಕೊಂದವನ,
ಪಾದೋದಕ ಪ್ರಸಾದ ದೂಷಕನ
ವಿಭೂತಿ ರುದ್ರಾಕ್ಷಿ ನಿಂದಕನ ಕಂಡಡೆ
ಶಕ್ತಿಯುಳ್ಳಡೆ ಸಂಹಾರವ ಮಾಡುವುದು
ಶಕ್ತಿಯಿಲ್ಲದಿದ್ದಡೆ ಕಣ್ಣು ಕರ್ಣವ ಮುಚ್ಚಿಕೊಂಡು ಶಿವಮಂತ್ರವ ಜಪಿಸುವುದು
ಅಷ್ಟೂ ಆಗದಿದ್ದಡೆ ಆ ಸ್ಥಳವ ಬಿಡುವುದು
ಅದಿಲ್ಲದಿದ್ದಡೆ ಕುಂಭೀಪಾತಕ ನಾಯಕ ನರಕದಲ್ಲಿರವು ಶ್ರೀಗುರು ಸಿದ್ದೇಶ್ವರನು

ಡಾ. ಎಂ. ಚಿದಾನಂದ ಮೂರ್ತಿ ಅವರು 'ಇದು ಸಿದ್ಧಪುರುಷ ರೇವಣಸಿದ್ಧನ ಪುಣ್ಯಸ್ತ್ರೀಯ ವಚನ ಎಂಬಲ್ಲಿ ಅನುಮಾನವಿಲ್ಲ' ಎಂದು ಬರೆದು, 'ರೇಕಮ್ಮನು ರೇವಣಸಿದ್ಧನ ವಿಧ್ಯುಕ್ತ ಪತ್ನಿ ಅಲ್ಲ. ಅವಳು ಕಾವ್ಯಗಳಲ್ಲಿ ಬರುವ ಮಾಯಿದೇವಿ ಎಂಬ ದೇವದಾಸಿಯ ಮಗಳು ರೇವಣದೇವಿ ಇರಬಹುದು. ...ಬಿಜ್ಜಳನು ರೇವಣದೇವಿಯನ್ನು ಕೆರೆಗೆ ಬಲಿಕೊಡಲು ಸಿದ್ಧನಾದಾಗ ಅವಳನ್ನು ಅವರಿಂದ ತಪ್ಪಿಸಿ ರೇವಣನು ಅವಳನ್ನೇ ಪುಣ್ಯಸ್ತ್ರೀಯಾಗಿ ಪರಿವರ್ತಿಸಿ ಬಳಸಿಕೊಂಡಿರುವ ಸಾಧ್ಯತೆಗಳಿವೆ' (ಪು. ೧೮) ಎಂದು ಬರೆದಿದ್ದಾರೆ.

ಹರಿಹರನ ಪ್ರಕಾರ ಮಾಯಿದೆವಿಯಲ್ಲಿ ರೇವಣಸಿದ್ಧನಿಗೆ ಹುಟ್ಟಿದ ಮಗಳು ಚೆನ್ನರೇವಣದೇವಿ. ರೇಕಮ್ಮ ಅಥವಾ ರೇವಣದೇವಿ ರೇವಣಸಿದ್ಧರ ಮಗಳಾಗಿದ್ದಾಳೆ. 'ಶ್ರೀಗುರು ಸಿದ್ದೇಶ್ವರಾ' ಎನ್ನುವಲ್ಲಿ ತಂದೆಗೆ ಗುರುವೆಂದು ಸ್ವೀಕರಿಸಿರುವುದು ಸಹಜವೆನಿಸುತ್ತದೆ. ಅದಕ್ಕಾಗಿ ರೇವಣಸಿದ್ಧ ಹಾಗೂ ಮಾಯಿದೇವಿ ಇವರಿಗೆ ಜನಿಸಿದ ಮಗಳೇ ರೇಕಮ್ಮ/ರೇವಣದೇವಿ. ಡಾ. ಚಿದಾನಂದ ಮೂರ್ತಿ ಅವರು ರೇವಣಸಿದ್ಧರ ಮಗಳನ್ನು ಅವರ ಹೆಂಡತಿಯೆಂದು ಗ್ರಹಿಸಿದ್ದು ತಪ್ಪಾಗಿದೆ.

**ರೇವಣಸಿದ್ಧೇಶ್ವರರ ಕಾಲ**

ರೇವಣಸಿದ್ಧನ ರಗಳೆಯನ್ನು ನಾವು ಗಮನಿಸಿದರೆ, ಕರ್ನಾಟಕದ ಚಾಲುಕ್ಯ ಮತ್ತು ಕಳಚುರಿ ವಂಶದ ಅರಸರಲ್ಲಿ ಕೆಲವರನ್ನು ರೇವಣಸಿದ್ಧ ಭೇಟಿ ಮಾಡಿದ ಸಂಗತಿಗಳನ್ನು ಹರಿಹರ ಉಲ್ಲೇಖಸುತ್ತಾನೆ. ಅದನ್ನು ಗಮನಿಸಿದರೆ, ಆತ ಭೇಟಿ ಮಾಡಿದ ಪ್ರಮುಖರಲ್ಲಿ ೬ನೇ ವಿಕ್ರಮಾದಿತ್ಯ (ಕ್ರಿ.ಶ. ೧೦೭೬-೧೧೨೭), ಕಳಚುರಿಯ ಬಿಜ್ಜಳ (೨ನೇ) (ಕ್ರಿ.ಶ. ೧೧೩೦-೧೧೬೭) ಪ್ರಮುಖರಾಗಿದ್ದಾರೆ. ಸಿದ್ಧರಾಮನ ಜನನದ ಸೂಚನೆ ಕೊಟ್ಟಿದ್ದಾರೆ. ಶರಣ ಹಾವಿನಹಾಳ ಕಲ್ಲಯ್ಯನಿಗೆ ತನ್ನ ಮಗ ಎಂಟು

ವರ್ಷದ ರುದ್ರಮುನಿಯಿಂದ ಶೈವದೀಕ್ಷೆ ಕೊಡಿಸಿದ್ದಾರೆ. ಇದನ್ನು ಗಮನಿಸಿದರೆ ೬ನೇ ವಿಕ್ರಮಾದಿತ್ಯನಿಂದ ಬಸವಣ್ಣನವರವರೆಗಿನ ಕಾಲದಲ್ಲಿ ರೇವಣಸಿದ್ಧರು ಬದುಕಿದ್ದಾರೆ ಎಂದಂತಾಯಿತು. ೬ನೇ ವಿಕ್ರಮಾದಿತ್ಯನಕ್ಕಿಂತಲೂ ಹಿಂದಿನವರನ್ನು ರೇವಣಸಿದ್ಧ ಭೇಟಿಯಾಗಿಲ್ಲ. ಹೀಗಾಗಿ ೬ನೇ ವಿಕ್ರಮಾದಿತ್ಯ ಹಾಗು ವಿಕ್ರಮಾದಿತ್ಯನ ಮಗಳ ಮಗನಾದ ೨ನೇ ಬಿಜ್ಜಳ ಇವರ ಅವಧಿಗಳಲ್ಲಿ ರೇವಣಸಿದ್ಧರು ಬದುಕಿದ್ದರೆಂಬುದು ಸ್ಪಷ್ಟವಾಗುತ್ತದೆ.

ರೇವಣಸಿದ್ಧ ಮತ್ತು ಆತನ ಗುರು/ತಂದೆಯನ್ನು ಉಲ್ಲೇಖಿಸುವ ಸಿರವಾಳ ಹಾಗೂ ಹೋತಗಲ್ಲ ಶಾಸನಗಳನ್ನು ಗಮನಿಸಿ ರೇವಣಸಿದ್ಧರ ಕಾಲವನ್ನು ನಿರ್ಣಯಿಸಲು ಡಾ. ಎಂ.ಎಂ.ಕಲಬುರ್ಗಿ ಅವರು ಪ್ರಯತ್ನಿಸಿದ್ದಾರೆ.

೧. ಕಕ್ಕೇರಿ ಕ್ರಿ.ಶ. ೧೧೨೭ ರೇವಣಸಿದ್ಧದೇವರ ಶಿಷ್ಯ ಬ್ರಹ್ಮರಾಸಿಪಂಡಿತನ ಉಲ್ಲೇಖ.

೨. ಸಿರವಾಳ ಕ್ರಿ.ಶ. ೧೧೭೦ [ಶಾಂತಿಮಯ್ಯಗಳ] ಪುತ್ರ ...ಸಿದ್ಧರೇವಣನೆಂಬ ಉಲ್ಲೇಖ.

೩. ಹೋತಗಲ್ಲ ಕ್ರಿ.ಶ. ೧೧೭೫ ಶಾಂತಿಮಯ್ಯ ಮತ್ತು ಸಿದ್ಧರೇವಣಯ್ಯಗಳ ಉಲ್ಲೇಖ.

೪. ಸಿರವಾಳ ಕ್ರಿ.ಶ. ೧೧೮೭ ಶಾಂತೀಶ್ವರ ದೇವಸ್ಥಾನಕ್ಕಾಗಿ ಪುತ್ರರೇವಣಯ್ಯನಿಗೆ ದಾನ.

೫. ಹೋತಗಲ್ಲ ಕ್ರಿ.ಶ. ೧೨೦೮ ರೇವಣೇಶ್ವರ ಪೂಜೆಗಾಗಿ ಆಚಾರ್ಯನಾಗರಾಸಿಗೆ ದಾನ.

ಈ ಮೇಲಿನ ಶಾಸನಗಳ ಸಹಾಯದಿಂದ ಡಾ. ಎಂ.ಎಂ.ಕಲಬುರ್ಗಿ ಅವರು ಸುದೀರ್ಘವಾಗಿ ಚರ್ಚಿಸಿ ಈ ನಿರ್ಧಾರಕ್ಕೆ ಬರುತ್ತಾರೆ : "ಕಕ್ಕೇರಿ ಶಾಸನದ ಪ್ರಕಾರ ೧೧೨೭ರಲ್ಲಿ ಬ್ರಹ್ಮರಾಸಿ ಪಂಡಿತನು ಶಿಷ್ಯನಾಗಿರಬೇಕಾದರೆ, ಗುರು ರೇವಣಸಿದ್ಧನ ಜನನ ಕಾಲ ೧೧ನೆಯ ಶತಮಾನದ ಕೊನೆಯ ದಶಕವಾಗಿರಬಹುದು. ಇವನು ಕಕ್ಕೇರಿ ಶಾಸನ (೧೧೨೭), ಸಿರಿವಾಳ ಶಾಸನ (೧೧೭೦), ಹೋತಗಲ್ಲ ಶಾಸನ (೧೧೭೫) ಮತ್ತು ಸಿರಿವಾಳ ಶಾಸನ ೧೧೮೭ಗಳ ಕಾಲದಲ್ಲಿ ಬದುಕಿ, ಹೋತಗಲ್ಲ ಶಾಸನ (೧೨೦೮) ಹೊತ್ತಿಗೆ ತೀರಿಹೋಗಿದ್ದುದರಿಂದ, ಮರಣಕಾಲ ೧೨ನೇಯ ಶತಮಾನದ ಕೊನೆಯ ದಶಕವಾಗಿರಬಹುದು. ಅಂದರೆ ರೇವಣಸಿದ್ಧನು ೧೧ನೆಯ ಶತಮಾನದ ಕೊನೆಯ ದಶಕದಲ್ಲಿ ಹುಟ್ಟಿ, ೧೨ನೆಯ ಶತಮಾನದ ಕೊನೆಯ ದಶಕದಲ್ಲಿ ನಿಧನ ಹೊಂದಿರಬಹುದು" (ಮಾರ್ಗ-೪, ಪು.೩೮೫).

ರೇವಣಸಿದ್ಧರು ದೀರ್ಘಾಯುಷ್ಯ ಹೊಂದಿದವರು ಎನ್ನಲಾಗುತ್ತದೆ. ಅವರು ಕನಿಷ್ಠ ೧೧೦ರಿಂದ ೧೨೦ ವರ್ಷ ಬದುಕಿರಬಹುದು. ೧೧೮೭ರಲ್ಲಿ ಅವರು

ಸಿರವಾಳದಲ್ಲಿ ತನ್ನ ಗುರು ಸಿದ್ಧಲಿಂಗೇಶ್ವರರ ದೇವಾಲಯದಲ್ಲಿ ಸ್ಥಾನಾಚಾರಿಯಾಗಿ ಇರುವುದನ್ನು ಶಾಸನ ಹೇಳುತ್ತಿದೆ. ಹೀಗಾಗಿಯೇ ಅವರ ಪಾದತೊಳೆದು ದತ್ತಿ ಬಿಡುವ ವಿಷಯ ಅಲ್ಲಿದೆ. ಅಂದರೆ ೧೧೮೭ರ ಶಾಸನದ ಹೊತ್ತಿಗೆ ರೇವಣಸಿದ್ಧರಿಗೆ ಸಾಕಷ್ಟು ವಯಸ್ಸಾಗಿದೆ. ೧೧೮೭ರ ಸಿರವಾಳ ಶಾಸನಕ್ಕೂ ೧೨೦೮ರ ಹೋತಗಲ್ಲ ಶಾಸನಕ್ಕೂ ೨೧ ವರ್ಷಗಳ ಅಂತರವಿದೆ. ಬಹುಶಃ ಮುಪ್ಪಾವಸ್ಥೆಯಲ್ಲಿ ರೇವಣಸಿದ್ಧರು ಸಿರವಾಳ ಮತ್ತು ಹೋತಗಲ್ಲಗಳಲ್ಲಿ ಅಡ್ಡಾಡುತ್ತ ಇದ್ದರೆಂದು ಊಹಿಸಲು ಸಾಧ್ಯವಿದೆ. ಏಕೆಂದರೆ ರೇವಣಸಿದ್ಧರನ್ನು ಉಲ್ಲೇಖಿಸುವ ಶಾಸನಗಳೆಲ್ಲ ಒಂದೇ ಪ್ರದೇಶದಲ್ಲಿ ದೊರೆಯುತ್ತಿವೆ. ೧೧೭೦ ಮತ್ತು ೧೧೮೭ರ ಸಿರವಾಳ ಶಾಸನಗಳು, ಹಾಗೂ ೧೧೭೫ ಮತ್ತು ೧೨೦೮ರ ಹೋತಗಲ್ಲ ಶಾಸನಗಳು ರೇವಣಸಿದ್ಧರನ್ನು ಉಲ್ಲೇಖಿಸುತ್ತಿದ್ದು, ಹೋತಗಲ್ಲಿನ ೧೨೦೮ರ ಶಾಸನವಂತೂ– 'ರೇವಣೇಸ್ವ(ಶ್ವ)ರ ಗಂಗೇಸ್ವರ(ಶ್ವ)ರ ನಾಗೇಸ್ವ(ಶ್ವ)ರದ ನಿತ್ತ್ಯಪೂಜೆ ನಂದಾದೀವಿಗೆ ಚೈತ್ರ ಪಯಿತ್ರಕವೆಂದಾ ದೇವರಾಚಾರ್ರ್ಯ ನಾಗರಾಸಿಪಂಡಿತದೇವರ ಕಾಲಂ ಕರ್ಚ್ಚಿ ಧಾರಾಪೂರ್ವ್ವಕಂ ಮಾಡಿ ಸರ್ವನಮಶ್ಯವಾಗಿ ತ್ರಿಕೂಟಕಂ ಬಿಟ್ಟರು' (ಕ.ಜಿ.ಶಾ. ಪು. ೪೬೨) ಎಂದು ಹೇಳುವುದರಿಂದ ರೇವಣಸಿದ್ಧರು ಲಿಂಗೈಕ್ಯರಾಗಿರಬಹುದಾದುದನ್ನು ಈ ಶಾಸನ ಸೂಚಿಸುತ್ತಿದೆ.

**ಶರಣ ರೇವಣಸಿದ್ಧರು ಮಂಗಳವೇಡೆ ಭಾಗದವರು**

ರೇವಣಸಿದ್ಧರಿಗೆ ಸಂಬಂಧಿಸಿದ ಸ್ಥಳಗಳನ್ನು ಮಂಗಳವೇಡೆಯಿಂದ ಕೊಲ್ಲಿಪಾಕಿಯ ವರೆಗೆ ಕ್ಷೇತ್ರಕಾರ್ಯ ಮಾಡಿ, ಸ್ಥಳಗಳನ್ನು ಪರಿಶಿಲಿಸಿದ ಅನುಭವದಿಂದ ಹೇಳುವುದಾದರೆ ಕೊಲ್ಲಿಪಾಕಿ ಶರಣ ರೇವಣಸಿದ್ಧರ ಹುಟ್ಟೂರು ಆಗಿರದೆ ಅದು ರೇವಣಸಿದ್ಧರ ಕಾರ್ಯಕ್ಷೇತ್ರವಾಗಿರಬಹುದು ಎನಿಸುತ್ತದೆ. ಅದರ ಕುರುಹುಗಳಾಗಿ ರೇವಣಸಿದ್ಧರು ನಿರ್ಮಿಸಿದರೆಂದು ಹೇಳುವ ೧೮ ಮಠಗಳು ನಮಗೆ ಕೊಲ್ಲಿಪಾಕಿಯಲ್ಲಿ ಸಾಕ್ಷಿಯಾಗಿ ದೊರೆಯುತ್ತವೆ. ಸೋಮೇಶ್ವರ ದೇವಾಲಯದ ಉಲ್ಲೇಖವಾಗುವುದು ೧೦೭೬ರ ಒಂದು ಕೊಲ್ಲಿಪಾಕಿ ಶಾಸನದಲ್ಲಿ. ಆದುದರಿಂದ ಈ ದೇವಾಲಯದ ನಿರ್ಮಾಣ ಕಲ್ಯಾಣ ಚಾಲುಕ್ಯರ ಕಾಲದ್ದಾಗುತ್ತದೆ. ಹೀಗಾಗಿ ೩೫೦೦ ವರ್ಷಗಳ ಹಿಂದಿನ ಜ. ಆದಿ ರೇಣುಕರ ಕಾಲಕ್ಕೆ ಕೊಲ್ಲಿಪಾಕಿ ಸೋಮೇಶ್ವರ ದೇವಾಲಯದ ಅಸ್ತಿತ್ವದ ಬಗ್ಗೆ ಸಂಶಯ ಉಳಿದುಕೊಳ್ಳುತ್ತದೆ. ೧೨ನೇ ಶತಮಾನದ ಶರಣ ರೇವಣಸಿದ್ಧರಂತೂ ಕೊಲ್ಲಿಪಾಕಿ ಗ್ರಾಮದವರೆಂದು ಹೇಳಲು ಆಧಾರಗಳು ಸಾಲವು.

ರೇವಣಸಿದ್ಧರು ಕಲಚೂರಿ ವಂಶದವರ ಮೂಲ ಗ್ರಾಮವಾದ ಮಂಗಳವೇಡೆಯ ಭಾಗದವರಾಗಿರಬಹುದಾಗಿದೆ ಎಂದು ಹೇಳಲು ನಮಗೆ ಹಲವಾರು ಸಂಗತಿಗಳು ದೊರೆಯುತ್ತವೆ. ರೇವಣಸಿದ್ಧರು ಪ್ರೀತಿಸಿದ ದೇವದಾಸಿ ಮಾಯಿದೇವಿ ಮಂಗಳವೇಡೆಯವಳು. ಅವಳ ಮಗಳು ಚೆನ್ನರೇವಣದೇವಿ ಜನಿಸಿದ್ದು, ದೊಡ್ಡವಳಾದದ್ದು ಮಂಗಳವೇಡೆಯಲ್ಲಿಯೆ. ಚೆನ್ನರೇವಣದೇವಿಯನ್ನು ಕೆರೆಗೆ ಹಾರ ಕೊಡಲು ನಿಂತಾಗ, ವಿಷಯ ತಿಳಿದು ಬಂದ ರೇವಣಸಿದ್ಧರು ಮಂಗಳವೇಡೆಗೆ ಬಂದು ಆಕೆಯನ್ನು, ಜೊತೆಗೆ ಹಾರಕೊಡಲು ಹಿಡಿತಂದ ಅನೇಕ ಕನ್ಯೆಯರನ್ನು ಬಿಡಿಸಿದ್ದು ಮಂಗಳವೇಡೆ

ಯಲ್ಲಿಯೇ. ರೇವಣಸಿದ್ಧರ ಮಗ ರುದ್ರಮುನಿ ಜನಿಸಿದ್ದು ಮಂಗಳವೇಡೆಯಲ್ಲಿಯೆ. ಈ ಮಗ ಎಂಟು ವರ್ಷದವನಿದ್ದಾಗ ಆತನಿಗೆ ಶಿವದೀಕ್ಷೆಯನ್ನು ಸ್ವತಃ ತಾವೇ ಕೊಟ್ಟದ್ದು ಮಂಗಳವೇಡೆಯಲ್ಲಿಯೆ. ರೇವಣಸಿದ್ಧರು ೨ನೇ ಬಿಜ್ಜಳನನ್ನು ಭೇಟಿಯಾದದ್ದು ಮಂಗಳವೇಡೆಯಲ್ಲಿಯೆ. ಮಂಗಳವೇಡೆಯಲ್ಲಿ ರೇವಣಸಿದ್ಧರು ನಿರ್ಮಿಸಿದರೆಂದು ಹೇಳುವ ಒಂದು ಕೆರೆ (ಕೃಷ್ಣಕೆರೆ?) ಇದೆ. ಮಂಗಳವೇಡೆಯ ಕೋಟೆಯ ಮಗ್ಗುಲಲ್ಲಿಯೇ ರೇವಣಸಿದ್ಧರ ದೇವಾಲಯವೂ ಒಂದಿದೆ.

ಮಂಗಳವೇಡೆಯ ಸುತ್ತಮುತ್ತಲೇ ರೇವಣಸಿದ್ಧರು ಓಡಾಡಿದ ಸ್ಥಳಗಳೆಲ್ಲ ಇರುವುದು. ಅವರು ಸುರಗಿ ಪವಾಡ ಮಾಡಿರುವುದು ಮಂಗಳವೇಡೆಯಿಂದ ಕೇವಲ ೧೫ ಕಿ.ಮೀ. ದೂರದಲ್ಲಿ, ಸೋಲಾಪುರ ರಸ್ತೆಯಲ್ಲಿರುವ ಮಾಸನೂರಿನ ಸೋಮೇಶ್ವರ ದೇವಾಲಯದ ಮಗ್ಗುಲಿಗೆ ಹರಿಯುವ ಭೀಮಾ ನದಿಯ ಮಡುವಿನಲ್ಲಿ. ಅವರು ಆ ಖಡ್ಗವನ್ನು ಬಿಜ್ಜಳನಿಗೆ ತೆಗೆದು ತೋರಿಸಿದ್ದೂ ಮಾಸನೂರಿನಲ್ಲಿಯೇ. ಇಲ್ಲಿಂದ ಮುಂದೆ ಸಿದ್ಧರಾಮನ ಸೊಲ್ಲಾಪುರ ಇರುವುದು ಕೇವಲ ೩೫ ಕಿ.ಮೀ. ಅಂತರದಲ್ಲಿ. ಈ ಪುಣ್ಯಭೂಮಿಯಲ್ಲಿ ಪುಣ್ಯಪುರುಷನೊಬ್ಬ (ಶರಣ ಸಿದ್ಧರಾಮ) ಜನಿಸುವ ಸೂಚನೆಯರಿತು, ರೇವಣಸಿದ್ಧರು ಪಲ್ಲಕ್ಕಿಯಿಂದ ಇಳಿದು ಭೂಮಿಗೆ ನಮಸ್ಕರಿಸಿದ ಸ್ಥಳದಲ್ಲಿ ದೊಡ್ಡದಾದ ರೇವಣಸಿದ್ಧರ ದೇವಾಲಯವೊಂದು ನಿರ್ಮಾಣವಾಗಿದೆ. ಮಂಗಳವೇಡೆಯಿಂದ ನೈರುತ್ಯಕ್ಕೆ ೧೫ ಕಿ.ಮೀ. ದೂರದಲ್ಲಿರುವ ಸಿದ್ಧನಕೆರೆ ಎಂಬ ಗ್ರಾಮದಲ್ಲಿ ರೇವಣಸಿದ್ಧರು ನಿರ್ಮಿಸಿದ ಕೆರೆ, ಮಂದಿರಗಳು ಇರುವುದು ಪ್ರಮುಖ ಸಂಗತಿಗಳಾಗಿ ತೋರುತ್ತವೆ. ಮಂಗಳವೇಡೆಯ ಪೂರ್ವದಲ್ಲಿ ಮತ್ತೆ ಕೇವಲ ೧೫ ಕಿ.ಮೀ. ದೂರದಲ್ಲಿ ಹಾವಿನಹಾಳ ಗ್ರಾಮವಿದೆ. ತನ್ನ ಎಂಟುವರ್ಷದ ಮಗ ರುದ್ರಮುನಿಯಿಂದ ಶರಣ ಕಲ್ಲಯ್ಯನಿಗೆ ಶಿವದೀಕ್ಷೆ ಕೊಡಿಸಿದ್ದು ಈ ಹಾವಿನಹಾಳದಲ್ಲಿಯೆ ಎಂಬ ಸಂಗತಿಯನ್ನು ಹರಿಹರನು ರೇವಣಸಿದ್ಧ ರಗಳೆಯಲ್ಲಿ ಉಲ್ಲೇಖಿಸುತ್ತಾನೆ.

ಇವೆಲ್ಲ ಸಂಗತಿಗಳನ್ನು ನೋಡಿದರೆ, ರೇವಣಸಿದ್ಧರು ಮಂಗಳವೇಡೆಯವರು ಅಥವಾ ಈ ಭಾಗದ ಸುತ್ತಮುತ್ತಲಿನ ಗ್ರಾಮದವರು ಎಂಬುದು ಸ್ಪಷ್ಟವಾಗುತ್ತದೆ. ಅವರು ಸೋಮೇಶ್ವರನ ಭಕ್ತರಾಗಿದ್ದು, ಮಾಸನೂರಿನ ಸೋಮೇಶ್ವರನಿಂದ ಕೊಲ್ಲಿಪಾಕಿ ಸೋಮೇಶ್ವರನವರೆಗೆ ಅಡ್ಡಾಡಿದಂತಿದೆ. ಹಲವಾರು ಸಲ ಸೋಮೇಶ್ವರನ ದರ್ಶನಕ್ಕೆಂದು ಕೊಲ್ಲಿಪಾಕಿಗೆ ಹೋಗಿರುವ ಸಾಧ್ಯತೆಯೂ ಇದೆ.

**ಸಹಾಯ:** ಸೋಮಯ್ಯ ಗೌಂಡ್ಲಮಠಂ(ಸೋಮೇಶ್ವರ ಪೂಜಾರಿ), ಮೊ. ೯೮೪೮೩೦೭೯೬೪, ಚಂದ್ರಶೇಖರ ಸೋಮಯ್ಯ ಗೌಂಡ್ಲಮಠಂ, ಮೊ. ೭೯೪೮೯೦೫೯೦೧, ಮಲ್ಲೇಶಂ ಮಲ್ಲಯ್ಯ ಬೋಯಿನಿ (ಕಬ್ಬಲಿಗ, ಸೋಮೇಶ್ವರನ ಭಕ್ತ, ಗುಡಿಯನ್ನು ಕಸಗುಡಿಸಿ ಸ್ವಚ್ಛವಾಗಿಡುವ ಕೆಲಸ ಮಾಡುವವ), ಮೊ. ೯೫೫೩೮೯೩೫೫೩, ಶಾಂತಯ್ಯಸ್ವಾಮಿ, ಮೊ. ೭೯೫೯೦೮೧೦೫೮.

## ಗ್ರಂಥ ಋಣ


೧. ೧೨ನೇ ಶತಮಾನದ ಶರಣ ಸ್ಮಾರಕಗಳು, ಡಾ. ಜಯಶ್ರೀ ದಂಡೆ, ಡಾ. ವೀರಣ್ಣ ದಂಡೆ, –ಗುಲಬರ್ಗಾ ವಿಶ್ವವಿದ್ಯಾಲಯ, ಕಲಬುರಗಿ, ೨೦೧೨.

೨. ೧೨ನೇ ಶತಮಾನದ ಶರಣ ಸ್ಮಾರಕಗಳು–೨, ಡಾ. ಜಯಶ್ರೀ ದಂಡೆ, ಡಾ. ವೀರಣ್ಣ ದಂಡೆ, –ವೀರಶೈವ ವಿದ್ಯಾಭಿವೃದ್ಧಿ ಸಂಸ್ಥೆ, ಬೆಂಗಳೂರು, ೨೦೧೫.

೩. ಕಲ್ಬುರ್ಗಿ ಜಿಲ್ಲೆಯ ಶಾಸನಗಳು, ಸಂ. ಹನುಮಾಕ್ಷಿ ಗೋಗಿ, –ಶಿವಚಂದ್ರ ಪ್ರಕಾಶನ, ನವನಗರ, ಹುಬ್ಬಳ್ಳಿ, ೧೯೯೬.

೪. ಕುಲ್ಯಪಾಕ–ಇತಿಹಾಸ ಮತ್ತು ಉಪಾಸನೆ, ಶ್ರೀ ರಾಜಶೇಖರಸ್ವಾಮಿ ಗೋರಟಾ, –ಶ್ರೀಮದ್ವೀರಶೈವ ಸದ್ಬೋಧನಾ ಸಂಸ್ಥೆ, ಶ್ರೀ ಜಗದ್ಗುರು ರಂಭಾಪುರಿ ವೀರಸಿಂಹಾಸನ ಮಹಾಪೀಠ, ಬಾಳೆಹೊನ್ನೂರು, ೨೦೦೪.

೫. ಜಗದ್ಗುರು ಅದಿ ರೇಣುಕರು, ಡಾ. ಶ್ರೀ ಜಚನಿ, ಶ್ರೀಮತಿ ಗಿರಿಜಾದೇವಿ ಸದಾಶಿವಶಾಸ್ತ್ರಿ ಹಿರೇಮಠ, ಗಿರಿಜಾ–ಶಂಕರ ನಿಲಯ, ಕಿತ್ತೂರ ಚನ್ನಮ್ಮಾಜಿ ರೋಡ, ಗದಗ, ೧೯೮೩.

೬ ಪಾಲ್ಕುರಿಕೆ ಸೋಮನಾಥನ ಬಸವ ಪುರಾಣ, ಅನು. ಡಾ. ಪಿ.ವಿ. ನಾರಾಯಣ, ತರಳಬಾಳು ಪ್ರಕಾಶನ, ಅಣ್ಣನ ಬಳ, ಸಿರಿಗೆರೆ, ೧೯೮೨.

೭. ಬಸವೇಶ್ವರ ಮತ್ತು ಅವನ ಕಾಲ, ಪಿ.ಬಿ.ದೇಸಾಯಿ, ಅನು. ಪ್ರೊ. ಸದಾನಂತ ಕನವಳ್ಳಿ, ಸಂ. ಡಾ. ಸಿದ್ಧಲಿಂಗ ಪಟ್ಟಣಸೆಟ್ಟಿ, –ಡಾ. ಎಂ.ಎಂ.ಕಲಬುರ್ಗಿ ಅಧ್ಯಯನ ಸಂಸ್ಥೆ, ಜ.ತೋಂಟದಾರ್ಯ ಮಠ, ಗದಗ, ೨೦೧೭.

೮. ಭೀಮಕವಿ ಬಸವ ಪುರಾಣ, ಸಂ. ಐ.ಎಸ್.ಪಾವಟೆ, ಕೆ.ಎಂ. ಬಂದಮ್ನವರ, ವ್ಹಿ.ಎಂ.ಮಲ್ಲಾಬಾದಿ, –ಸಾಹಿತ್ಯ ಸಮಿತಿ, ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ, ಧಾರವಾಡ, ೧೯೬೯.

೯. ಮಾರ್ಗ–೪, ಡಾ. ಎಂ.ಎಂ. ಕಲಬುರ್ಗಿ, –ಸಪ್ನ ಬುಕ್ ಹೌಸ್, ತುಂಗಾ ಕಾಂಪ್ಲೆಕ್ಸ್, ಗಾಂಧಿನಗರ, ಬೆಂಗಳೂರು, ೨೦೦೪.

೧೦. ರೇವಣಸಿದ್ಧ : ಹಿನ್ನೆಲೆ–ಮುನ್ನೆಲೆ, ಡಾ. ಎಂ. ಚಿದಾನಂದ ಮೂರ್ತಿ, –ಐಬಿಎಚ್ ಪ್ರಕಾಶನ, ಬೆಂಗಳೂರು, ೨೦೧೭.

೧೧. ಹರಿಹರನ ರಗಳೆಗಳು, ಸಂ. ಡಾ. ಎಂ.ಎಂ.ಕಲಬುರ್ಗಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.

೧೨. ಹರಿಹರ ಕಥಾಕೋಶ, ಸದಾನಂದ ಪಾಟೀಲ, ಬಸವ ಸಮಿತಿ, ಬೆಂಗಳೂರು, ೨೦೦೬.

೧೩. ಹೈದ್ರಾಬಾದು ಕರ್ನಾಟಕ ಭಾಗದ ಕನ್ನಡ ಶಿಲಾ ಶಾಸನಗಳು, ಸಂ. ಡಾ. ಎ. ಶಿವಾನಂದ, –ಕನ್ನಡ ಪೀಠ, ಬನಾರಸ ಹಿಂದೂ ವಿಶ್ವವಿದ್ಯಾಲಯ, ವಾರಣಾಸಿ, ೧೯೯೨.

# ಹೆಸರುಘಟ್ಟದ ಹೊನ್ನಪ್ಪನವರು



ಡಾ. ಬಿ. ನಂಜುಂಡಸ್ವಾಮಿ

ಬೆಂಗಳೂರು ಗ್ರಾಮಾಂತರ ಜಿಲ್ಲೆ ನೆಲಮಂಗಲ ತಾಲ್ಲೂಕಿನ ಹೆಸರುಘಟ್ಟದ ಹೊನ್ನಪ್ಪನವರ ಬಗ್ಗೆ ನನಗೆ ಬಹಳ ಕುತೂಹಲ. ಅವರ ಜೀವ, ಸಾಧನೆ ಬಗ್ಗೆ ಸಂಶೋಧನಾತ್ಮಕ ಲೇಖನವನ್ನು ಬರೆದು ೧೫.೨.೨೦೦೩ ಭಾನುವಾರ ನಡೆದ ನೆಲಮಂಗಲ ತಾಲ್ಲೂಕು ಮೂರನೇ ಕನ್ನಡ ಸಾಹಿತ್ಯ ಸಮ್ಮೇಳನ ಸ್ಮರಣ ಸಂಚಿಕೆಗೆ "ತ್ಯಾಮಗೊಂಡ್ಲು ಕನ್ನಡ ಶಾಲಾ ಮುಖ್ಯೋಪಾಧ್ಯಾಯರಾಗಿದ್ದ ಹೆಸರುಘಟ್ಟದ ಹೊನ್ನಪ್ಪನವರ ಕನ್ನಡ ಸೇವೆ" ಎಂಬ ಹೆಸರಿನ ಲೇಖನ ನೀಡಿದೆ. ಸ್ಮರಣ ಸಂಚಿಕೆಯ ಸಂಪಾದಕರಾದ ಡಾ. ಹೆಚ್.ಎಸ್. ಗೋಪಾಲರಾವ್ ಅವರ ಅರಿಶಿನಕುಂಟೆ ಮನೆಗೆ ಹೋಗಿ ಲೇಖನವನ್ನು ನೇರವಾಗಿ ಕೊಟ್ಟೆ. ಎರಡು ಮೂರು ದಿವಸಗಳ ನಂತರ ಡಾ. ಹೆಚ್.ಎಸ್. ಗೋಪಾಲರಾವ್ ಅವರು ಫೋನ್ ಮಾಡಿ "ತ್ಯಾಮಗೊಂಡ್ಲುನಲ್ಲಿ ೧೮೯೫ರ ಸುಮಾರಿನಲ್ಲಿ ಕನ್ನಡ ಶಾಲೆ ಇರಲಿಲ್ಲವಂತೆ, ಮತ್ತೆ ಹೆಸರುಘಟ್ಟದ ಹೊನ್ನಪ್ಪನವರು ತ್ಯಾಮಗೊಂಡ್ಲುವಿನಲ್ಲಿ ಮುಖ್ಯೋಪಾಧ್ಯಾಯರಾಗಿದ್ದರು ಎಂದು ಸ್ಪಷ್ಟ ಮಾಡುವ ಯಾವುದಾದರೂ ದಾಖಲೆ ಇದೆಯಾ ನಿಮ್ಮಲ್ಲಿ ಎಂದು ನನ್ನನ್ನು ಕೇಳಿದರು. ಇದೇ ವಿಷಯದ ಬಗ್ಗೆ ಡಾ. ಎಂ. ಚಿದಾನಂದಮೂರ್ತಿ, ಶ್ರೀ ಎಸ್. ಶಿವಣ್ಣ, ಶ್ರೀ ಸಿದ್ಧಗಂಗಯ್ಯ ಕಂಬಾಳು ಅವರನ್ನು ಈ ಬಗ್ಗೆ ವಿಚಾರಿಸಿದರು. ನಾನು ಟಿಪ್ಪಣಿ ಮಾಡಿಕೊಂಡ ಪುಸ್ತಕ ಮಾತ್ರ ನನ್ನ ಹತ್ತಿರ ಇತ್ತು. ಸಂಶೋಧನೆ ಮುಂದುವರೆಸಿ ಹಲವರನ್ನು ವಿಚಾರಿಸಿ ನನ್ನ ಸಂಗ್ರಹದಲ್ಲಿ ಇದ್ದ ೧೮೯೦ರಲ್ಲಿ ಮುದ್ರಣವಾದ "ಸಟೀಕ ರಾಜಶೇಖರ ವಿಳಾಸಂ" ಈ ಪುಸ್ತಕದ ಮುಖಪುಟದಲ್ಲಿ "ತ್ಯಾಮಗೊಂಡ್ಲು ತಾಲ್ಲೂಕ್ ಬ್ರಾಂಚ್ ಸ್ಕೂಲ್ ಹೆಡ್ ಮಾಸ್ಟರ್ ಹೆಸರಘಟ್ಟದ ಹೊನ್ನಪ್ಪನವರಿಂದ ವಿರಚಿಸಲ್ಪಟ್ಟ ಟೀಕಿನೊಡನೆ" ಎಂದು ಸ್ಪಷ್ಟವಾಗಿ ಮುದ್ರಿತವಾದ ಮುಖಪುಟವನ್ನು ಜೆರಾಕ್ಸ್‌ನೊಡನೆ ಡಾ. ಹೆಚ್.ಎಸ್. ಗೋಪಾಲರಾಯರಿಗೆ ತೋರಿಸಿದೆ. ತದನಂತರ ನನ್ನ ಲೇಖನ ಮಂಗಳಗಂಗ ಸ್ಮರಣ ಸಂಚಿಕೆಯಲ್ಲಿ ಮುದ್ರಣವಾಯಿತು.

ನನಗೆ 'ಹೆಸರಘಟ್ಟದ ಹೊನ್ನಪ್ಪನವರ' ವಂಶಸ್ಥರನ್ನು ಮಾತನಾಡಿಸಬೇಕು ಎಂದು ಕುತೂಹಲ. ೨೦೦೨ ನವೆಂಬರ್ ದೀಪಾವಳಿ ಹಬ್ಬದ ದಿವಸ ಹೆಸರುಘಟ್ಟಕ್ಕೆ ಹೋದೆ. ಬೆಂಗಳೂರಿನ ಇನ್ನೊಂದು ರೂಪದಲ್ಲಿ ಇರುವ ಗ್ರಾಮದಲ್ಲಿ ಒಂದು ಗಂಟೆ ಹುಡುಕಿದರೂ ಯಾವ ವಿಧವಾದ ಮಾಹಿತಿಯೂ ಲಭ್ಯವಾಗಲಿಲ್ಲ. ಕೊನೆಗೆ ಶಿವಗಂಗೆ ಗಂಗಾಧರೇಶ್ವರ – ಹೊನ್ನಾದೇವಿ ಭಕ್ತರ ಮನೆ ಹುಡುಕಿದೆ. ಸುಮಾರು ಹನ್ನೊಂದು ಗಂಟೆಗೆ ನಮ್ಮ ಬಂಧುಗಳ ಮನೆ ಸಿಕ್ಕಿತು. ಅವರ ಸಹಾಯದಿಂದ ಹೆಸರುಘಟ್ಟವನ್ನು ಜಾಲಾಡಿದಾಗ ಗೊತ್ತಾದದ್ದು ಹೆಸರುಘಟ್ಟದ ಹೊನ್ನಪ್ಪನವರು ಜೀವಂತ ಇದ್ದಾಗ ಕಟ್ಟಿದ ಮನೆ ಅವರ ಮೊಮ್ಮಕ್ಕಳ ಕಾಲದಲ್ಲಿ ಮಾರಾಟ ಮಾಡಿ ಹೆಸರುಘಟ್ಟದ ಹತ್ತಿರದ ಗೋಪಾಲಪುರದಲ್ಲಿ ನೆಲೆಸಿದ್ದಾರೆ ಎಂದು. ಗೋಪಾಲಪುರದ ತೋಟದ ಮನೆಗೆ ಹೋದೆ. ಹೆಸರುಘಟ್ಟದ ಹೊನ್ನಪ್ಪನವರ ಮೊಮ್ಮಗ ನಿವೃತ್ತ ಇಂಜಿನಿಯರ್ ಹೆಚ್.ಜಿ. ಬಸವರಾಜು, ಅವರ ಧರ್ಮಪತ್ನಿ ಮತ್ತು ಮಕ್ಕಳು ಮೊಮ್ಮಗಳು ಮನೆಯಲ್ಲಿ ಇದ್ದರು. ನನ್ನನ್ನು ನೋಡಿ ಅವರಿಗೂ ಸಂತೋಷವಾಯಿತು. ನಿವೃತ್ತ ಇಂಜಿನಿಯರ್ ಬಸವರಾಜು, ಅವರ ಧರ್ಮಪತ್ನಿ ತವರುಮನೆ ಗುಬ್ಬಿ. ಅವರ ಪರಿಚಯ ನನಗೆ ಇತ್ತು. ನನ್ನ ಪ್ರಕಟಿತ ಲೇಖನದ ಜೆರಾಕ್ಸ್ ಪ್ರತಿಯನ್ನು ಅವರಿಗೆ ಕೊಟ್ಟೆ, ತುಂಬಾ ಸಂತೋಷಪಟ್ಟರು, ಅವರು ಹೇಳಿದ ವಿಷಯ, ತಮ್ಮ ತಂದೆಯ ಹೆಸರು ಗಂಗಪ್ಪ ಎಂದು. ಅವರು ಸರ್ಕಾರಿ ನೌಕರಿಯಲ್ಲಿ ಇದ್ದರು. ಅವರ ಅಜ್ಜಿ ೧೮೯೨ರ ತನಕ ಬದುಕಿದ್ದರು. ಅವರ ತಂದೆ ೧೮೯೩ ಅಗಸ್ಟ್ ತಿಂಗಳಲ್ಲಿ ಹುಟ್ಟಿದ್ದಾರೆ. ಅವರ ತಾತ ಶಿವೈಕ್ಯರಾದದ್ದು ೧೮೯೪ ಮಾರ್ಚ್ ತಿಂಗಳಲ್ಲಿ, ಶಿವರಾತ್ರಿ ಹಬ್ಬದ ಮಾರನೆಯ ದಿವಸ. ಅವರ ಆರಾಧನೆಯನ್ನು ಈಗಲೂ ಈ ಭಾಗದ ಪ್ರಸಿದ್ಧ ತೋಟಸಾಗರದ ಬಸವೇಶ್ವರ ದೇವಸ್ಥಾನದಲ್ಲಿ ಮಾಡುತ್ತಾರೆ. ಅವರ ತಮ್ಮ ಹೊನ್ನಬಸವರಾಜು ಎಂದು ಅವನು ಬೆಂಗಳೂರು ಮಲ್ಲೇಶ್ವರಂ ರೈಲ್ವೆ ಸ್ಟೇಷನ್ನಿನ ಎದುರಿನ ಮನೆಯಲ್ಲಿ ಇದ್ದಾನೆ. ಅವರ ತಂದೆ ಒಳ್ಳೆಯ ಜ್ಯೋತಿಷ ವಿದ್ವಾಂಸರು. ಅವರ ತಮ್ಮ ಸಹ ಚೆನ್ನಾಗಿ ಜ್ಯೋತಿಷ ಅಧ್ಯಯನ ಮಾಡಿದ್ದಾನೆ. "ನಮ್ಮ ಅಜ್ಜಿ ಅನೇಕ ವಿಷಯಗಳನ್ನು ಹೇಳುತ್ತಾ ಇದ್ದರು. ಆದರೆ ನಾನು ಆಸಕ್ತಿಯಿಂದ ಸರಿಯಾಗಿ ದಾಖಲು ಮಾಡಿಕೊಳ್ಳಲಿಲ್ಲ" ಎಂದು ಹೇಳಿದರು.

ಬೆಂಗಳೂರಿನಲ್ಲಿ ಹೆಸರುಘಟ್ಟದ ಹೊನ್ನಬಸವರಾಜು ಅವರನ್ನು, ಅವರ ಧರ್ಮಪತ್ನಿಯನ್ನು ಭೇಟಿಯಾದೆ. ಹೆಚ್ಚಿನ ಮಾಹಿತಿ ಲಭ್ಯವಾಗಲಿಲ್ಲ. ಅವರ ಜೊತೆ ಗಂಗಪ್ಪನವರ ಎರಡನೇ ಹೆಂಡತಿಯ ತಂಗಿ ಸುಮಾರು ತೊಂಬತ್ತು ವರ್ಷ ವೃದ್ಧೆ ಇದ್ದರು. ಅವರಲ್ಲೂ ಅಂತಹ ಮಾಹಿತಿ ಲಭ್ಯವಾಗಲಿಲ್ಲ. ನಮ್ಮ ಮನೆಯಲ್ಲಿರುವ ಹಳೆಯ ಕಡತ ನೋಡಿ ನಿಮಗೆ ತಿಳಿಸುತ್ತೇನೆ ಎಂದು ಹೇಳಿದರು. ಆಮೇಲೆ ಮೂರು ನಾಲ್ಕು ಸಾರಿ ಭೇಟಿಯಾದೆ. ಯಾವ ವಿಧವಾದ ಸರ್ಕಾರಿ ಕಾಗದ ಪತ್ರಗಳು ಅಥವಾ ಬೇರೆ ಕಾಗದ ಪತ್ರಗಳು ಲಭ್ಯವಾಗಲಿಲ್ಲ. ಹೆಸರುಘಟ್ಟದ ಹೊನ್ನಪ್ಪನವರ ಸಾಹಿತ್ಯ ಸೇವೆ ಪ್ರಾರಂಭದಲ್ಲಿ ೧೮೮೪ರಲ್ಲಿ. ನಮಗೆ ಲಭ್ಯವಿರುವ ಮಾಹಿತಿ ಪ್ರಕಾರ ಅವರ ಕಡೆಯ ಪುಸ್ತಕ ಮುದ್ರಣವಾಗಿರುವುದು ೧೮೯೦ರಲ್ಲಿ, ಅವರು ಶಿವೈಕ್ಯರಾದದ್ದು ೧೮೯೪

ಮಾರ್ಚ್ ತಿಂಗಳಲ್ಲಿ. ವಿದ್ಯಾಭ್ಯಾಸ ಮುಗಿಸಿ ಕೆಲಸಕ್ಕೆ ಸೇರಿದಾಗ ಹದಿನೆಂಟು ವರ್ಷ ಎಂದು ಇಟ್ಟುಕೊಂಡು ಮದುವೆ ನಂತರ ಮಕ್ಕಳು ಆಗುವುದು ನಿಧಾನವಾಯಿತು ಎಂದುಕೊಂಡರೂ ಅವರು ಶಿವೈಕ್ಯರಾದಾಗ ಸುಮಾರು ೨೮ ವರ್ಷವಿರಬಹುದು. ಸುಮಾರು ೧೮೬೬ರಲ್ಲಿ ಜನಿಸಿರಬಹುದು, ಸುಮಾರು ೧೮೮೪ರಲ್ಲಿ ಅವರಿಗೆ ಹದಿನೆಂಟು ವರ್ಷ. ಲಿಂಗೈಕ್ಯರಾದಾಗ ಸುಮಾರು ೨೮ ವರ್ಷವಿರಬಹುದು. ಇಷ್ಟು ಕಿರಿದಾದ ವಯಸ್ಸಿಗೆ ಅಪರಿಮಿತವಾದ ಸಾಧನೆ ಮಾಡಿದ ಹೆಸರುಘಟ್ಟದ ಹೊನ್ನಪ್ಪನವರ ಬಗ್ಗೆ ವಿವರವಾದ ಮಾಹಿತಿ ಲಭ್ಯವಿಲ್ಲ. ಶಿವೈಕ್ಯರಾದಾಗ ಲೇಖನ ಅಂದಿನ ದಿನಮಾನದ ವಾರಪತ್ರಿಕೆ ಅಥವಾ ಮಾಸಪತ್ರಿಕೆಯಲ್ಲಿ ಬಂದಿರಬಹುದು. ಈಗ ನಮಗೆ ಅಂತಹ ಯಾವ ವಿಧವಾದ ಗಟ್ಟಿಯಾದ ಮಾಹಿತಿ ಲಭ್ಯವಿಲ್ಲ. ಸುಮಾರು ೧೯೭೦ರ ಕಾಲಮಾನದವರೆಗೆ ಅವರ ವಿದ್ಯಾರ್ಥಿಗಳು ಮತ್ತು ಅವರನ್ನು ನೋಡಿದ ಬಂಧು ಮಿತ್ರರನ್ನು ನಾವು ಮಾತನಾಡಿಸಬಹುದಾಗಿತ್ತು. ಸಮಕಾಲೀನ ಕಿರಿಯ ವಿದ್ವಾಂಸರು ಇಂತಹ ಪ್ರಯತ್ನ ಮಾಡದೇ ಇರುವುದರಿಂದ ಎಲ್ಲವೂ ಶೂನ್ಯವಾಗಿ ಹೋಗಿದೆ. ನನ್ನ ಪ್ರಶ್ನೆ ಇಷ್ಟೆ: ಹೆಸರುಘಟ್ಟದ ಗ್ರಾಮಾಂತರ ಪ್ರದೇಶದಲ್ಲಿ ಜನಸಿದ ಹೊನ್ನಪ್ಪರಿಗೆ ವಿದ್ಯೆ ಕಲಿಸಿದ ಗುರು ಯಾರು ? ಯಾವ ಪಾಠಶಾಲೆಯಲ್ಲಿ ತಯಾರಾದರು? ಅವರ ಕಲಿತ ವಿದ್ಯೆ ಯಾವ ಮಟ್ಟದ್ದು ? ಈ ಎಲ್ಲಾ ಪ್ರಶ್ನೆಗಳಿಗೆ ಈಗ ನಮ್ಮಲ್ಲಿ ಉತ್ತರವಿಲ್ಲ, ಹೆಸರುಘಟ್ಟದ ಹೊನ್ನಪ್ಪನವರ ಬದುಕು ಅಷ್ಟು ದೀರ್ಘವಾದುದಲ್ಲ. ಹೆಸರುಘಟ್ಟದಲ್ಲಿ ಮನೆ ನಿರ್ಮಾಣ ಮಾಡಿದರಂತೆ, ಅದರಲ್ಲಿ ಕೆಲವೇ ವರ್ಷ ವಾಸವಾಗಿದ್ದರೂ ಈ ಎಲ್ಲಾ ಮಾಹಿತಿ ಈಗ ಯಾರಿಗೂ ಗೊತ್ತಿಲ್ಲ.

ಗ್ರಂಥ ಸಂಪಾದನೆ, ವ್ಯಾಕರಣ, ನಿಘಂಟು, ಟೀಕೆ, ಹೀಗೆ ಕನ್ನಡ ಶಾಸ್ತ್ರ ಸಾಹಿತ್ಯದ ಭಾಷಾ ಪ್ರೌಢಿಮೆಗೆ ದುಡಿದ ಹೆಸರುಘಟ್ಟದ ಹೊನ್ನಪ್ಪನವರ ಬಗ್ಗೆ ಆಸ್ಥಾನ ವಿದ್ವಾನ್ ಪಂಡಿತರತ್ನ ಪದ್ಮಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು ಶರಣ ಸಾಹಿತ್ಯ ಸಂಪುಟ ೨೮, ಸಂಚಿಕೆ ೧ ಏಪ್ರಿಲ್ ೧೯೬೫ರ ಸಂಚಿಕೆಯಲ್ಲಿ "ಕನ್ನಡ ಉದ್ಧಾರಕರು" ಲೇಖನದಲ್ಲಿ ಹೆಸರುಘಟ್ಟದ ಹೊನ್ನಪ್ಪನವರ ಬಗ್ಗೆ ಮಾಹಿತಿ ನೀಡಿದ್ದಾರೆ. ಆದರೆ ಹೊನ್ನಪ್ಪನವರ ಇತಿವೃತ್ತದ ಬಗ್ಗೆ ಹೆಚ್ಚಿನ ವಿಷಯ ಲಭ್ಯವಾಗಿಲ್ಲ.

ಹೆಸರುಘಟ್ಟದ ಹೊನ್ನಪ್ಪನವರು ಶಾಲಾ ಅಧ್ಯಾಪಕರಾಗಿ ಬೆಂಗಳೂರು ಲಾಲ್‌ಬಾಗ್ ಉಪ್ಪಾರಹಳ್ಳಿಯಲ್ಲಿ ದುಡಿದು ನಂತರ ಬೆಂಗಳೂರು ಜಿಲ್ಲಾ ತ್ಯಾಮಗೊಂಡ್ಲಿನಲ್ಲಿ ಕನ್ನಡ ಶಾಲೆಯ ಮುಖ್ಯೋಪಾಧ್ಯಾಯರಾಗಿ (೧೮೯೦ರಲ್ಲಿ) ಸೇವೆ ಸಲ್ಲಿಸಿರುವುದು ಸ್ಪಷ್ಟವಾಗಿದೆ. ೧೮೯೪ರಲ್ಲಿ ನಿಧನ ಹೊಂದಿದ್ದಾರೆ. ಆಗ ಅವರಿಗೆ ಸುಮಾರು ೨೮ ವರ್ಷ ವಯಸ್ಸು (ಈ ಹಿಂದೆ ನಾನು ಐವತ್ತು ವರ್ಷವಿರಬಹುದು ಎಂದು ಊಹಿಸಿದ್ದೆ).

**ವಿರಕ್ತ ತೋಂಟದಾರ್ಯ (ಸು. ೧೬೧೬) ವಿರಚಿತ ಸಟೀಕಾ ಕರ್ಣಾಟಕ ಶಬ್ದಮಂಜರಿ**

ಪುಸ್ತಕದ ಪ್ರತಿ ಪುಟದಲ್ಲಿ 'ಸಟೀಕಾ ಕರ್ನಾಟ ಶಬ್ದಮಂಜರಿ' ಎಂದು ಮುದ್ರಣವಾಗಿದೆ. ಕೃತಿಯ ಮುಖಪುಟದಲ್ಲಿ ಕರ್ಣಾಟಕ ಭಾಷಾಭ್ಯಾಸಿಗಳಿಗತ್ಯಂತೋಪಯುಕ್ತಮಾಗಿ

ತೋಂಟದಾರ್ಯರಿಂದ ವಿರಚಿತವಾದ ಈ ನಿಘಂಟು ಬೆಂಗಳೂರು ತಾಲ್ಲೂಕು ವುಪ್ಪಾರಹಳ್ಳಿ ಸ್ಕೂಲ್‌ಟೀಚರ್ ಹೆಸರುಘಟ್ಟದ ಹೊನ್ನಪ್ಪನಿಂದ ವಿಭುದಾನಂದಿನೀಯೆಂಬ ಟೀಕು ವಿರಚಿಸಲ್ಪಟ್ಟು ಬೆಂಗಳೂರು ಬುಕ್ ಡಿಪೋ ಏಜಂಟ್ ವಾಜಪೇಯಿ ಕೃಷ್ಣಯ್ಯನವರಿಗೆ ಈ ಹಕ್ಕನ್ನು ಕೊಡಲ್ಪಟ್ಟಿರುತ್ತವೆ. ಬೆಂಗಳೂರು ಬುಕ್ ಡಿಪೋ ಮುದ್ರಾಕ್ಷರ ಶಾಲೆಯಲ್ಲಿ ೧೮೮೪ರಲ್ಲಿ ಮುದ್ರಣವಾಯಿತು. ಈ ಕೃತಿಗೆ ಪ್ರಾರಂಭದಲ್ಲಿ ಲೇಖಕರ ಮಾತು, ಪ್ರಕಾಶಕರ ಮಾತು ಯಾವುದೂ ಇಲ್ಲ, ನೇರವಾಗಿ ಟೀಕನ್ನು ಪ್ರಾರಂಭಿಸಿದ್ದಾರೆ. ಕೃತಿಯ ದ್ವಿತೀಯ ಮುದ್ರಣ ೧೮೯೫ರಲ್ಲಿ, ತೃತೀಯ ಮುದ್ರಣ ಮೈಸೂರು ಡಿ.ವಿ.ಕೆ. ಮೂರ್ತಿ ಪ್ರಕಟಿಸಿದ ಪ್ರೊ. ಎನ್. ಬಸವಾರಾಧ್ಯರು ೧೯೭೬ರಲ್ಲಿ ಸಂಪಾದಿಸಿದ "ಹಳಗನ್ನಡ ನಿಘಂಟು" ಪುಟ (೩೦೪-೩೩೪) ರಲ್ಲಿ ಮುದ್ರಣವಾಗಿದೆ. ಇತ್ತೀಚೆಗೆ ೨೦೦೯ ನಂತರ ಮತ್ತೆ ಡಿ.ವಿ.ಕೆ. ಮೂರ್ತಿಯವರು ಪ್ರಕಟಿಸಿದ "ಹಳಗನ್ನಡ ನಿಘಂಟು" ಮರುಮುದ್ರಣವಾಗಿದೆ. ಹೆಸರುಘಟ್ಟದ ಹೊನ್ನಪ್ಪನವರು ಮೂಲಕೃತಿಯಲ್ಲಿ ಇರುವ ೧೨೦ ಪದ್ಯಗಳಿಗೂ ಟೀಕೆ ಬರೆದಿದ್ದಾರೆ. ಮೂಲ ಪದ್ಯವನ್ನು ಅದರ ಕೆಳಗೆ ಟೀಕೆಯನ್ನು ಕೊಟ್ಟಿದ್ದಾರೆ. ೭೮ ಪುಟದ ಈ ಟೀಕಾಕೃತಿಯ ಕಡೆಯಲ್ಲಿ 'ಸಟೀಕಾ ಶಬ್ದಮಂಜರಿ ಸಂಪೂರ್ಣವು' 'ಶ್ರೀಶಿವಾಯ ನಮಃ' ಎಂದಿದೆ.

"ನಾನಾರ್ಥ ಕಂದಪದ್ಯ" ಕರ್ಣಾಟಕ ಭಾಷಾಭ್ಯಾಸಿಗಳಿಗತ್ಯಂತೋಪಯುಕ್ತವಾಗಿ ಶ್ರೀಮಚ್ಚನ್ನ ಕವೀಂದ್ರರಿಂ ವಿರಚಿತವಾದ ನಾನಾರ್ಥ ಕಂದಪದ್ಯವೆಂಬ ಈ ನಿಘಂಟು ಬೆಂಗಳೂರು ತಾಲ್ಲೂಕು ಉಪ್ಪಾರಹಳ್ಳಿ ಸ್ಕೂಲ್ ಹೆಡ್‌ಮಾಸ್ಟರ್ ಶೇಷಪ್ಪನವರ ಸಹಾಯದೊಡನೆ ಡಿಟೋ ಸ್ಕೂಲ್ ಟೀಚರ್ ಹೆಸರುಘಟ್ಟದ ಹೊನ್ನಪ್ಪನಿಂದ ವಿದ್ವದ್ರಂಜನೀಯೆಂಬ ಟೀಕು ವಿರಚಿಸಲ್ಪಟ್ಟು, ಬೆಂಗಳೂರು ಬುಕ್ ಡಿಪೋ ಏಜೆಂಟ್ ವಾಜಪೇಯಿ ಕೃಷ್ಣಯ್ಯನವರಿಗೆ ಈ ಹಕ್ಕನ್ನು ಕೊಡಲ್ಪಟ್ಟಿರುತ್ತದೆ. ಬೆಂಗಳೂರು ಬುಕ್ ಡಿಪೋ ಮುದ್ರಾಕ್ಷರ ಶಾಲೆಯಲ್ಲಿ ಮುದ್ರಿಸಲ್ಪಟ್ಟಿತು ೧೮೮೪ನೇ ಇಸವಿಯಲ್ಲಿ.

'ನಾನಾರ್ಥ ಕಂದಪದ್ಯ' ಕೃತಿಯನ್ನು ರಚಿಸಿದ ಚನ್ನಕವಿ ಇದ್ದ ಕಾಲ ಸುಮಾರು ೧೬೦೦, ಬ್ರಾಹ್ಮಣಕವಿ, ಭಾರದ್ವಾಜ ಗೋತ್ರದವನು, ದ್ರಾವಿಡನು, "ನಾನಾರ್ಥಕಂದ" ಇದು ಸಂಸ್ಕೃತ ಶಬ್ದಗಳ ನಾನಾರ್ಥಗಳನ್ನು ತಿಳಿಸುವ ನಿಘಂಟು. ಇದರಲ್ಲಿ ೧೬೦ ಕಂದಗಳಿವೆ. ಗ್ರಂಥದ ಪ್ರಾರಂಭದಲ್ಲಿ ಚೆನ್ನಿಗರಾಯನ ಸ್ತುತಿ ಇದೆ. ಬಳಿಕ ಕವಿ ವಿನಾಯಕ, ವಿಷ್ಣು, ಬ್ರಹ್ಮ, ಈಶ್ವರ ಮತ್ತು ಸರಸ್ವತಿಯನ್ನು ಸ್ತುತಿಸಿದ್ದಾನೆ. ಈ ಗ್ರಂಥಕ್ಕೆ ಒಂದು ಪುರಾತನ ವ್ಯಾಖ್ಯಾನವೊ ಅಥವಾ ಟೀಕೆಯೊ ಇದೆ ಎಂದು ಕವಿ ಚರಿತ್ರೆಕಾರರು ಕೃತಿಯ ಬಗ್ಗೆ ಎರಡನೇ ಸಂಪುಟದಲ್ಲಿ ವಿವರಣೆ ನೀಡಿದ್ದಾರೆ.

ಕೃತಿಯ ಪ್ರಾರಂಭದಲ್ಲಿ ಹೆಸರುಘಟ್ಟದ ಹೊನ್ನಪ್ಪನವರು ಪದ್ಯರೂಪದಲ್ಲಿ ಮತ್ತು ಗದ್ಯರೂಪದಲ್ಲಿ ಕೃತಜ್ಞತೆಯನ್ನು ಹೇಳಿದ್ದಾರೆ. ಗದ್ಯಭಾಗವನ್ನು ಮಾತ್ರ ಯಥಾವತ್ತಾಗಿ ನೀಡಲಾಗಿದೆ. ಪ್ರಾಚೀನ ಕನ್ನಡ ಕವಿಗಳ ರೀತಿ ಕನ್ನಡ ಪದ್ಯಗಳನ್ನು ವೃತ್ತದಲ್ಲಿ ರಚಿಸಿರುವುದು ನೋಡಿದರೆ ಇವರಿಗೆ ಕವಿತಾಶಕ್ತಿ ಸಹ ತುಂಬಾ ಚೆನ್ನಾಗಿತ್ತು.

"ಶ್ರೀಮಚ್ಚನ್ನ ಕವೀಂದ್ರರಿಂ ವಿರಚಿತವಾದ ನಾನಾರ್ಥ ಕಂದಪದ್ಯವೆಂಬ ನಿಘಂಟು, ಸಾಧಾರಣವಾಗಿ ಕನ್ನಡದೋಳ್ ಪ್ರಖ್ಯಾತಿಯನ್ನು ಹೊಂದಿರುವ ಭಾರತ, ಜೈಮಿನಿ, ಭಾಗವತ ರಾಮಾಯಣ, ವೃಷಭೇಂದ್ರ ವಿಜಯ, ರಾಜಶೇಖರ ವಿಳಾಸ, ಶಬರ ಶಂಕರ ವಿಳಾಸ, ಗಿರಿಜಾ ಕಲ್ಯಾಣ, ಬಸವಪುರಾಣ, ಚನ್ನಬಸವಪೌರಾಣ ಮುಂತಾದ ಪ್ರಾಚೀನ ಗ್ರಂಥಗಳಲ್ಲಿ ಬಹಳವಾಗಿ ಪ್ರಯೋಗಿಸಿರುವ ಗೂಢಾರ್ಥಗಳಿಗೂ ಮತ್ತು ನಾನಾರ್ಥಗಳಿಗೂ ಸಹಾ ಸಾಧಕವಾಗಿದ್ದಾಗ್ಯೂ ಈ ಗ್ರಂಥವು ಸಾಧಾರಣವಾಗಿ ಎಲ್ಲರಿಗೂ ದೊರೆಯಲು ಸಾಧ್ಯವಲ್ಲದ್ದರಿಂದ ಇಂಥಾ ಉತ್ತಮವಾದ ನಿಘಂಟನ್ನು ಬಹಳ ಶ್ರಮೆಯಿಂದ ತಂದು ಅದರಲ್ಲಿ ಲೇಖಕ ಜನತ ದೋಷಗಳಂ ಪರಿಹರಿಸಿ ಮೂಲಪ್ರತಿಗೆ ವ್ಯತ್ಯಾಸವಾಗದಂತೆ ಶೋಧಿಸಿದಾಗ್ಯೂ ಇದರಲ್ಲಿ ಅನೇಕ ಗೂಢಾರ್ಥಗಳಿರುವುದರಿಂದ ಟೀಕು ಮಾಡಲುಪಕ್ರಮಿಸಿ ಅನೇಕ ಸಂಸ್ಕೃತ ನಿಘಂಟುಗಳ ಸಹಾಯದಿಂದಲೂ ಇಲ್ಲಿನ ಹೆಡ್‌ಮಾಸ್ಟರ್ ಶೇಷಪ್ಪನವರ ಸಹಾಯದಿಂದಲೂ ಚನ್ನಾಗಿ ಪರಿಶೋಧಿಸಿ ಬೆಂಗಳೂರು ಬುಕ್ ಡಿಪೊ ಏಜಂಟ್ ಮ.ವಾ. (ವಾಜಪೇಯಿ) ಕೃಷ್ಣಶಾಸ್ತ್ರಿಗಳಿಗೋಸ್ಕರವಾಗಿ ಟೀಕನ್ನು ಬರೆದಿರುತ್ತೇನೆಯಾಗಿ ಈ ನಘಂಟನ್ನು ಸಮಸ್ತರೂ ಅಂಗೀಕರಿಸಬೇಕೆಂದು ಬೇಡುವ ಬೆಂಗಳೂರು ತಾಲ್ಲೂಕ್ ಉಪ್ಪಾರಹಳ್ಳಿ ಸ್ಕೂಲ್ ಪ್ಯೂಪಲ್ ಟೀಚರ್ ಹೆಸರುಘಟ್ಟದ ಹೊನ್ನಪ್ಪಾ.

"ನಾನಾರ್ಥ ಕಂದ ಪದ್ಯ" ಕೃತಿಯ ಹಸ್ತಪ್ರತಿಗಳು ಮದ್ರಾಸ್ ಪ್ರಾಚ್ಯ ಗ್ರಂಥಗಳ ಸಂಶೋಧನಾಲಯ, ಮೈಸೂರು ವಿಶ್ವವಿದ್ಯಾನಿಲಯ, ಕರ್ನಾಟಕ ವಿಶ್ವವಿದ್ಯಾನಿಲಯ, ಬೆಂಗಳೂರು ವಿಶ್ವವಿದ್ಯಾನಿಲಯ, ಹೈದರಾಬಾದು ಉಸ್ಮಾನಿಯ ವಿಶ್ವವಿದ್ಯಾನಿಲಯ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ ಗದಗ, ಹುಬ್ಬಳ್ಳಿ ಮೂರು ಸಾವಿರ ಮಠದ ಗ್ರಂಥ ಭಂಡಾರದಲ್ಲಿ ಇದೆ. ಆದರೆ ನಮಗೆ ೧೬೦ ಕಂದ ಪದ್ಯಗಳು ಇರುವಂತಹ ಒಂದೇ ಒಂದು ಹಸ್ತಪ್ರತಿಯೂ ಲಭ್ಯವಾಗಿಲ್ಲ. ತಿಳಿದಿರುವ ಮಾಹಿತಿ ಪ್ರಕಾರ ಹೆಸರುಘಟ್ಟದ ಹೊನ್ನಪ್ಪನವರಿಂದ ಸಂಪಾದಿತವಾಗಿ ಪ್ರಕಟವಾದ ಕೃತಿಯಿಂದ ನಮಗೆ ಸಂಪೂರ್ಣವಾದ ಕೃತಿ ಲಭ್ಯವಾಗಿರುವುದು. ಅಂದಿನ ದಿನಮಾನದಲ್ಲಿ "ನಾನಾರ್ಥ ಕಂದದ" ಹಸ್ತಪ್ರತಿಯನ್ನು ಪಡೆಯಲು ಬಹಳ ಶ್ರಮಪಟ್ಟಿರುವುದನ್ನು ಅವರೇ ಹೇಳಿಕೊಂಡಿದ್ದಾರೆ.

"ನಾನಾರ್ಥ ರತ್ನಾಕರ" ಅಂದಿನ ದಿನ ಕವಿಚರಿತೆಯ ಸರಿಯಾದ ಮಾಹಿತಿ ಲಭ್ಯವಿಲ್ಲದೆ ಇದ್ದುದರಿಂದ ಈ ನಿಘಂಟು ಕರ್ತೃ 'ನಾಗವರ್ಮ' ಎಂದು ಊಹಿಸಿ ಕೃತಿಯ ಶಿರೋಭಾಗದಲ್ಲಿ ಸ್ಪಷ್ಟವಾಗಿ ಬರೆದು ಈ ಕೃತಿಗೆ ಟೀಕೆಯನ್ನು ಬರೆದವರು ಹೆಸರುಘಟ್ಟದ ಹೊನ್ನಪ್ಪನವರು. ೧೮೮೫ರಲ್ಲಿ ಪ್ರಕಟಿಸಿದವರು ಬೆಂಗಳೂರಿನಲ್ಲಿರುವ ತೋವಿನಕೆರೆ ರಾಯಣ್ಣ ವಾಗ್ಮಿಯವರಿಂದ. ಈ ನಿಘಂಟಿನ ಬಗ್ಗೆ ಪ್ರೊ. ಎನ್. ಬಸವಾರಾಧ್ಯರು ಹಳಗನ್ನಡ ನಿಘಂಟು ಪೀಠಿಕೆ ಪುಟ ೧೦ರಲ್ಲಿ ಈ ಮಾತುಗಳನ್ನು ಹೇಳಿದ್ದಾರೆ. "ನಾನಾರ್ಥ ರತ್ನಾಕರ ಈ ನಿಘಂಟಿನ ಕರ್ತೃ ದೇವೋತ್ತಮ. ಈತನ ಕಾಲ ಸುಮಾರು ೧೬೦೦ ಇದರಲ್ಲಿ ೧೯೯ ವೃತ್ತಗಳಿವೆ. ಸಂಸ್ಕೃತ ಶಬ್ದಗಳ

ನಾನಾರ್ಥಗಳನ್ನು ಇದರಲ್ಲಿ ವಿವರಿಸಿದೆ. ಈ ನಿಘಂಟಿಗೆ ತೋವಿನಕೆರೆ ರಾಯಣವಾಗ್ಮಿ ಎಂಬುವನು ಟೀಕನ್ನು ಬರೆದಿದ್ದಾನೆ" ಎಂದಿದ್ದಾರೆ. ಮುದ್ರಿತ ಪುಸ್ತಕದ ಅವಲೋಕನದಿಂದ ಟೀಕನ್ನು ಬರೆದವರು ಹೆಸರುಘಟ್ಟದ ಹೊನ್ನಪ್ಪನವರು, ಪ್ರಕಾಶಕರು ರಾಯಣ್ಣ ವಾಗ್ಮಿಗಳು ಎಂದು ಸ್ಪಷ್ಟವಾಗಿ ಗೊತ್ತಾಗುತ್ತದೆ. ಕೃತಿಯ ಅಂತ್ಯದಲ್ಲಿ ಈ ಗದ್ಯವಿದೆ.

೧. ಇದು ಭಗವದರ್ಹತ್ಪರಮೇಶ್ವರ ಚಾರುಚರಣಾರ

೨. ವಿಂದ ದ್ವಂದ್ವ ಮಕರಂದ ಮತ್ತ ಮಧುಕರಾಯಮಾಣ

೩. ವಿಭುದಜನಮನಃ ಪದ್ಮಿನೀ ರಾಜಹಂಸ ಶ್ರೀಮ

೪. ತ್ಕವಿರಾಜಹಂಸ ನಾಗವರ್ಮ ವಿರಚಿತಂ

೫. ಪರಿಸಮಾಪ್ತಂ ಮಂಗಳಮಹಾ

ವಿದ್ಯಾಭ್ಯಾಸಿಗಳಿಗತ್ಯಂತೋಪಯುಕ್ತವಾಗಿ, ಹೆಸರುಘಟ್ಟದ ಹೊನ್ನಪ್ಪನವರಿಂದ ಟೀಕು ವಿರಚಿಸಲ್ಪಟ್ಟು ೧೮೮೫ರಲ್ಲಿ ಪ್ರಕಟಿತವಾಗಿರುವ ಈ ಪುಸ್ತಕದಲ್ಲಿ ೯೦ ಪುಟವಿದ್ದು, ಪುಸ್ತಕದ ಮೊದಲಲ್ಲಿ "ಪದಸೂಚೀ ಪತ್ರಿಕಾ" ಮುದ್ರಿಸಿದ್ದಾರೆ. ಶಬ್ದಗಳು ಮತ್ತು ಪದಸಂಖ್ಯೆ ಮೂರು ಸಾಲಿನಲ್ಲಿ ೭ ಪುಟದಷ್ಟು ಕೊಟ್ಟಿದ್ದಾರೆ. ಪುಸ್ತಕಕ್ಕೆ ಗ್ರಂಥಕರ್ತೃವಾಗಲಿ, ಪ್ರಕಾಶಕರಾಗಲಿ ಮುನ್ನುಡಿ ಸೂಚನಾ ಗದ್ಯ ಯಾವುದೂ ಇಲ್ಲ. ಪುಸ್ತಕ ೨೦ನೇ ಸೆಪ್ಟಂಬರ್ ಸನ್ ೧೮೮೫ರಲ್ಲಿ ಮುದ್ರಣವಾದದ್ದು, ಪ್ರಕಾಶಕರ ಸೀಲು ಹಾಕಿರುವ ಪುಟದಲ್ಲಿ ಈ ದಿನಾಂಕವನ್ನು ನಮೂದಿಸಲಾಗಿದೆ. ಸೀಲಿನಲ್ಲಿ 'ಬೆಂಗಳೂರಲ್ಲಿ ಯಿರುವ ತೋವಿನಕೆರೆ ಯಿಂದ್ರ ವರ್ಗದ ರಾಯಂಣ" ಎಂದಿದೆ. ಜೈನರಲ್ಲಿ ಪೌರೋಹಿತರನ್ನು ಇಂದ್ರರು ಎಂದು ಕರೆಯುತ್ತಾರೆ.

**ಕಬ್ಬಿಗರ ಕೈಪಿಡಿ** ಈ ಕೃತಿಯನ್ನು ರಚಿಸಿದವರು ನುಗ್ಗೇನಹಳ್ಳಿಯ ಲಿಂಗಮಂತ್ರಿ. ಈ ನಿಘಂಟು ವಾರ್ಧಕ ಷಟ್ಪದಿಯಲ್ಲಿದೆ. ಈತನ ಕಾಲ ಸುಮಾರು ೧೫೩೦, ಕಬ್ಬಿಗರ ಕೈಪಿಡಿಯಲ್ಲಿ ೧೦೧ ಪದ್ಯಗಳಿವೆ. ಹಳಗನ್ನಡ ಶಬ್ದಗಳಿಗೆ ನಿಘಂಟಿನಲ್ಲಿ ಅರ್ಥಗಳನ್ನು ವಿವರಿಸಲಾಗಿದೆ. ಪ್ರಕಟಿತ ಕೃತಿಯು ಮುಖಪುಟದಲ್ಲಿ ಶ್ರೀ ಶಿವಾಯ ನಮಃ, ಸಟೀಕಾ ಕಬ್ಬಿಗರ ಕೈಪಿಡಿ, ಲಿಂಗಮಂತ್ರಿಪನೆಂಬ ಕವೀಶ್ವರನಿಂ ವಿರಚಿತಮಾಗಿ ಕರ್ನಾಟಕ ವಿದ್ಯಾಭ್ಯಾಸಿಗಳತ್ಯಯೋಪಯುಕ್ತಮಾದ ಈ ನಿಘಂಟು, ಬೆಂಗಳೂರು ತಾಲ್ಲೂಕು ಉಪ್ಪಾರಹಳ್ಳಿ ಸ್ಕೂಲ್ ಟೀಚರ್ ಹೆಸರುಘಟ್ಟದ ಹೊನ್ನಪ್ಪನಿಂ ವಿಬುಧ 'ಚಕೋರ ಚಂದ್ರಿಕೆಯೆಂಬ' ಟೀಕು ವಿರಚಿಸಲ್ಪಟ್ಟು ಬೆಂಗಳೂರು ಬುಕ್ ಡಿಪೋ ಏಜಂಟ್ ವಾಜಪೇಯಿ ಕೃಷ್ಣಯ್ಯನವರಿಂದ ಪ್ರಕಟಿಸಲ್ಪಟ್ಟಿರುತ್ತೆ. ಮೊದಲನೇ ಛಾಪೆ ೧೦೦೦ ಪ್ರತಿಗಳು. ಬೆಂಗಳೂರು ವಿಚಾರ ದರ್ಪಣ ಮುದ್ರಾಕ್ಷರ ಶಾಲೆಯೊಳ್ ಮುದ್ರಿಸಲ್ಪಟ್ಟಿತು. ಆರವತ್ತೆಂಟು ಪುಟದ ಈ ಪುಸ್ತಕಕ್ಕೆ ಹೆಸರುಘಟ್ಟದ ಹೊನ್ನಪ್ಪನವರು ಒಂದು ಪುಟ ಉಪೋದ್ಘಾತವನ್ನು ಹಳಗನ್ನಡ ಭಾಷೆಯಲ್ಲಿ ಬರೆದಿದ್ದು ಅದನ್ನು ಯಥಾವತ್ತಾಗಿ ಕೊಡಲಾಗಿದೆ.

ಉಪೋದ್ಘಾತವು.

—...—

ಶ್ರೀಮನ್ಮಹಾ, ಸುಗಾಸುರ ಮಹಾ[illegible] ಮಂಗಳ ರತ್ನಚಿತ್ರ[illegible] ಸಾಹಸಾಸನ ವಿನಯ, ಭಕ್ತಿ, ಗುಣಪರಿಪೂರ್ಣ [illegible] ೧ ನೆಯಿಟ್ಟು, ತಚ್ಚಿವನ್ನಿಟ್ಟಿಸುತ್ತಂ, ಸುಭಾಷಿತ, ಶಿವಪ್ರಸ್ಥಲ ಸಮಾನ ( ಅಂ ನಮೋತ್ರಿಪುರ) ನಾಮ ಸಮಸ್ತ ಕರ್ನಾಟಕ ಕವಿಗಳ್ಗೆ ಸಹಾಯವಾಗಿ ಅತ್ಯಂತೋಪಯೋಗ್ಯವಾಗಿರ್ದ, (ಕಬ್ಬಿಗರ ಕೈಪಿಡಿ) ಎಂಬಭಿಧಾನಮುಳ್ಳೊಂದು, ಹಳೆಗನ್ನಡ ಶಬ್ದಸಂಗ್ರಹ [illegible] ಮಾಡಿ ವಿಸ್ತರ, ಪ್ರಸಿದ್ಧಿಯಂ ಪೊಂದಿ, ಕರ್ನಾಟಕಭಾಷೆಯೊಳ್ಪ್ರಖ್ಯಾತವಾದ ( ರಾಜಶೇಖರವಿಳಾಸ, ಗಿರಿಜಾಕಲ್ಯಾಣ, ನೃಪತುಂಗೇಂದ್ರವಿಜಯ, ಶಬರಶಂಕರವಿಳಾಸ, ಪಂಪರಾಮಾಯಣ, ಪಂಪಭಾರತ, ರಾಮನಾಥಚರಿತ, ಭಾಗವತ, ಜೈಮಿನಿಭಾರತ) ಇಂತಪ್ಪ ಪ್ರಾಚೀನ ಗ್ರಂಥಂಗಳ್ಗೆ ವಿಶೇಷವಾಗಿ, ಸಹಾಯವಾಗಿರ್ಪುದು. ಇಂತಪ್ಪ ನಿಘಂಟು, ಮೂಲಮಾತ್ರಮಿರ್ಪುದರಿಂದದರೊಳ್ ಪ್ರಯೋಗಿಸಿರ್ದ ಶಬ್ದಾರ್ಥಂಗಳಲ್ಲಿ ಹಳೆಗನ್ನಡದ ಶಬ್ದಂಗಳು, ಸಾಧಾರಣವಾದ ಜನಂಗಳ್ಗೆ, ಗೋಚರಮಾಗದಿರ್ಪುದರಿಂದದನ್ನು ಸರ್ವಜನಮುಪಯೋಗಿಸುವಂತೆ, ಹಿಂದಿನ ಸಹಾಯಮುಮನೇಕ ಹಳೆಗನ್ನಡ ನಿಘಂಟುಗಳ ಸಹಾಯಮುಮಂ ಪಡೆದದಕ್ಕೆ (ವಿದ್ವಚ್ಚಕೋರಚಂದ್ರಿಕೆ) ಎಂಬ ಟೀಕೆಯೊಳ್ಗೊಂಡು ಕರಿಗಲ್ಲ ಮನೆಯೊಂದು ಸೇರಿಸಿ ಹೇಳ್ದುದರಿಂ ಮುಂಪೇಳ್ದ ಮೂಲಗ್ರಂಥಂಗಳ್ಗೆ ವ್ಯತ್ಯಾಸಮಿಲ್ಲದಂತೆ, ಅನೇಕ ಪ್ರತಿಗಳಂ ಶೋಧಿಸಿನೋಡಿ, ಪ್ರತಿಪದಮಂ ಬೇರ್ಪಡಿಸಿ. ಸಮಾಸವಾಗುವ ಸ್ಥಳದೊಳ್, ಪದಗಳು ನಿಲ್ಲುವರೀತಿಯಂ ತೋರ್ಪಿ, ಸಂಧಿ ಪದಗಳಂ ವಿಂಗಡಿಸಿ. ಸಾಧ್ಯವಾದವುಗಳ್ಗೆ ಧಾತುಗಳಂ ಬರೆದು ಪ್ರತ್ಯೇಕಿಸಿರ್ಪೆ. ಸರ್ವಜನರಂಗೀಕರಿಸುವದರೊಳ್ಗೇನಾದರೂ ತಪ್ಪಿರ್ದಲ್ಲಿ [illegible] ದೋ, ಸುಜನರ್ಕಳ್ ತಿದ್ದಿನೋಡಿ ಅನುಮತಿಯಿಂದ ಮನ್ನಿಸೆಂದು ಬಿನ್ನೈಪೆ,

ಬೆಂಗಳೂರು ತಾಲ್ಲೂಕ್ ಲಾಲ್‌ಬಾಗ್ ಉಪ್ಪಾರಹಳ್ಳಿ.

28—5—35. ಸರ್ಕಾರದ ಪಾಠಶಾಲಾ ಸಹಾಯ ಬೋಧಕ.

ಹೆಸರುಘಟ್ಟದ ಹೊನ್ನಪ್ಪ.

ಕರ್ನಾಟ ಕಲ್ಪದ್ರುಮಂ ಕರ್ಣಾಟ ಭಾಷಾಭ್ಯಾಸಿಗಳಿಗತ್ಯಂತೋಪಯೋಕ್ತಮಾಗಿ ಟ್ರಾನ್ಸ್‌ಲೇಟರ್ ಮ.ರಾ. ರಾಮಶಾಸ್ತ್ರಿಗಳಿಂದ ಪ್ರಾರಂಭಿಸಲ್ಪಟ್ಟ ಈ ಪುಸ್ತಕವು ಬೆಂಗಳೂರು ತಾಲ್ಲೂಕು ಉಪ್ಪಾರಹಳ್ಳಿ ಸ್ಕೂಲ್ ಟೀಚರ್ ಹೆಸರುಘಟ್ಟ ಹೊನ್ನಪ್ಪನವರಿಂದ ಪೂರೈಸಲ್ಪಟ್ಟು ಬೆಂಗಳೂರು ಬುಕ್ ಡಿಪೋ ಟಿ. ಸುಬ್ಬರಾಯ ಶಾಸ್ತ್ರಿಗಳಿಂದಲು ಮ. ಚಿಕ್ಕಗಿರಿಯಪ್ಪನವರಿಂದಲು ಸಹಾ ಪ್ರಕಟಗೊಳಿಸಲ್ಪಟ್ಟಿತು. ೧ನೇ ಛಾಪೆ ೧೦೦೦ ಪ್ರತಿಗಳು. Bangalore ; Printed at the Luckshmy Vilasa Press, ಕ್ರಮ ೩–

೪-೦ ಈ ಪುಸ್ತಕ ಮುದ್ರಣವಾದದ್ದು ೧೮೮೫ರಲ್ಲಿ. ಐತಿಹಾಸಿಕ ಮಹತ್ತ್ವವುಳ್ಳ ಒಂದು ಪುಟ "ಸೂಚನೆ" ಎಂಬ ಶೀರ್ಷಿಕೆಯಲ್ಲಿ ಪ್ರಕಟವಾಗಿದೆ. ಗ್ರಂಥಕರ್ತರಾದ ಹೆಸರುಘಟ್ಟದ ಹೊನ್ನಪ್ಪನವರು ಬರೆದ ಲೇಖಕರ ಮಾತನ್ನು ಯಥಾವತ್ತಾಗಿ ಮುದ್ರಿಸಲಾಗಿದೆ. ಬೆಂಗಳೂರು ನಗರವನ್ನು ಕಲ್ಯಾಣನಗರಿ ಎಂದು ಕರೆಯುತ್ತಾ ಇದ್ದರು. ಲೇಖಕರು ೧೦.೫.೧೮೮೫ರಲ್ಲಿ ಬರೆದ ಈ ಗದ್ಯದಲ್ಲಿ "ಕಲ್ಯಾಣಪುರಿಯೋಳ್ ವಾಸಮಾಗಿರ್ಪ"... ಎಂದು ಬೆಂಗಳೂರನ್ನು ಕಲ್ಯಾಣಪುರಿ ಎಂದು ಸ್ಪಷ್ಟವಾಗಿ ಕರೆದಿದ್ದಾರೆ. ಮುಂದಿನ ಪುಟದಲ್ಲಿ "ಈ ಪುಸ್ತಕದಲ್ಲಿ ಪ್ರಯೋಗಿಸಿರುವ ಕೆಲ ಸಂಜ್ಞೆಗಳು" ಪು.ನಾ. ಪುಲ್ಲಿಂಗ, ನಾಮವಾಚಕ, ತ್ರಿ=ತ್ರಿಲಿಂಗಗಳು ಕ್ರಿ=ಕ್ರಿಯಾಪದ ವಿ=ವಿಶೇಷಣ ಕ್ರಿ.ಭೇ=ಕ್ರಿಯಾಭೇದ (ಸಂಪೂರ್ಣವಲ್ಲದ ಕ್ರಿಯಾಪದ) ಕ=ಕರ್ಣಾಟಕ ಶಬ್ದಮಂಜರಿ ಕಬ್ಬಿ=ಕಬ್ಬಿಗರ ಕೈಪಿಡಿ ಭಾ-ನಿ=ಭಾರತ ನಿಘಂಟು, ಜೈ-ಭಾ=ಜೈಮಿನಿಭಾರತ ರಾಮಾ=ರಾಮಾಯಣ (ತೊರವೆ) ಶ=ಶಬ್ದಮಣಿದರ್ಪಣ ಚ=ಚಂನಬಸವ ಪೌರಾಣ ಅನು=ಅನುಭವಾಮೃತವು ಹೀಗೆ ಹಲವು ಸಂಜ್ಞೆಗಳನ್ನು ಕೊಟ್ಟಿದ್ದಾರೆ. ಮುಂದೆ ೧೯ ಪುಟಗಳು ಶುದ್ಧಾಶುದ್ಧ ಪತ್ರಿಕೆ ಕೊಟ್ಟಿದ್ದಾರೆ ೨+೧೯+೪೧೨ ಪುಟದ ಪುಸ್ತಕಕ್ಕೆ ೧೯ ಪುಟ ಶುದ್ಧಾಶುದ್ಧ ಪುಟಗಳು ಸ್ವಲ್ಪ ಹೆಚ್ಚು ಎಂದು ನಮಗೆ ಈ ದಿನ ಅನ್ನಿಸುತ್ತದೆ. ಲೇಖಕರು ನೇರವಾಗಿ ಕರಡಚ್ಚು ನೋಡದೆ ಇರುವುದರಿಂದ ಇಂತಹ ತೊಂದರೆ ಉಂಟಾಗಿದೆ. ಇಂತಹ ಮಹತ್ವ ನಿಘಂಟುಗಳ ಬಗ್ಗೆ ತದನಂತರ ಕಾಲದಲ್ಲಿ ಪರಿಚಯಾತ್ಮಕ ಲೇಖನಗಳು ಬರೆಯಲಿಲ್ಲ. ಕರ್ನಾಟ ಕಲ್ಪದ್ರುಮಂ ನಿಘಂಟನ್ನು ರಚಿಸಲು ಪ್ರಾರಂಭಿಸಿದ ಎ. ರಾಮಶಾಸ್ತ್ರಿ ಸಾಹಿತ್ಯ ನೆಲೆ ಬಗ್ಗೆ ಡಾ. ಶ್ರೀನಿವಾಸ ಹಾವನೂರು ಅವರು "ಹೊಸಗನ್ನಡದ ಅರುಣೋದಯ" ಮಹಾಪ್ರಬಂಧದಲ್ಲಿ ಈ ಮಾತುಗಳನ್ನು ಹೇಳಿದ್ದಾರೆ. "ವೆಸ್ಲಿಯನ್ ಮಿಶನರಿಗಳ ಸಂಪರ್ಕದಲ್ಲಿದ್ದ ಎಂ. ರಾಮಸ್ವಾಮಿ ಶಾಸ್ತ್ರಿಯು ಕನ್ನಡ ವ್ಯಾಕರಣ, ಕೋಶಗಳನ್ನು ರಚಿಸಿದ (ಸು. ೧೮೫೪) ಆರಂಭಕಾರರಲ್ಲಿ ಒಬ್ಬನು. ಅವರ 'ವಾಗ್ವಿಧಾಯಿನಿ'ಯು ಅನೇಕ ವರ್ಷಗಳವರೆಗೆ ಪಠ್ಯವಾಗಿದ್ದಿತು. "ಕರ್ಣಾಟ ಕಲ್ಪದ್ರುಮಂ" ವೆಂಬ ಕೋಶರಚನೆಯಲ್ಲಿ ಹೆಸರುಘಟ್ಟದ ಹೊನ್ನಪ್ಪನು ಇವನಿಗೆ ಸಹಾಯಕನಾಗಿದ್ದನು. ಹೊನ್ನಪ್ಪನು ಒಂದು ವ್ಯಾಕರಣ ಪುಸ್ತಕವನ್ನು ಬರೆದದ್ದಲ್ಲದೇ (೧೮೯೦) ರಾಜಶೇಖರ ವಿಳಾಸದ ೫ ಆಶ್ವಾಸಗಳಿಗೆ ಟೀಕೆಯನ್ನು ರಚಿಸಿದ್ದಾನೆ" ಎಂದಿದ್ದಾರೆ. ಹೆಸರುಘಟ್ಟದ ಹೊನ್ನಪ್ಪನವರು ಬರೆದ ಸೂಚನಾ ಗದ್ಯವನ್ನು ಯಥಾವತ್ತಾಗಿ ಕೊಡಲಾಗಿದೆ.

**ಹರಿಹರ ಮಹಾಕವಿಯ 'ಗಿರಿಜಾಕಲ್ಯಾಣ' (೧೮೮೬)**

ಈಗ ದೊರಕಿರುವ ಮಾಹಿತಿ ಪ್ರಕಾರ ಹರಿಹರ ಕವಿಯು ಕೃತಿಯನ್ನು ಓಲೆಯಲ್ಲಿ ಅಧ್ಯಯನ ಮಾಡಿ ಪ್ರಥಮವಾಗಿ ಸಂಪಾದಿಸಿದ ಕೀರ್ತಿ ಹೆಸರುಘಟ್ಟದ ಹೊನ್ನಪ್ಪನವರದು. ಈ ಚಂಪೂ ಕಾವ್ಯವನ್ನು ಅದರ ಮಹತ್ವವನ್ನು ಮನಗಂಡು ೧೮೮೬ರಲ್ಲಿ ಪ್ರಕಟಿಸಿದ ಪ್ರಕಾಶಕರು ಮಳವಳ್ಳಿ ಚಿಕ್ಕಗಿರಿಯಪ್ಪನವರು. ನನಗೆ ನೋಡಲು ಲಭ್ಯವಾದ ಪುಸ್ತಕದ ಮುಖಪುಟ ನಷ್ಟವಾದ್ದರಿಂದ ಸಂಪೂರ್ಣ ವಿವರಣೆ ನೀಡಲು ಸಾಧ್ಯವಾಗುತ್ತಿಲ್ಲ. ಮುದ್ರಿತ ಪುಸ್ತಕ ಸುಮಾರು ೧೮೦ ಪುಟ ಇರಬಹುದು. ನಾನು ನೋಡಿದ ಪುಸ್ತಕದಲ್ಲಿ ಹತ್ತನೇ

ಆಶ್ವಾಸದ ೯೮ ಪದ್ಯಗಳು ಮೊತ್ತ ಇದ್ದು ಇನ್ನು ಆರು ಪುಟ ಶಿಥಿಲವಾಗಿ ಹೊರಟು ಹೋಗಿತ್ತು. ಹೆಸರುಘಟ್ಟದ ಹೊನ್ನಪ್ಪನವರು "ಸೂಚನೆ" ಎಂಬ ಶಿರೋನಾಮೆಯಲ್ಲಿ ೧೪ ಸಾಲು ಗದ್ಯವನ್ನು ಕೃತಿಯ ಆರಂಭದಲ್ಲಿ ನೀಡಿದಾರೆ. ಅದನ್ನು ಯಥಾವತ್ತಾಗಿ ನೀಡಲಾಗಿದೆ.

ಶ್ರೀ

ಶ್ರೀ ಶಿವಾಯ ನಮಃ

**ಸೂಚನೆ**

ಸ್ವಸ್ತಿ ಶ್ರೀಮದಖಿಲ ಸುರಾಸುರ ಮಕುಟ ಖಚಿತಾನಂತರತ್ನ ಶೋಭಾರಂಜಿತ ಶ್ರೀಮಚ್ಛಿವಶರಣ ಕಮಲ ಭೃಂಗಾಯಮಾನ ಸತ್ಕವೀಶ್ವರ ಹಂಪೆಯ ಹರಿಹರದೇವ ಭಕ್ತಿ ವಿರಚಿತಮಪ್ಪ ಗಿರಿಜಾ ಕಲ್ಯಾಣಮೆಂಬೀಯುತ್ತಮ ಪ್ರಬಂಧಂ ಸಕಲ ಭಕ್ತಜನಾಂಗೀ ಕೃತಮಪ್ಪುದರಿನನಂತಚಾತುರ್ಯಮಾಗಿಪ್ಪುದರಿನನವರತ ಪಠನಾ ಯೋಗ್ಯಮಾರ್ಗಿರ್ಪುದರಿಂ ವರಸಾಲಂಕೃತ ಚಾತುರ್ಯ ನಾನಾವೃತ್ತ ಛಂದೋಬ್ಧಮಾಗಿ ರಸಿಕಜನಾಹ್ಲಾದ ಕರವಾಗಿರ್ಪುದನಿದವಾಂ ಪುರಾತನ ಕರ್ನಾಟ ಪ್ರಬಂಧಗಳೊಳುತ್ತಮ ವೆಂಬುದವರಿದತ್ಯಂತಾಸಕ್ತಿಯೊಳನೇಕ ಮೂಲ ಪ್ರತಿಗಳನತಿಪ್ರಯಾಸದಿನಾರ್ಜಿಸಿ ಮೂಲಪ್ರತಿಗೆ ವ್ಯತ್ಯಾಸಮಾಗದಪ್ಪಂತೆ ಪರಿಶೋಧಿಸಿ ಮಲುವಳ್ಳಿ ಚಿಕ್ಕಗಿರಿಯಪ್ಪನವರಿಗಿತ್ತು ದರಿನವರಿಂ ಪ್ರಕಟಿಸಲ್ಪಟಿರ್ಪುದಿದಂ ಸರ್ವಜನರ್ಗಳಂಗೀಕರಿವುದರೊಳ್ಸಂದೇಹಮೊಣ್ಣಮಿಲ್ಲಮೆಂದು ತೋಷಿಸುತ್ತಿಪ್ಪ ಹೆಸರುಘಟ್ಟದ ಹೊನ್ನಪ್ಪ.

ಶ್ರೀ ಷಡಕ್ಷರಿದೇವ ಮಹಾಕವಿಗಳಿಂ ವಿರಚಿತಮಾದೀ ಕಾವ್ಯಂ ತ್ಯಾಮಗೊಂಡ್ಲು ತಾಲ್ಲೂಕ್ ಬ್ರಾಂಚ್ ಸ್ಕೂಲ್ ಹೆಡ್‌ಮಾಸ್ಟರ್ ಹೆಸರುಘಟ್ಟದ ಹೊನ್ನಪ್ಪನವರಿಂದ ವಿರಚಿಸಲ್ಪಟ್ಟ ಟೀಕಿನೊಡನೆ ಪ್ರಸಿದ್ಧಮಾಗಿರ್ಪುದು (ಮೊದಲನೆಯ ಭಾಗಂ ೫ ಆಶ್ವಾಸಂಗಳ್ । ಮೊದಲನೆ ಛಾಪೆ ೧೦೦೦ ಪ್ರತಿಗಳ ವಿಚಾರದರ್ಪಣ ಮುದ್ರಾಕ್ಷರ ಶಾಲೆಯಲ್ಲಿ ಮುದ್ರಿಸಲ್ಪಟ್ಟಿತು ೧೮೯೦ ನೇ ಇಸವಿಯಲ್ಲಿ ಪೀಠಿಕೆ ೧ ಪುಟ + ರಾಜಶೇಖರ ವಿಳಾಸ ಕಥಾಸಾರಂ (೪) ಪುಟ + ವಿಷಯ ಸೂಚಿಕೆ (೧) ಪುಟ + ಮೂಲಕೃತಿ ೫೫೮ ಪುಟ ಪೀಠಿಕೆಯಲ್ಲಿ ಹೆಸರುಘಟ್ಟದ ಹೊನ್ನಪ್ಪನವರು ಬರೆದ ಪೀಠಿಕೆಯನ್ನು ಯಥಾವತ್ತಾಗಿ ಕೊಡಲಾಗಿದೆ.

**ಪೀಠಿಕೆ**

ಶ್ರೀಮನ್ನಿಖಿಲ ಸುರಾಸರ ಮಕುಟತಟಘಟಿತ ಮಹಾಮುಣಿಗಣ ಕಿರಣ ಚಿತ್ರಿತ ಶ್ರೀಚರಣಾರವಿಂದ ಮಧುಕರೋಭಯಭಾಷಾ ವಿಶಾರದ ಶ್ರೀ ಷಡಕ್ಷರಿದೇವ ಮಹಾಕವಿ ನಿರ್ಮಿತಮಪ್ಪ (ರಾಜಶೇಖರವಿಳಾಸವು) ಬಹುಪಂಡಿತ ಜನಾಂಗೀ ಕೃತವಾಗಿರ್ಪುದಲ್ಲದೆ ಮೈಸೂರು ದೇಶೀಯೋಪಾಧ್ಯಾಯ ಪರೀಕ್ಷೆಗಾಗಿ ಪರಿಭಾವಿಸಿರುವುದುಂದಿದಕ್ಕೆ ಪ್ರತಿಪದಾರ್ಥ, ತಾತ್ಪರ್ಯ ; ಪೂರ್ವೇತಿಹಾಸ, ಸ್ವಾರಸ್ಯ, ವಿಶೇಷ ವಿಚಾರ, ನಿಘಂಟು,

# ಸೂಚನೆ.

---

ಶ್ರೀಮತ್ಸಮಸ್ತಲೋಕದೊಳ್ ಜನರ್ಗೆ ತ್ಯಾವ್ಯಕ್ತವಾದ ನಾನಾವಿಧಮಪ್ಪ ಭಾಷೆಗಳ್ ಆಯಾಯದೇಶದವರಿಂ ಪ್ರಸಿದ್ಧವಾಗಿರ್ಪುವು. ಅಂತಿರ್ದೊಡಂ ಆಯಾಯ ಭಾಷೆಯೊಳ್ ಸಮರ್ಥರಾದ ಕವಿಗಳಿಂ ಅನೇಕಗ್ರಂಥಂಗಳ್ ಪೇಳಲ್ಪಡುವವು. ಇಂತಪ್ಪಗ್ರಂಥಂಗಳಂ ಅಭ್ಯಾಸಮಂ ಮಾಡಿ ಅದರೊಳಿರ್ಪ ಭಾಷೆಯ ಸ್ವಾರಸ್ಯಮಂ ಅನುಭವಿಸುವದಕ್ಕಿಂತ ಇತರ ಸುಖವಿರ್ಪುದೆ ಭಾಷೆಯ ಸ್ವಾರಸ್ಯಮಂ ಎಷ್ಟು ಪೇಳ್ವೊದಮಲ್ಪವಾಗಿರ್ಪುದದಂತಿರ್ಕೆ. ಈಗಳ್ ಕರ್ಣಾಟ ಭಾಷೆಯೊಳ್ ಸಂತಕವಿಗಳ್ ಶ್ರೋತೃ ಸುಖಮನನುಭವಿಸಿ ಅವರ್ಗಳನುಭವಿಸಿದ ಸುಖಮಂ ಎಲ್ಲರ್ಗಂ ನುಡಿಲ್ಪೆಸಿ ನಾನಾವಿಧಮಪ್ಪ ವೃತ್ತಂಗಳಿಂ ಷಟ್ಪದಿಗಳಿಂ, ಪದ್ಯಂಗಳಿಂ, ವಚನಂಗಳಿಂ, ರಗಳೆಗಳಿಂ ದಂಡಕಂಗಳಿಂ ಇನ್ನು ಪಿರ್ದ ಛಂದಶ್ಶಾಸ್ತ್ರಾನುಸಾರಮಾಗಿ ಗ್ರಂಥಂಗಳಂ ನಿಘಂಟುಗಳಂ ಪೇಳ್ದರ್. ಇಂತು ಪೇಳ್ದ ಗ್ರಂಥಂಗಳೊಳಂ, ನಿಘಂಟುಗಳೊಳಂ ಪ್ರಯೋಗಿಸಿರ್ಪ ಶಬ್ದಂಗಳ್ ಸಾಧಾರಣ ಜನಂಗಳ್ಗಗೋಚರವಾಗಿರ್ಪುವದರಿಂ ಇವುಗಳೊಳ್ ಕೆಲವಂ ಸಂಗ್ರಹಿಸಿ ವಿದ್ಯಾಭ್ಯಾಸದಶಾಲೆಯೊಳ್ ಟ್ರಾನ್ಸ್ಲೇಟರಾಗಿರ್ದ ॥ಮಹಾರಾಜಶ್ರೀ ರಾಮಸ್ವಾಮಿ ಶಾಸ್ತ್ರಿಗಳಾವು ಕರ್ಣಾಟಕಶಬ್ದಕಲ್ಪದ್ರುಮವೆಂಬೊಂದು ಪಿಪಾಟ್ಯ ಅಕಾರಾದಿಶಬ್ದಂಗಳನುಸುರುತಿರ್ಪುದಂ, ಕೆಲವಾಸುದಿನಂಗಳ್ಗೆ ಪರಲೋಕಯಾತ್ರೆಯಂ ಪಾಳ್ದರ್ ಇಂತು ಪೇಳಲ್ಪಟ್ಟಗಿರ್ಪ ಕರ್ಣಾಟಕಕಲ್ಪದ್ರುಮವೆಂಬ ಪುಸ್ತಕವಂ, ಕಲ್ಯಾಣಪುರಿಯೊಳ್ ವಾಸವಾಗಿರ್ಪ ಮ॥ ಸುಬ್ಬರಾಯ ಶಾಸ್ತ್ರಿಗಳುಂ ॥ ಶ್ರೀ-ಮಲ್ಲೋಜಿ ಚಿಕ್ಕಗಿರಿಯಪ್ಪನವರುಂ ಪೂರ್ವೈಸಲನಗಿತ್ತತ್ಪರಿಂದಿದವಮಂ ಪ್ರೂಫ್ಸ ಲಿಪ್ಯಸಿವಾಳ್ದ ಕಷ್ಟಮೆಂತನೆ. ಪ್ರತಿಪುಟದಾದಿಯೊಳ್ ಅಕಾರಾದಿ ಶಬ್ದಂಗಳುಂ ಅವಕ್ಕೆಪ್ಪಲಿಂಗಂಗಳುಂ, ಅರ್ಥಂಗಳುಂ, ಪೇಳ್ದು ಈಶಬ್ದಂಗಳ್ಗೆ ಅಭಿಮುಖವಾಗಿ, ರಾಜಶೇಖರವಿಲಾಸ, ವೃಷಭೇಂದ್ರವಿಜಯ, ಗಿರಿಜಾಕಲ್ಯಾಣ, ಚನ್ನಬಸವಪುರಾಣ, ಭಾರತ, ರಾಮಾಯಣ, ಜೈಮಿನಿ, ಅನುಭವಾಮೃತ, ಶಬರಶಂಕರವಿಲಾಸ, ಕರ್ಣಾಟಶಬ್ದಮಂಜರಿ, ಕಬ್ಬಿಗರಕೈಪಿಡಿ, ಇಂತಪ್ಪ ಅನೇಕ ಗ್ರಂಥಂಗಳೊಳ್ ಪೇಳ್ದ ಶಬ್ದಂಗಳ ಉದಾಹರಣೆಗಳಂ ಪೇಳ್ದರ್ಗಂ ಇದರೊಳ್ ಕೆಲವು ಪೊಸಗನ್ನಡದೊಳ್ ಬರ್ಪ ಶಬ್ದಂಗಳಂ ಇವುಗಳ್ಗೆ ವ್ಯವಹಾರದೊಳಿರ್ಪ ಕೆಲವು ವಚನರೂಪವಾದುದಾಹರಣೆಗಳಂ ಪೇಳಿರ್ಪೆನಾದೊಡಂ ಗುಣಜ್ಞರಾದ ಮಹಾನುಭಾವರ್ಕಳೀ ಗ್ರಂಥದೊಳೇನಾದೊಡಂ ತಪ್ಪಿರ್ದೊಡಂ ತಿದ್ದಿಯಂ ವಾಳ್ಪವಂದನೆಯಂ ಅಂಗೀಕರಿಸಬೇಕೆಂದು ಅತಿವಿನಯದಿಂ ಬೇಡುತಿರ್ಪೆ.

ಬೆಂಗಳೂರು ತಾಲ್ಲೂಕು ಲಾಲ್‌ಬಾಗ್ ಅಪ್ಪಾರಹಳ್ಳಿ ಸ್ಕೂಲ್ ಟೀಚರ್ } ಹೆಸರುಘಟ್ಟದ ಹೊನ್ನಪ್ಪ
೧೦-೫-೮೩

ವಿಶಿಷ್ಟ ವಾಕ್ಯರಣಾಂಶ ಛಂದೋಲಕ್ಷಣಾಲಂಕಾರ ಪ್ರಭೇದ ಮೊದಲಾದುವುಗಳೊಡನೊಳ್ಗನ್ನಡದ ಟೀಕಂ ಬರೆದಿರುವನಲ್ಲದೆ, ಉಪಾಧ್ಯಾಯರಿಗೂ ವಿದ್ಯಾರ್ಥಿಗಳಿಗೂ ಕೇವಲಾನುಕೂಲವಾಗುವಂತೆ (ವ್ಯಾಕರಣ ಸಂಗ್ರಹ) ವೆಂಬುದನ್ನು ಬರೆದಿರುವೆನಿವಂ ವಿದ್ವಜ್ಜನವಂಗೀಕರಿಸಲಿ !

ಈ ಸಟೀಕ ರಾಜಶೇಖರವು ಪ್ರಿಂಟಾಗುವ ಕಾಲದಲ್ಲಿ ಪ್ರೂಫ್ ಕರೆಕ್ಷನ್ ಮಾಡಿದ ಬೆಂಗಳೂರು ಗವರ್ನಮೆಂಟ್ ಕನ್ನಡ ಬಾಯಿಸ್ ಸ್ಕೂಲ್ ಎರಡನೇ ಅಸಿಸ್ಟೆಂಟ್ ಮಾಸ್ಟರ್ ಮಹಾರಾಜಶ್ರೀ ಕೆ. ನರಸಿಹ್ಮಯ್ಯನವರಿಗೆ ನಾನು ಕೃತಜ್ಞನಾಗಿದ್ದೇನೆ.

ಹೆ. ಹೊನ್ನಪ್ಪ ಹೆಡ್‌ಮಾಸ್ಟರ್ ತಾ॥ ಬ್ರಾಂಚ್, ಸ್ಕೂಲ್
ತ್ಯಾಮಗೊಂಡ್ಲು, ನೆಲಮಂಗಲ ತಾಲ್ಲೂಕ್

ಕ್ರಮದ ವಿವರ ಹಾಸಲ್ ಸಹಿತ

ಸಟೀಕ ರಾಜಶೇಖರ ವಿಳಾಸಂ ಅವ್ವಲ್ ೨–೨–೦ ರೂ

ದುಯ್ಯಂ ೧–೧೨–೦

ವ್ಯಾಕರಣ ಸಂಗ್ರಹಂ ೦–೪–೬

ಮೊಬಲಗನ್ನು ಮಣಿಆರ್ಡರ್, ಲೇಬಿಲ್ ಮುಖಾಂತರ ಕಳುಹಿಸಬಹುದು. ಲೇಬಿಲ್‌ಗಾಗಿ ರೂಪಾಯಿ ೧ಕ್ಕೆ ಒಂದಾಗಿ ಹೆಚ್ಚಾಗಿ ಕಳುಹಿಸಬೇಕು. ವ್ಯಾಲ್ಯುಲೇಬಿಲ್ ಮೂಲಕ ತರಿಸಿಕೊಂಡಲ್ಲಿ ತಾನೇ ಛಾರ್ಜು ವಹಿಸಬೇಕು.

(ಷರಾ) ರಾಜಶೇಖರ ವಿಳಾಸವು ೩ ಭಾಗಗಳಾಗಿ ಟೀಕಿಸಿರುವುದು ಪ್ರತಿಯೊಂದು ಭಾಗಕ್ಕೂ ಮೇಲಿನಂತೆಯೇ ಕ್ರಯವೆಂದರಿವುದು.

'ರಾಜಶೇಖರ ವಿಳಾಸ' ಕೃತಿಗೆ ಸಂಪೂರ್ಣ ಟೀಕೆ ಬರೆದು ಭಾಗ ಭಾಗಗಳಾಗಿ ಮುದ್ರಣ ಮಾಡಿಸುವ ಆಸೆಯನ್ನು ಹೆಸರುಘಟ್ಟದ ಹೊನ್ನಪ್ಪನವರು ಹೊಂದಿದ್ದರು. ಬಿ. ಶಿವಮೂರ್ತಿ ಶಾಸ್ತ್ರಿಗಳು ಇವರು ರಾಜಶೇಖರ ವಿಳಾಸದ ಎಲ್ಲಾ ಅಶ್ವಾಸಗಳಿಗೂ ಟೀಕೆ ಬರೆದಂತೆ ಐತಿಹ್ಯವಿದೆ ಎಂದಿದ್ದಾರೆ. ಹಸ್ತಪ್ರತಿ ಬಗ್ಗೆ ಮಾಹಿತಿ ಇಲ್ಲ.

**ವ್ಯಾಕರಣ ಸಂಗ್ರಹಂ (೧೮೯೦)**

ನನಗೆ ನೋಡಲು ಲಭ್ಯವಾದ ಪುಸ್ತಕದಲ್ಲಿ ಮುಖಪುಟ ನಷ್ಟವಾಗಿದೆ ಪುಸ್ತಕದ ಮೊದಲ ಪುಟದಲ್ಲಿ ಪುಸ್ತಕದ ಪರಿವಿಡಿ ಕೊಟ್ಟಿದ್ದಾರೆ ೧ ಪಂಜ್ಞಾ ಪ್ರಕರಣ ೨ ಸಂಧಿ ಪ್ರಕರಣಂ ೩ ನಾಮ ಪ್ರಕರಣಂ ೪ ಸಮಾಸ ಪ್ರಕರಣಂ ೫ ತದ್ಧಿತ ಪ್ರಕರಣಂ ೬ ಅಖ್ಯಾತ ಪ್ರಕರಣಂ ೭ ಅಪಭ್ರಂಶ ಪ್ರಕರಣಂ ೮ ಅವ್ಯಯ ಪ್ರಕರಣಂ ೯ ಪ್ರಯೋಗ ವಾಕ್ಯಾನ್ವಯ ಪ್ರಕರಣಂ ೧೧೪ ಪುಟದ ಕಿರುಪುಸ್ತಕ ಶಬ್ದಮಣಿ ದರ್ಪಣ ತರದ ಅಧ್ಯಾಯಗಳಿವು.

**ಸೂಚನೆ**

"ಮೈಸೂರು ದೇಶಿಯೋಪಾಧ್ಯಾಯ ವಿದ್ಯಾರ್ಥಿಗಳ ಪರೀಕ್ಷಾ ಪ್ರಾರಂಭವಾದಂದಿನಂ ಕರ್ಣಾಟ ಭಾಷೋಪಯೋಗಂತದಭ್ಯಾಸಿಗಳ್ಗಾನಂದಕರಮಾಗಿರ್ಪುದದತ್ಯಂತಾನುಕೂಲ ಮಾಗಲನೇಕ ಪುರಾತನ ಗ್ರಂಥ ಪ್ರಯೋಗಾನುಸಾರಮಾಗಿ ವಿರಚಿತಮಪ್ಪ ವ್ಯಾಕರಣ ಸಂಗ್ರಹಮೆಂ ಪುಸ್ತಕಂ ನೋಡುಪಮಾಗಿ ರಾಜಿಪುದಿನರ್ಥಿಜನ" ಇನ್ನೊಂದು ಮುದ್ರಿತಪ್ರತಿ ಸಂಪೂರ್ಣವಾಗಿ ನೋಡಲು ಅವಕಾಶವಾದಾಗ ಸೂಚನೆಯಲ್ಲಿ ಬಿಟ್ಟು ಹೋಗಿರುವ ಅಕ್ಷರಗಳು ಮತ್ತು ಮುಖಪುಟದ ವಿವರವನ್ನು ಪಡೆಯಬಹುದು. ೧೮೯೦ರಲ್ಲಿ ರಾಜಶೇಖರ ವಿಳಾಸದ ಟೀಕು ಮತ್ತು ವ್ಯಾಕರಣ ಸಂಗ್ರಹ ಪುಸ್ತಕ ಒಟ್ಟಿಗೆ ಒಂದರ ನಂತರ ಒಂದು ಮುದ್ರಣವಾಗಿರಬೇಕು. ಈಗ ನಮ್ಮೆಲ್ಲ ಪ್ರಶ್ನೆಗಳಿಗೆ ಉತ್ತರ ಹೇಳುವವರು ಇಲ್ಲ. ೧೮೯೦–೧೮೯೪ರವರೆಗೆ ನಾಲ್ಕು ವರ್ಷ ಯಾವ ಪುಸ್ತಕವು ಮುದ್ರಣವಾದ ವಿವರವಿಲ್ಲ. ಮದುವೆ ಮಾಡಿಕೊಂಡು. ಮನೆ ಕಟ್ಟಿರುವುದರಲ್ಲಿ ತುಂಬಾ ಕೆಲಸದ

ಗಲಾಟೆಯಿಂದ ಯಾವ ಪುಸ್ತಕವು ಹೊರಬರಲಿಲ್ಲವೊ ಅಥವಾ ಹಸ್ತಪ್ರತಿ ಸಿದ್ಧವಾಗಿ ಮುದ್ರಣಾಲಯಕ್ಕೆ ಕೊಡಲು ಸಾಧ್ಯವಾಗಲಿಲ್ಲವೊ ಗೊತ್ತಿಲ್ಲ.

೨೬.೧೦.೨೦೦೨ನೇ ಭಾನುವಾರ ಹೆಸರುಘಟ್ಟಕ್ಕೆ ಹೋಗಿ ಕವಿಯ ಬಗ್ಗೆ ಮಾಹಿತಿ ಸಂಗ್ರಹಿಸಿದ್ದು. ಹೆಸರುಘಟ್ಟದ ನಿವಾಸಿ ನಮ್ಮ ಬಂಧುಗಳಾದ ಹೆಚ್.ಪಿ. ಫಾಲನೇತ್ರಪ್ಪನವರು ವೀರಭದ್ರೇಶ್ವರ ಬಸ್ ಮಾಲೀಕರು ಮತ್ತು ಅವರ ಮಗ ದಯಾನಂದ ಇವರ ಸಹಾಯದಿಂದ ಹೆಸರುಘಟ್ಟದ ಹೊನ್ನಪ್ಪನವರ ಬಂಧುಗಳಾದ ಹೆಚ್.ಪಿ. ರುದ್ರಸ್ವಾಮಿ ಜೊತೆಯಲ್ಲಿ ಹೆಸರುಘಟ್ಟದ ಹೊನ್ನಪ್ಪನವರ ಮೊಮ್ಮಗ ಹೆಚ್.ಜಿ. ಬಸವರಾಜು ಅವರನ್ನು ನೋಡಲು ಗೋಪಾಲಪುರಕ್ಕೆ ಹೋದರು. ಹೆಸರುಘಟ್ಟದ ಹೆಚ್.ಪಿ. ರುದ್ರಸ್ವಾಮಿ ಹೇಳಿದ ವಿಷಯ "ಹೆಸರುಘಟ್ಟದ ಹೊನ್ನಪ್ಪನವರ ಮನೆ ಚಂದ್ರಮೌಳೀಶ್ವರ ದೇವಸ್ಥಾನ ರಸ್ತೆಯಲ್ಲಿ ಇತ್ತು, ದೊಡ್ಡಮನೆ ಅದನ್ನು ಬೀಳಿಸಿ ಬೇರೆ ಬೇರೆ ಮನೆ ಕಟ್ಟಿದ್ದಾರೆ. ಮೂವತ್ತು ವರ್ಷದ ಹಿಂದೆ ಸಹ ಜನ "ಹೊನ್ನಪ್ಪನವರ" ಮನೆ ಎಂದು ಕರೆಯುತ್ತಾ ಇದ್ದರು, ಎಂದು ತಿಳಿಸಿದರು ಇವರ ಮನೆಯಲ್ಲಿ ಒಂದು ಮರದ ಪೆಟ್ಟಿಗೆ ಇಟ್ಟಿದ್ದರಂತೆ ಅದನ್ನು ಸುಮಾರು ನಲವತ್ತು ವರ್ಷಗಳ ಮುಂಚೆ ಹೆಸರುಘಟ್ಟದ ಹೊನ್ನಪ್ಪನವರ ಮಗ ಗಂಗಪ್ಪನವರು ತರಿಸಿಕೊಂಡರಂತೆ.

ಗೋಪಾಲಪುರದ ತೋಟದ ಮನೆಯಲ್ಲಿ ವಾಸವಾಗಿರುವ ನಿವೃತ್ತ ಇಂಜಿನಿಯರ್ ಹೆಚ್.ಜಿ. ಬಸವರಾಜುರವರು ತಿಳಿದ ವಿಷಯವನ್ನು ತಿಳಿಸಿದರು. "ನಮ್ಮ ತಾತ ನೀವು ಹುಡುಕಿಕೊಂಡು ಬಂದಿರುವ 'ಹೆಸರುಘಟ್ಟದ ಹೊನ್ನಪ್ಪ' ನಮ್ಮ ಅಜ್ಜಿ ಹೆಸರು ಪುಟ್ಟ ಹುಚ್ಚಮ್ಮ ನಮ್ಮ ಅಜ್ಜಿ ನೆಲಮಂಗಲದ ಕಿಲ್ಲೇದಾರ ಮನೆತನದ ಹೆಣ್ಣುಮಗಳು. ೧೯೫೨ರಲ್ಲಿ ಶಿವೈಕ್ಯರಾದರು. ನನ್ನ ತಾಯಿ ಬೇಗ ಹೋದ್ದರಿಂದ ನನ್ನ ಸಾಕಿ ಸಲುಹಿದರು. ನನ್ನ ತಂದೆ ಹೆಸರು ಹೆಚ್. ಗಂಗಪ್ಪನವರು ಅವರು ಹುಟ್ಟಿದ್ದು ೧೮.೮.೧೯೧೩ ಅವರು ಶಿವೈಕ್ಯರಾದದ್ದು ೮.೧೨.೧೯೭೬. ನಮ್ಮ ತಾತನವರು ಶಿವೈಕ್ಯರಾದದ್ದು ೧೯೧೪ ಶಿವರಾತ್ರಿ ಹಬ್ಬದ ದಿನ ಆಗ ನಮ್ಮ ತಂದೆಗೆ ಏಳು ತಿಂಗಳು. ನಮ್ಮ ತಂದೆ ಪ್ರತಿ ವರ್ಷ ತೋಟಗೆರೆ ಬಸವಣ್ಣನ ದೇವಸ್ಥಾನದಲ್ಲಿ ಅವರ ತಂದೆ ಹೆಸರಿನಲ್ಲಿ ಶಿವರಾತ್ರಿ ಹಬ್ಬದ ಮಾರನೇ ದಿನ "ಪಾರಣೆ ದಿನ" ಅನ್ನಸಂತರ್ಪಣೆ ಅಥವಾ ಸಾರ್ವಜನಿಕ ದಾಸೋಹವನ್ನು ಮಾಡುತ್ತಾ ಇದ್ದರು. ನಾವು ಮುಂದುವರೆಸಿಕೊಂಡು ಬಂದಿದ್ದೇವೆ."

ಹೆಚ್. ಗಂಗಪ್ಪನವರು ತಮ್ಮ ವಿದ್ಯಾಭ್ಯಾಸ ಮುಗಿಸಿ ಕಂದಾಯ ಇಲಾಖೆಯ ಶೇಕದಾರ ಆಗಿ ನಿವೃತ್ತರಾದರು. ಇವರ ಮೊದಲ ಪತ್ನಿ ಚೆನ್ನಮ್ಮ. ಈಕೆ ಸಹ ನೆಲಮಂಗಲದ ಕಿಲ್ಲೇದಾರ ಮನೆತನದವರು. ಇವರ ಸುಪುತ್ರರೆ ಹೆಚ್.ಕೆ. ಬಸವರಾಜುರವರು. ಇವರಿಗೆ ಗಂಡು ಮಕ್ಕಳು ಹೆಣ್ಣು ಮಕ್ಕಳು ಎಲ್ಲಾ ಇದ್ದು ಹೆಸರುಘಟ್ಟದ ಹೊನ್ನಪ್ಪನವರ ಸಂತತಿ ಬೆಳೆದಿದೆ.

ಹೆಚ್. ಗಂಗಪ್ಪನವರ ಮೊದಲನೇ ಪತ್ನಿ ಲಿಂಗೈಕ್ಯರಾದ ಮೇಲೆ "ಹೆಸರುಘಟ್ಟದ ಚೆನ್ನಮ್ಮ" ಎಂಬ ಕನ್ಯೆಯ ಜೊತೆ ಎರಡನೆಯ ವಿವಾಹವಾಯಿತು ಇವರಿಗೆ ಇಬ್ಬರು

ಮಕ್ಕಳು. ಮೊದಲನೆಯವರು ಸ್ವರ್ಣ ಬಸವರಾಜು, ಎರಡನೆಯವರು ಸ್ವರ್ಣ ಹೊನ್ನಾಂಬ. ಇತ್ತೀಚೆಗೆ ಸ್ವರ್ಣಬಸವರಾಜು ಮತ್ತು ಅವರ ಪತ್ನಿ ಶಿವೈಕ್ಯರಾಗಿದ್ದಾರೆ. ಹೆಸರುಘಟ್ಟದ ಹೊನ್ನಪ್ಪನವರ ಧರ್ಮಪತ್ನಿ "ಪುಟ್ಟಹುಚ್ಚಮ್ಮ"ನವರು ಬದುಕಿದ್ದಾಗ ಪ್ರಯತ್ನಪಟ್ಟು ಮಾಹಿತಿ ಸಂಗ್ರಹ ಮಾಡಿದ್ದರೆ ಅನೇಕ ವಿಷಯಗಳು ತಿಳಿದು ಬರುತ್ತಾ ಇತ್ತು. ಹೆಸರುಘಟ್ಟದ ಗ್ರಾಮಸ್ಥರಿಗಾಗಲಿ ಅಥವಾ ಬಂಧುಗಳಿಗಾಗಲಿ ಹೆಚ್ಚಿನ ವಿಷಯ ತಿಳಿದಿಲ್ಲ.

ಗ್ರಾಮಾಂತರ ಪ್ರದೇಶದಲ್ಲಿ ಜನಿಸಿ ವಿದ್ಯಾಭ್ಯಾಸ ಮುಗಿಸಿ, ಪ್ರೈಮರಿ ಶಾಲಾ ಅಧ್ಯಾಪಕರಾಗಿ ಅಪೂರ್ವವಾದ ಸಾಧನೆ ಮಾಡಿದ ಗಟ್ಟಿಯಾದ ವಿದ್ವಾಂಸನ ಬಗ್ಗೆ ಸಮಕಾಲೀನರು ಬರೆದ ಯಾವ ವಿಧವಾದ ಲೇಖನವೂ ಲಭ್ಯವಾಗಿಲ್ಲ. ಹೆಸರುಘಟ್ಟದ ಹೊನ್ನಪ್ಪನವರ ಕಾಲಮಾನದ ವಾರಪತ್ರಿಕೆ, ಮಾಸಪತ್ರಿಕೆಯಲ್ಲಿ ವಿಶೇಷವಾದ ಲೇಖನ ಪ್ರಕಟವಾಗಿರಬಹುದು. ಅಂತಹ ಲೇಖನವನ್ನು ಯುವ ವಿದ್ವಾಂಸರು ಹುಡುಕಬೇಕು. ಕವಿ ಸಂಪಾದಿಸಿ ಪ್ರಕಟಿಸಿದ ಎಲ್ಲಾ ಕೃತಿಗಳನ್ನು ಸಂಪುಟಗಳನ್ನು ಯಥಾವತ್ತಾಗಿ ಹೊರತರಬೇಕು. ತುಂಬಾ ಚಿಕ್ಕ ವಯಸ್ಸಿನಲ್ಲಿ ಬಹು ದೊಡ್ಡ ಸಾಧನೆ ಮಾಡಿ, ಅನೇಕ ಪುಸ್ತಕಗಳನ್ನು ಕನ್ನಡಮ್ಮನ ಮಡಿಲಿಗೆ ತುಂಬಿದ ಲಿಂ. ಹೆಸರುಘಟ್ಟದ ಹೊನ್ನಪ್ಪನವರ ಜೀವನ ಸಾಧನೆ ಬಗ್ಗೆ ಬರೆದದ್ದು ನನ್ನ ಜೀವನದ ಸೌಭಾಗ್ಯವೆಂದು ತಿಳಿಯುತ್ತೇನೆ.



# ಕಾವ್ಯದ ಭಾಷೆ



**ಡಾ. ಶಶಿಕಲಾ**

ಕಾವ್ಯದ ವಸ್ತುವು ತಾನು ವ್ಯಕ್ತವಾಗುತ್ತಿರುವ ಭಾಷೆಯ ಅನೇಕ ಮುಖಗಳ ಮೂಲಕ ತನ್ನನ್ನು ಹುಡುಕಿಕೊಳ್ಳುತ್ತಿರುತ್ತದೆ. ಕಾವ್ಯದ ಭಾಷೆಯು ತನ್ನಲ್ಲಿ ಹುದುಗಿಸಿಕೊಂಡಿರುವ ಒಂದು ಭಾಷೆಯ ಲಯ, ಭಾವ, ಅರ್ಥ ಇವುಗಳ ಮೂಲಕ ಕಾವ್ಯತ್ವವನ್ನು ಅರಳಿಸುತ್ತದೆ. ಭಾಷೆಯ ಈ ಪರಿಕರಗಳನ್ನು ಪ್ರತಿಭಾವಂತ ಕವಿ ಸೂಕ್ತವಾಗಿ ಬಳಸಿಕೊಂಡಿರುತ್ತಾನೆ. ಕಾವ್ಯಮೀಮಾಂಸೆ. ಛಂದಸ್ಸು ಈ ಜ್ಞಾನಶಿಸ್ತುಗಳ ಹಿನ್ನೆಲೆಯಲ್ಲಿ ಕಾವ್ಯದ ಭಾಷೆಯು ಹೇಗೆ ಕೆಲಸ ಮಾಡುತ್ತಿರುತ್ತದೆ ಎಂಬುದನ್ನು ಗ್ರಹಿಸಿದರೆ ಕಾವ್ಯದ ಸೊಬಗನ್ನು ಅನುಭವಿಸಲು ಸಾಧ್ಯವಾಗುತ್ತದೆ. ಈ ಅನುಭವದಿಂದ ಗ್ರಹಿಸಿಕೊಂಡ ಕಾವ್ಯತ್ವವು ಮುಂದೆ ಕಾವ್ಯತ್ವವು ಮುಂದೆ ಕಾವ್ಯದ ವಿಶ್ಲೇಷಣೆಯನ್ನು ಇನ್ನಷ್ಟು ವಿಭಿನ್ನ ನೆಲೆಯಲ್ಲಿ ಮಾಡಲು ಹಚ್ಚುತ್ತದೆ. ಆಗ ಭಾವಾರ್ಥವೆಂಬುದು ನಿಜವಾದ ಅರ್ಥದಲ್ಲಿ 'ಭಾವದ ಗ್ರಹಿಕೆ'ಗೆ ಅನುವು ಮಾಡಿಕೊಡುತ್ತದೆ. ಮತ್ತು ಇದುವರೆಗೆ ನಾವು ನೀಡುತ್ತಿರುವ ಅರ್ಥದ ಮಿತಿಗಳೂ ಅರಿವಿಗೆ ಬರುತ್ತವೆ. ಪಂಪಭಾರತದ ಈ ಪದ್ಯದ ಮೂಲಕ ವಿವಿಧ ಜ್ಞಾನಶಿಸ್ತನ್ನು ಅನ್ವಯಿಸಿ ಅರಿಯಲು ಯತ್ನಿಸಬಹುದು.

ಒಗೆದುಸುತಶೋಕದಿಂದಾ
ವಗೆಯಂತೊಳಗುರಿಯೆ, ಭೋಂಕನೆರ್ದೆತೆಜಿಯಲ್ಲಾ
ಮಗನೇ ಎಂದಶ್ರುಜಲಾ
ರ್ದ್ರಗಂಡನಾಗಂಡಿನೊಡನೆಬಿಸುಟಂಬಿಲ್ಲಂ (ದ್ವಾದಶಾಶ್ವಾಸಂ:೨೮)

ದ್ರೋಣಾಚಾರ್ಯರು ಮಹಾಭಾರತ ಯುದ್ಧದಲ್ಲಿ ಯುದ್ಧದ ಸೇನಾಧಿಪತಿ ಪಟ್ಟವನ್ನು ವಹಿಸಿಕೊಂಡಿದ್ದಾಗ ತನ್ನ ಮಗ 'ಅಶ್ವತ್ಥಾಮ ಸತ್ತ' ಎಂಬ ವಾರ್ತೆಯು ಕಿವಿಯ ಮೇಲೆ ಬಿದ್ದಾಗ ಅವರಲ್ಲಿ ಉಂಟಾದ ಉಮ್ಮಳ ಮತ್ತು ಇದರ ಪರಿಣಾಮವನ್ನು ಪಂಪ ಕಂದ ಪದ್ಯದಲ್ಲಿ ಬಣ್ಣಿಸಿದ್ದಾನೆ. ಈ ಪದ್ಯದ ಪದಶಃ ಅರ್ಥವನ್ನು ಡಿ.ಎಲ್. ನರಸಿಂಹಾಚಾರ್ ಈ ರೀತಿ ವಿವರಿಸಿದ್ದಾರೆ:

"ಉತ್ಪನ್ನವಾದಪುತ್ರ ಶೋಕದಿಂದ.
ಮಡಕೆಯನ್ನು ಸುಡುವ ಒಲೆಯಂತೆ ಮನಸ್ಸು ಉರಿಯಲು,
ಇದ್ದಕ್ಕಿದ್ದಂತೆ ಎದೆಯು ಬಿರಿಯಲು,
ಅಯ್ಯೋ ಮಗನೇ ಎಂದು ಕಣ್ಣೀರಿನಿಂದ ತೋಯ್ದಕೆನ್ನೆಯುಳ್ಳವನು (ದ್ರೋಣ)
ಆತನ್ನಪೌರುಷದೊಡನೆಬಿಲ್ಲನ್ನು ಬಿಸಾಡಿದನು, ಎಸೆದನು." (ಪಂಪಭಾರತ ದೀಪಿಕೆ, ಪುಟ ೪೦೮)

ಈ ಮೇಲಿನ ಸಾಲಿನ ಅರ್ಥವನ್ನು ಮುಂದಿನ ಸಾಲಿನಲ್ಲಿ ಬರುವ ವಚನವಾದ "ಅಂತು ಬಿಸುಟು ಅವಿಚ್ಛಿನ್ನ ವೀರರಸನುಮುತ್ಪನ್ನ ಶೋಕರಸನುಮಾಗಿ ನಿಜವರೂಥಮಂ ಧರ್ಮಪುತ್ರನ ಸಮೀಪಕ್ಕುಯ್ದು ಮಗನ ಮಾತಂ" ಎಂಬ ಸಾಲು ದೃಢಪಡಿಸುತ್ತದೆ. ಆದರೆ ಈ ಮೇಲಿನ ಪದ್ಯದಲ್ಲಿಡಿ. ಎಲ್. ನರಸಿಂಹಾಚಾರ್ಯ ಅವರು ಹೇಳುವ ಕೊನೆಯ ಸಾಲಿನಲ್ಲಿ ಬರುವ "ಅಂಗಡಿನೊಡನೆ ಆತನ್ನಪೌರುಷದೊಡನೆ" ಎಂಬುದನ್ನು ಬೇರೆ ರೀತಿಯಲ್ಲಿಯೂ ವಿವರಿಸಲು ಸಾಧ್ಯವಿದೆ.

ಈ ಮೇಲಿನ ಪದ್ಯದಲ್ಲಿ 'ದ್ರೋಣಾಚಾರ್ಯರು ತಮ್ಮ ಮಗ ಸತ್ತ ಸುದ್ದಿಯನ್ನು ಕೇಳಿದಾಗ ಅವರಲ್ಲಿ ಉಂಟಾದ ಸಂಕಟದ ತೀವ್ರತೆಯನ್ನು ಹೇಳಲಾಗಿದೆ' ಎಂಬುದು ಒಂದು ನೆಲೆಯಲ್ಲಿ ಹೌದು: ಆದರೆ ಕಾವ್ಯದ ಭಾಷೆಯು ಇದನ್ನು ಹೇಗೆ ಕಾವ್ಯಾತ್ಮಕಗೊಳಿಸಿದೆ ಎಂಬುದನ್ನು ಅರಿಯುವುದು ಅಷ್ಟೇ ಮುಖ್ಯ. ಕಾವ್ಯಾತ್ಮಕತೆಯು ಒಂದು ಧ್ವನಿಯಲ್ಲಿ, ಪದದಲ್ಲಿ ವಾಕ್ಯದಲ್ಲಿ ಅಂತರ್ಗತವಾಗಿರುವ ವಿವಿಧ ಅರ್ಥವನ್ನು ಸೃಜಿಸುವ ಕಾರಣದಿಂದ ಸಾಧ್ಯವಾಗುತ್ತದೆ. ಇದರ ಮೂಲಕ ಹುಟ್ಟುವ ಭಾವದ ತೀವ್ರತೆಯು ವ್ಯಕ್ತಿತ್ವದ ವಿಭಿನ್ನತೆಗಳನ್ನು ಸನ್ನಿವೇಶದ ಸಂಕೀರ್ಣತೆಯನ್ನು ಮನಸ್ಸಿಗೆ ತಟ್ಟುವಂತೆ ಮಾಡುತ್ತದೆ.

ತನ್ನ ಮಗನ ಮರಣದ ಸುದ್ದಿಯು ಎಷ್ಟು ಮತ್ತು ಹೇಗೆ ಆಘಾತಕಾರಿಯಾಗಿತ್ತು ಎಂಬುದನ್ನು 'ಆವಗೆಯಂತೆ ಒಳಗುರಿಯೆ' ಎಂಬುದು ಧ್ವನಿಸುತ್ತದೆ. ಮೇಲ್ನೋಟಕ್ಕೆ ಉಪಮೆಯಂತೆ ಕಂಡರೂ, ಅವಗೆ ಮತ್ತು ದ್ರೋಣರ ನಡುವಿನ ಸಂಕಟದಿಂದ ದ್ರೋಣಾಚಾರ್ಯರನ್ನು ಒಳಗೇ ಸುಡುವ ಬೆಂಕಿಯ ತೀವ್ರತೆ ಅವರನ್ನು ಬೇಯುವಂತೆ ಮಾಡಿತ್ತು. ಅವಗೆ ಮತ್ತು ದ್ರೋಣರ ಸಂಕಟವನ್ನು ಏಕೀಭವಿಸಿ ಹೇಳುವಾಗ ಉಪಮೆಯಲ್ಲಿಯೇ ಈ ಹೋಲಿಕೆ ನಿಲ್ಲದೆ, ಇವೆರಡರ ನಡುವಿನ ಸಾಮಾನ್ಯತೆಯನ್ನು ಗುರುತಿಸುತ್ತದೆ. ಈ ದುಃಖದಿಂದ ಇದ್ದಕ್ಕಿದ್ದಂತೆ ಅವರು ಎದೆಬಿರಿದು 'ಕಣ್ಣೀರಿನಿಂದ ತೋಯ್ದ ಕೆನ್ನೆಯುಳ್ಳವನಾದ ದ್ರೋಣನು (ಎಂದ ಶ್ರುಜಲಾರ್ದ್ರ ಗಂಡನ್) ತನ್ನ ಪೌರುಷದೊಡನೆ (ಆ ಗಂಡಿನೊಡನೆ) ಬಿಲ್ಲನ್ನು ಬಿಸಾಡಿದನು' ಎಂಬ ಭಾಗವನ್ನು ಗಮನಿಸಿದರೆ, ಕೊನೆಯ ಸಾಲಿನಲ್ಲಿ ಪುನರಾವರ್ತನೆಯಾಗಿ ಬರುವ ಗಂಡು ಎಂಬ ಪದವು ವಿಭಿನ ಅರ್ಥದ ನೆಲೆಗಳನ್ನು ತೆರೆದಿಡುತ್ತದೆ.

ದ್ರೋಣರ ದುಃಖ ಸಂಕಟವನ್ನು ಕಂದ ಪದ್ಯದಲ್ಲಿ ಹೇಳಲಾಗಿದೆ. ಕಂದ ಪದ್ಯವೆಂಬುದು "ಕುಂಚದ ನಾಲ್ಕೇ ಏಳೆತಗಳಿಂದ ಚಿತ್ರಶಿಲ್ಪಿ ಒಂದು ಸುಂದರವೂ

ಸ್ಫುಟವೂ ಆದ ಚಿತ್ರವನ್ನು ಬರೆಯುವಂತೆ" (ಕನ್ನಡ ಛಂದೋವಿಕಾಸ, ಪುಟ ೧೦೦) ಇರುವಂತಹದ್ದು. ಚಿಕ್ಕದಾದ ನಾಲ್ಕೇ ಸಾಲುಗಳಲ್ಲಿ ದ್ರೋಣರ ದುಃಖದ ಮನಸ್ಥಿತಿಯನ್ನು ಇಲ್ಲಿ ಹಿಡಿಯಲಾಗಿದೆ. ಪಾಡವರು ಮತ್ತು ನೌಕರರಿಗೆ ಮತ್ತು ಕೌರವರಿಗೆ ಗುರುವಾಗಿದ್ದ ಅವರನ್ನು ಸೋಲಿಸಲು ಯಾರಿಗೂ ಆಗದೇ ಇದ್ದ ಸ್ಥಿತಿಯಲ್ಲಿ ಉಪಾಯ ಮಾಡಿ 'ಅಶ್ವತ್ಥಾಮ' ಎಂಬ ಆನೆ ಸತ್ತ ಸುದ್ದಿಯನ್ನು ಕೇಳಿದ ದ್ರೋಣರು ತಮ್ಮ ಮಗನೇ ಸತ್ತ ಎಂಬಂತಾಗಿ. ಆವಗೆಯಂತೆ ಒಳಗೇ ಕುದ್ದು ಹೋದರು ಎಂಬ ಚಿತ್ರವನ್ನು ಸಂಕ್ಷಿಪ್ತವಾದ ಪದಗಳ ಮೂಲಕ ಕ್ಷಿಪ್ರವಾಗಿ ಅವರ ಹತಾಶೆಯು ಬೀರಿದ ಪರಿಣಾಮದ ಕಡೆಗೆ ಚಲಿಸುವಂತೆ ಮಾಡುತ್ತದೆ. ಇನ್ನು, ಕಂದ ಪದ್ಯವು ಆರನೆಯ ಗಣದಲ್ಲಿ ಉಂಟು ಮಾಡುವ ಯತಿಯು ಕನ್ನಡದಲ್ಲಿ ಉಸಿರನ್ನು ತೆಗೆದುಕೊಳ್ಳುವುದಕ್ಕೆ ನಿಲ್ಲಿಸುವ ಜಾಗವಾಗದೆ (ಕನ್ನಡ ಛಂದಸ್ಸಿನ ಚರಿತ್ರೆ, ಪುಟ ೫೧೯), ಅರ್ಥಕ್ಕೆ ಅನುಗುಣವಾಗಿಯೂ ಬರುವ ಬಗೆ ಸುಂದರವಾಗಿದೆ. 'ದ್ರೋಣಾಚಾರ್ಯರು ಮಗನ ಸಾವಿನ ವಾರ್ತೆಯಿಂದ ಆವಗೆಯಂತೆ ಒಳಗೇ ಉರಿದು' ಎನ್ನುವಲ್ಲಿ 'ಉರಿದು' ಎಂಬುದು ಒಂದೆಡೆ ಅಪೂರ್ಣ ಕ್ರಿಯೆಯೂ ಹೌದು, ಇನ್ನೊಂದೆಡೆ ಮುಂದಿನ ಕ್ರಿಯೆಗೆ ಮುನ್ನುಡಿಯೂ ಹೌದು. ಈ ಅಪೂರ್ಣ ಕ್ರಿಯೆಯು ಧ್ವನಿಯಲ್ಲಿ ದುಃಖದ ಭಾವವನ್ನು ಉಕ್ಕಿಸಿ ಮಡುಗಟ್ಟಿಸಿ ನಂತರ ಸ್ವಲ್ಪ ತಡೆದು, 'ಭೋಂಕನೆರ್ದೆ ತೆರೆದು' ಎನ್ನುವಲ್ಲಿ ಹುಟ್ಟುವ–ಮಹಾಪ್ರಾಣಾಕ್ಷರದ (ಇಲ್ಲಿ ಜಗಣವು ಇದೆ) ಆರಂಭದ ಮೂಲಕ ಹುಟ್ಟಿದ ಸಂಕಟವು 'ಹಾ ಮಗನೇ' ಎನ್ನುವ ಅರ್ತನಾದವನ್ನು ಹುಟ್ಟಿಸುತ್ತದೆ. 'ಭೋಂಕನೆ' ಎನ್ನುವುದು ಭಾವದಲ್ಲಿ ಇದ್ದಕ್ಕಿದ್ದಂತೆ ಹುಟ್ಟಿದ ವ್ಯತ್ಯಾಸವನ್ನು ಧ್ವನಿಯ ಮೇಲೆ ಬೀಳವ ಆಘಾತದ ಮೂಲಕ ಹಿಡಿಯುತ್ತದೆ. ಇದು ಒಂದೆಡೆ ದ್ರೋಣರ ಮನಸ್ಸಿನ ಸಂಕಟವನ್ನು ಹಾಗೂ ಮುಂದಿನ ಕ್ರಿಯೆಯ ನಾಂದಿಯನ್ನು ನಾಟಕೀಯವಾಗಿ ಹಿಡಿದಿಡುವಲ್ಲಿ ಯಶಸ್ವಿಯಾಗುತ್ತದೆ. ಕಾವ್ಯಾತ್ಮಕತೆಯು ಛಂದಸ್ಸಿನ ಲಯದೊಡನೆ ಹೆಜ್ಜೆ ಹಾಕುತ್ತಾ ಅರಳಿಸಿಕೊಳ್ಳುವ ಬಗೆ ಹೀಗೆ.

ಇನ್ನು ಪದಗಳ ಪುನರಾವರ್ತನೆಯು ತರುವ ಕಾವ್ಯಾತ್ಮಕತೆಯನ್ನು ಗಮನಿಸಿದರೆ, 'ಅಶ್ರುಜಲಾರ್ದಗಂಡನ್' ಎಂಬದು ಡಿಎಲ್‌ಎನ್ ಅವರ ದೃಷ್ಟಿಯಲ್ಲಿ 'ಕಣ್ಣೀರಿನಿಂದ ತೋಯ್ದ ಕಪೋಲಗಳುಳ್ಳ ದ್ರೋಣ' ಎಂಬುದಾಗಿದೆ. ವಾಚ್ಯಾರ್ಥದ ನೆಲೆಯಲ್ಲಿ ಮಾತ್ರ ನಿಲ್ಲುವ 'ಕಪೋಗಳುಳ್ಳ (=ಗಂಡ)' ಎಂಬುದನ್ನು ಕನ್ನಡ ಪದದ ಮೂಲಕ ವಿವರಿಸಿಕೊಂಡಾಗ.

ಗಂಡು=ವೀರ ಎಂಬುದೂ ಸಾಧ್ಯವಿದೆ. ಈ ನೆಲೆಯು ಮುಂದೆ ಧ್ವನಿಯನ್ನು ಅರಳಿಸುವ ಬಗೆ ಹೀಗಿದೆ: ಎಂತಹ ಸಂಕಟದ ಸಂದರ್ಭದಲ್ಲಿಯೂ ಹೆದರದೆ ಅಳುಕದೆ ಕಣ್ಣೀರನ್ನು ಹರಿಸದೇ ಇರುವವನು. ವೀರನು ಈಗ ಮಗನ ಮರಣದ ಎದುರು ಕಣ್ಣೀರನ್ನು ಸುರಿಸಬೇಕಾಗಿ ಬಂದಿರುವ ಹತಾಶ ಮನಸ್ಥಿತಿಯವನಾದ ಎಂಬುದನ್ನು 'ಕಣ್ಣೀರಿನಿಂದ ಕೂಡಿದ ವೀರ' ಎನ್ನುವುದು ಧ್ವನಿಸುತತದೆ. 'ವೀರತ್ವಕ್ಕೆ ತದ್ವಿರುದ್ಧವಾದ ಗಂಡು' ಎಂಬ ಅರ್ಥವೂ ಇಲ್ಲಿ ಹೊರಡುತ್ತದೆ. ಸಾವು ಎನ್ನುವುದು. ಅದರಲ್ಲಿಯೂ ಮಗನ ಸಾವು ಎನ್ನುವುದು ಎಂತಹ ವೀರನನ್ನೂ ಹತಾಶ ಸ್ಥಿತಿಗೆ ತಳ್ಳುವ ಸಾವಿನ

ಪರಾಕ್ರಮವು ಮಾನವನ 'ಗಂಡುತನ'ಕ್ಕಿಂತ ಮಿಗಿಲಾದದ್ದು ಎಂಬ ಸೂಚನೆಯೂ ಇಲ್ಲಿದೆ.

'ಗಂಡು' ಎಂಬ ಈ ಪದವು ಮುಂದಿರುವ 'ಆ' ಎಂಬ ನಿರ್ದೇಶನಾಮತಕ ಸರ್ವನಾಮವಾದ ಮೂಲಕ ಇನ್ನೂ ಅನೇಕ ಧ್ವನಿಗಳನ್ನು ಅನುರಣಿಸುತ್ತದೆ. 'ಆ' ಎಂಬುದು ತನ್ನಿಂದ ದೂರದಲ್ಲಿರುವಂತಹದ್ದು ಎಂಬುದು ಸಹಜವಾಗಿ ಇರುವ ಅರ್ಥವಾಗಿದೆ. 'ಆ ಗಂಡಿನೊಡನೆ ಬಿಸುಟನ್' ಎನ್ನುವಲ್ಲಿ. ಯಾವ ಸಂಕಟದಿಂದ ಹತಾಶನಾಗಿದ್ದಾನೆಯೋ ಆ ಹತಾಶೆಗೆ ಕಾರಣವಾದ ಗಂಡು ಎನ್ನುವ ಧ್ವನಿಯೂ ಇನ್ನೊಂದೆಡೆ ಇದುವರೆಗೆ ಯಾವುದ ತನ್ನ ಪರಾಕ್ರಮದ ಮೂಲವಾಗಿತ್ತೋ, ಪ್ರೇರಣೆಯಾಗಿತ್ತೋ, ಶಕ್ತಿಯಾಗಿತ್ತೋ 'ಆ ಗಂಡು' ಎನ್ನುವಲ್ಲಿ ತನ್ನ ಮಗನಾದ ಅಶ್ವತ್ಥಾಮ–ಆ ಗಂಡು ಎಂಬ ಧ್ವನಿಶಕ್ತಿಯೂ ಇಲ್ಲಿದೆ.

ಮುಂದಿನ ಗದ್ಯದಲ್ಲಿರುವ "ಅಂತು ಬಿಸುಟು ಅವಿಚ್ಛಿನ್ನ ವೀರರಸನುಮುತ್ತನ್ನ ಶೋಕರಸನುಮಾಗಿ" ಎಂಬ ಸಾಲಿನಲ್ಲಿ ಬರುವ ಹೇಗೋ (ಅಂತು) 'ವೀರರಸವನ್ನು= ತನ್ನ ಪರಾಕ್ರಮವನ್ನು' ಬಿಸುಟು ಎನ್ನುವಲ್ಲಿ ಕಂದಪದ್ಯದಲ್ಲಿನ 'ಆ ಗಂಡಿನೊಡನೆ' ಎಂಬುದಕ್ಕೆ ವೀರತ್ವ ಎಂಬ ಅರ್ಥವೇ ಇದೆ ಎಂದು ಹೇಳುವುದಕ್ಕೆ ಅವಕಾಶವಿದೆ. ಆದರೆ ಇಲ್ಲಿನ ಪ್ರಯತ್ನವು ಪದಗಳು ಕಾವ್ಯತ್ವ ಪಡೆಯುವ ಬಗೆಯನ್ನು ವಿವರಿಸುವುದಾಗಿದೆ. ಇಲ್ಲಿ ಕಾವ್ಯತ್ವವೆನ್ನುವುದೇ ದ್ರೋಣನ ಮನಸ್ಥಿತಿಯನ್ನು ಕಣ್ಣಿಗೆ, ಮನಸ್ಸಿಗೆ ನಾಟುವಂತೆ ಪದಗಳ ಮೂಲಕ ಹೇಗೆ ಕಟ್ಟಲಾಗಿದೆ ಎಂಬುದಾಗಿದೆ. ಸಂಸ್ಕೃತದ ಗಂಡ ಎನ್ನುವ ಅರ್ಥದ ಮೂಲಕ ವಿವರಿಸಿಕೊಳ್ಳುವುದಕ್ಕಿಂತ. ಕನ್ನಡದ ಗಂಡ–ವೀರ ಎನ್ನುವ ಅರ್ಥವು ಇನ್ನಷ್ಟು ಕಾವ್ಯತ್ವಕ್ಕೆ ಅವಕಾಶ ಮಾಡಿಕೊಡುತ್ತದೆ ಎಂಬುದನ್ನು ಗುರುತಿಸಿಕೊಳ್ಳಬಹುದು.

ಪಂಪ ಕಾವ್ಯತ್ವವನ್ನು ತನ್ನ ಕಾವ್ಯದಲ್ಲಿ ಕಟ್ಟಿಕೊಡುವ ಬಗೆಯನ್ನು ಮಾತ್ರವಲ್ಲದೆ, ಅವನ ಭಾಷಾ ಬಳಕೆಯ ವೈಶಿಷ್ಟ್ಯತೆಯನ್ನು ಅರಿಯುವಲ್ಲಿಯೂ ಈ ವಿವರಣೆ ನೆರವಾಗುತ್ತದೆ.

■

## ಆಧಾರ ಗ್ರಂಥಗಳು


೧. ಪಂಪಭಾರತ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೦.

೨. ಡಾ. ಡಿ.ಎಲ್. ನರಸಿಂಹಾಚಾರ್, ೨೦೧೨ (ನಾಲ್ಕನೇ ಮುದ್ರಣ), ಪಂಪಭಾರತ ದೀಪಿಕೆ, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು.

೩. ಡಾ. ಡಿ.ಎಸ್. ಕರ್ಕಿ, ೨೦೧೧ (೧೪ನೇ ಮುದ್ರಣ), ಕನ್ನಡ ಛಂದೋವಿಕಾಸ, ಭಾರತ ಪ್ರಕಾಶನ, ಧಾರವಾಡ.

೪. ಡಾ. ಹಾ.ಮಾ. ನಾಯಕ್, ೧೯೮೦, ಕನ್ನಡ ಛಂದಸ್ಸಿನ ಚರಿತ್ರೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

# ಹೆಣ್ಣು ಗಂಡು ದೇಹ



ಡಾ. ವಿಜಯಾ ಸುಬ್ಬರಾಜ್

ಜೀವಸೃಷ್ಟಿಯಲ್ಲಿ ಅಂದರೆ ಮನುಷ್ಯ ಮತ್ತು ಪಶು, ಪಕ್ಷಿ, ಪ್ರಾಣಿಗಳಲ್ಲಿ ಜಾತಿ ವೈವಿಧ್ಯವಿದೆ, ಲಿಂಗ ಭೇದವಿದೆ. ಸೃಷ್ಟಿಯ ನಿರಂತರತೆಗೆ ಸಂತಾನೋತ್ಪತ್ತಿ ಅನಿವಾರ್ಯ. ಸಂತಾನೋತ್ಪತ್ತಿ ಸಾಧ್ಯವಾಗುವುದು ಎರಡು ಭಿನ್ನ ಲಿಂಗಿಗಳ ಸಮಾಗಮದಿಂದ ಈ ಸಮಾಗಮ ಸುಲಭವಾಗಲು ಎರಡು ನೆಲೆಗಳಲ್ಲಿನ ಪ್ರಚೋದನೆ. ಒಂದು ಪ್ರತಿ ಜೀವಿಯಲ್ಲಿಯೂ ಮೂಲಭೂತವಾಗಿ ನೆಲೆಸಿರುವ ಕಾಮಪ್ರವೃತ್ತಿಯ ಒತ್ತಡ ಮತ್ತೊಂದು ಬಾಹ್ಯದಲ್ಲಿನ ದೈಹಿಕ ರಚನೆಯ ಸೆಳೆತ ಪಶು ಪಕ್ಷಿ ಪ್ರಾಣಿಗಳಲ್ಲಿ ಸಹಜವಾಗಿಯೇ ಜೈವಿಕವಾಗಿಯೇ ಆಕರ್ಷಣೀಯವಾದ ದೇಹರಚನೆಯಿರುತ್ತದೆ. ಮನುಷ್ಯರ ವಿಚಾರಕ್ಕೆ ಬಂದಾಗ ಹೆಣ್ಣು ಗಂಡು ಎಂದು ಲಿಂಗಭೇದಗಳನ್ನು ಗುರುತಿಸಿಕೊಳ್ಳಲಾಗಿದೆ.

ಮನುಷ್ಯ ಜಾತಿಯಲ್ಲಿ ಹೆಣ್ಣು-ಗಂಡು ಎಂದು ಲಿಂಗಭೇದವಿದೆ. ಇದು ಜೈವಿಕವಾಗಿ ದತ್ತವಾದ ವ್ಯತ್ಯಾಸ. ಒಟ್ಟಾರೆ ಮನುಷ್ಯರನ್ನು ತೆಗೆದುಕೊಂಡಾಗ ರೂಪ, ರಚನೆ, ಬಣ್ಣ ನಡೆ-ನುಡಿ, ಆಲೋಚನಾ ಕ್ರಮದಲ್ಲಿ ಸಾಕಷ್ಟು ವೈವಿಧ್ಯವಿದೆ. ಉದಾಹರಣೆಗೆ ಕಾಯ ಅಥವಾ ದೇಹ ಕುರಿತಾಗಿಯೂ ಅನೇಕ ಸಿದ್ಧಾಂತಗಳು. ನಂಬಿಕೆಗಳು, ಧೋರಣೆಗಳು ಭಿನ್ನ ಭಿನ್ನವಾಗಿದ್ದು, ಕಾಲಾಂತರದಲ್ಲಿ ಅದರ ಬಗೆಗಿನ ಕಾಳಜಿಗಳು ಮತ್ತು ಕುತೂಹಲಕರ ವೆನಿಸುತ್ತದೆ.

ಹೆಣ್ಣು ಗಂಡು ದೇಹಸಂಬಂಧಗಳು ಪ್ರತ್ಯೇಕ ಪ್ರತ್ಯೇಕವಾಗಿ ಪರಿಗಣಿಸಲು ಬರುವುದಿಲ್ಲ. ಹೆಣ್ಣು ಗಂಡುಗಳ ನಡುವಿನ ಆಕರ್ಷಣೆ ಕೇವಲ ಲೈಂಗಿಕ ಭಿನ್ನತೆಯಿಂದ ಮಾತ್ರ ಸಾಧ್ಯವಾಗುವುದಿಲ್ಲ. ಹಿಂದಿನವರು ದೇಹ ನಶ್ವರ. ಅದರ ಬಗೆಗಿನ ಮೋಹ ಸಾಧುವಲ್ಲ. ಇದು ಮಣ್ಣಿನ ಮಡಕೆ, ಮಣ್ಣಿನಿಂದಾದುದು ಮಣ್ಣಿಗೇ ಸೇರುವಂಥಾದ್ದು. ಆದ್ದರಿಂದ ಅದಕ್ಕೆ ಹೆಚ್ಚಿನ ಪ್ರಾಶಸ್ತ್ಯ ಕೊಡಬೇಕಾದ್ದಿಲ್ಲ ಎಂದು, ದೇಹಸೌಂದರ್ಯ ಕಾಲ ಕಳೆದಂತೆ ವಯಸ್ಸಾಗುತ್ತಿದ್ದಂತೆ ಕಳಿತು ಹೋಗುತ್ತದೆ. ಆದ್ದರಿಂದ ತಾತ್ಕಾಲಿಕ ರೂಪ, ಯೌವ್ವನಗಳು ಅನಿಶ್ಚಿತ ಎಂದೆಲ್ಲಾ ನಕಾರಾತ್ಮಕ ನಿಲುವುಗಳೇ ಪ್ರಚಲಿತವಾಗಿದ್ದವು.

ಆದರೆ ಅದು ಪಲಾಯನವಾದಿಗಳ ಮತ್ತು ತತ್ವಜ್ಞಾನಿಗಳ ನಿಲುವಾಗಿತ್ತೇ ಹೊರತು ಸಾಮಾನ್ಯ ಮನುಷ್ಯರಿಗೆ 'ದೇಹ' ಅತಿ ಮುಖ್ಯವೆನಿಸಿದೆ. ದೇಹವಿಲ್ಲದಿದ್ದಲ್ಲಿ ನಮ್ಮ ಅಸ್ತಿತ್ವವನ್ನು ಗುರುತಿಸಿಕೊಳ್ಳುವುದು ಹೇಗೆ ? ದೇಹದಲ್ಲಿ ಜೀವವೆನ್ನುವುದು ಇದ್ದು ಜೀವದೇಹಗಳ ಸಂಬಂಧ ಅವಿಚ್ಛಿನ್ನ, ಅಭಿನ್ನ ಎನ್ನುವ ನಿಲುವೇ ಶಾಶ್ವತ ಸತ್ಯವೆನ್ನುವ ಅರಿವು ಸಾರ್ವತ್ರಿಕವಾಯಿತು. ಇನ್ನೂ ಇದರ ಮಹತ್ವ ಯಾವ ಮಟ್ಟಕ್ಕೆ, ಬೆಳೆಯಿತೆಂದರೆ ಮನುಷ್ಯನ ದೇಹವನ್ನು ದೇಗುಲವೆಂಬ ರೂಪಕವಾಗಿ ಕಡೆದಿರಿಸಲಾಯಿತು. ಬಸವಣ್ಣನೆಂಬ ವಿಚಾರವಾದಿ ಶಿವಭಕ್ತನಂತೂ 'ದೇಹವೇ ದೇಗುಲ, ಶಿರ ಹೊನ್ನ ಕಳಸ: ಕಾಲೇ ಕಂಬ' ಎಂದೆಲ್ಲ ವಿವರಿಸಿ ಮನುಷ್ಯನನ್ನು ವಿಶ್ವರೂಪಕವೆನ್ನುವಂತೆ ಬಣ್ಣಿಸಿದ. ಇದೇ 'ರೀತಿಯಲ್ಲಿ, 'ಶರೀರಮಾದ್ಯಮ್ ಖಲು ಧರ್ಮಸಾಧನಂ' ಎಂದು ಮತ್ತೆ ಕೆಲವು ಚಿಂತಕರು, ದೇಹವಿಲ್ಲದೆ ಯಾವ ಚಟುವಟಿಕೆಗಳೂ, ಧಾರ್ಮಿಕ ಸಾಧನೆಯೂ ಅಸಾಧ್ಯವೆನ್ನುವುದನ್ನು ಸಾರಿ ಹೇಳಿದ್ದಾರೆ. ಆರೋಗ್ಯಕರವಾದ ದೇಹದಲ್ಲಿ ಆರೋಗ್ಯಕರ ಮನಸ್ಸು ಅಥವಾ ವಿಚಾರಗಳು ಇರುತ್ತವೆ ಎನ್ನುವುದೂ ಪ್ರಚಲಿತ ಅಭಿಪ್ರಾಯವೇ ಇದೆ. ದಾಸರೂ ಕೂಡ 'ಮಾನವಜನ್ಮ ದೊಡ್ಡದು, ಅದ ಹಾನಿ ಮಾಡಲಿಬೇಡಿ ಹುಚ್ಚಪ್ಪಗಳಿರಾ' ಎಂದು ಹೇಳುವಲ್ಲಿ ಸ್ವಸ್ಥ ದೇಹ ಸ್ವಸ್ಥ ಮನಸ್ಸಿನ ಅಗತ್ಯತೆಯನ್ನು ಹೇಳಿದ್ದಾರೆಂದು ಭಾವಿಸಬಹುದು. ಬುದ್ಧನು ದೇಹವನ್ನು ರೋಗಗಳ ಗೂಡೆಂದು ಸಾರುತ್ತಾನೆ. ಇಂತಹ ಅನೇಕ ಅಭಿಪ್ರಾಯಗಳು, ವಿಚಾರಗಳ ನಡುವೆಯೇ ಒಂದನ್ನಂತೂ ಒಪ್ಪಲೇಬೇಕು. ಯಾವ ಮನುಷ್ಯನೂ ಚಿರಂಜೀವಿಯಲ್ಲ. ಯಾರ ದೇಹವೂ ಕಾಲದ ಪರಿಣಾಮಗಳಿಂದ ಮುಕ್ತವಾಗಿ, ಚಿರಂತನವಾಗಿ ದೇಹ ದಾರ್ಢ್ಯತೆ, ಪ್ರಾಯದ ಸೊಗಸು ಸೌಂದರ್ಯಗಳನ್ನು ಉಳಿಸಿಕೊಂಡಿರಲಾರದು. ಹುಟ್ಟಿನ ಬೆನ್ನ ಹಿಂದೆಯೇ ಮುಪ್ಪು, ಸಾವುಗಳೆಂಬ ಬೇಟೆ ನಾಯಿಗಳು ಇರುತ್ತವೆನ್ನುವ ಕಟು ವಾಸ್ತವ ಸತ್ಯವನ್ನು ನಿರಾಕರಿಸಲಾಗುವುದಿಲ್ಲ. ಆದರೂ ಇರುವಷ್ಟು ಕಾಲವೂ ದೇಹದ ಬಗೆಗಿನ ಕಾಳಜಿ ಅನಿವಾರ್ಯ.

ದೇಹವನ್ನು ಸ್ವಸ್ಥವಾಗಿ, ಸುಂದರವಾಗಿ ಇರಿಸಿಕೊಳ್ಳಬೇಕು, ನೋಡುವವರ ಮನ್ಸನ್ನು ಸೆಳೆಯುವಂತಿರಬೇಕು ಎನ್ನುವುದು ಪ್ರತಿಯೊಬ್ಬ ಮನುಷ್ಯನ (ಹೆಣ್ಣಾಗಲಿ, ಗಂಡಾಗಲಿ) ಸುಪ್ತ ಆಕಾಂಕ್ಷೆಯಾಗಿರುತ್ತದೆ. ಹೆಣ್ಣು-ಗಂಡುಗಳ ನಡುವಿನ ದಿಢೀರ್ ಸೆಳೆತ ಸಂಭವಿಸುವುದೇ ಅವರವರ ಮೈಮಾಟ, ರೂಪ, ನೋಟ, ಬೇಟ, ಮಂದಸ್ಮಿತ ಮತ್ತು ಬಣ್ಣಗಳಿಂದ. ಇದೆಲ್ಲವೂ ಇದ್ದು ಸಹಜ ಸೌಂದರ್ಯವೆಂದು ಗುರುತಿಸಿಕೊಳ್ಳುವಂತಾದರೂ ಇರುವುದನ್ನು ಮತ್ತಷ್ಟು ಹೆಚ್ಚಿಸಿಕೊಳ್ಳಲು ಸೌಂದರ್ಯ ಸಾಧನಗಳು, ಸೌಂದರ್ಯ ವರ್ಧಕಗಳು ಇತ್ಯಾದಿಗಳ ಮೊರೆಹೋಗುವುದು ಎಂದಿನಿಂದಲೂ ಸಾಮಾನ್ಯ ಸಂಗತಿಯಾಗಿದೆ. ವಿಶೇಷವಾಗಿ ಹೆಣ್ಣುಗಳು ಸುಂದರವಾಗಿ ಕಾಣಿಸಿಕೊಳ್ಳಲು ನಿರಂತರ ಪ್ರಯತ್ನದಲ್ಲಿ ಇರುತ್ತಾರೆ. ಪುರುಷರೂ ಕೂಡಾ ಹೆಂಗಸರು ತಮ್ಮ ಸಹಜ ಸೌಂದರ್ಯದ ಜೊತೆಗೆ ಸರ್ವಾಲಂಕೃತ ಭೂಷಿತೆಯರಾಗಿ ಕಾಣಿಸಿಕೊಳ್ಳಬೇಕೆಂದು ಅಪೇಕ್ಷಿಸುತ್ತಾರೆ. ರಾಜಮಹರಾಜರುಗಳು ಶ್ರೀಮಂತ ಸಾರ್ವಭೌಮರು ತಮ್ಮ ಅಂತಃಪುರ ಕಾಂತೆಯರು,

ನಗರ ವಧುಗಳು ಅಥವಾ ವೇಶ್ಯೆಯರು ಮತ್ತು ರಾಜ ನರ್ತಕಿಯರು ಮೊದಲಾದವರನ್ನು ಹೀಗಿರಬೇಕೆಂದು ನಿರೀಕ್ಷಿಸುತ್ತಾರೆ; ಅಪೇಕ್ಷಿಸುತ್ತಾರೆ; ಅಂತೆಯೇ ಆ ವರ್ಗದ ಎಲ್ಲಾ ಹೆಂಗಸರೂ ಇದ್ದೂ ಇರುತ್ತಾರೆ. ಅವರ ಸೌಂದರ್ಯ, ಶೃಂಗಾರಗಳೇ ಅವರ ಬಂಡವಾಳ. ಈ ಸೌಂದರ್ಯ ಶೃಂಗಾರಗಳೇ, ರಾಜಮನೆತನಗಳ ರಾಜ್ಯಗಳ ಪತನಕ್ಕೆ, ರಾಜಕೀಯ ಸಮರಗಳಿಗೆ ಕಾರಣವಾಗಿವೆ. ಸುಂದರ ಸ್ತ್ರೀಯರನ್ನು ಪಡೆಯಲು ರಾಜ್ಯ, ರಾಷ್ಟ್ರ, ಪ್ರಜಾಕ್ಷೇಮದ ಚಿಂತೆಯೂ ಇಲ್ಲದೆ. ವಿನಾಕಾರಣ ಯುದ್ಧಗಳನ್ನು ಘೋಷಿಸಿ, ಮಣ್ಣಾದ ಎಷ್ಟೋ ರಾಜಮನೆತನಗಳು ಇತಿಹಾಸದ ಪುಟಗಳಲ್ಲಿ ಕಾಣಸಿಗುತ್ತವೆ.

ಇದು ರಾಜಮಹಾರಾಜರ ಮತ್ತು ಸಮಾಜದ ಮೇಲು ವರ್ಗದ ವಲಯಗಳಲ್ಲಿ ಸುಳಿದಾಡುವ ಹೆಣ್ಣುಗಳ ಕತೆಯಾದರೆ ಜನಸಾಮಾನ್ಯರ ಸಮುದಾಯಗಳಲ್ಲಿ ಕಟ್ಟುಪಾಡುಗಳಲ್ಲಿ ಬಿಗಿದುಕೊಂಡಿದ್ದ ಸಮಾಜಗಳಲ್ಲಿ ಹೆಣ್ಣು ಮತ್ತು ಹೆಣ್ಣಿನ ಸೌಂದರ್ಯದ ಬಗ್ಗೆ ಮಡಿವಂತಿಕೆಯ ಧೋರಣೆಗಳು ಇದ್ದುದರಿಂದ ಹೆಣ್ಣು ಅನುಭವಿಸಿದ ಬದುಕಿನ ರೀತಿಯೇ ಬೇರೆಯಾಗಿತ್ತು. ಪರಪುರುಷರ ಮುಂದೆ ಹೆಂಗಸರು ಕಾಣಿಸಿಕೊಳ್ಳಬಾರದೆಂಬ ನಿರ್ಬಂಧದ ನಿಷ್ಠುರ ಪಾಲನೆಯನ್ನು ನಿರೀಕ್ಷಿಸುವ ಸಂಪ್ರದಾಯಕ್ಕೆ ಸಮಾಜದಲ್ಲಿ ಇನ್ನು ಸುಂದರವಾಗಿ ಕಾಣಿಸಿಕೊಳ್ಳುವುದಾಗಲೀ ಸೌಂದರ್ಯವರ್ಧಕಗಳನ್ನು ಬಳಸುವುದಾಗಲೀ, ವಿಶೇಷವಾಗಿ ಅಲಂಕರಿಸಿಕೊಂಡು ಸುಳಿದಾಡುವುದಾಗಲೀ, ಊಹೆಗೂ ಮೀರಿದ ಸಂಗತಿಯಾಗಿತ್ತು. ವಿಶೇಷ ಸಂದರ್ಭಗಳಲ್ಲಿ, ಹಬ್ಬ ಹರಿದಿನಗಳಲ್ಲಿ ಮಾತ್ರವೇ ಹೆಣ್ಣುಗಳಿಗೆ ಅದರಲ್ಲೂ ಹೆಣ್ಣು ಮಕ್ಕಳಿಗೆ ಮತ್ತು ಸುಮಂಗಲಿಯರಿಗೆ ಸ್ವಲ್ಪ ಮಟ್ಟಿಗೆ ಅವಕಾಶವಿತ್ತು. ವೈಧವ್ಯದ ಉರುಳಲ್ಲಿ ನಲುಗಿ ನರಕ ಅನುಭವಿಸುತ್ತಿದ್ದ ಹೆಂಗಸರಿಗೆ ಅವರು ಎಷ್ಟೇ ಸಣ್ಣ ಪ್ರಾಯದವರಾದರೂ, ತಮ್ಮ ಸಹಜ ಸೌಂದರ್ಯವನ್ನೂ, ಅನೇಕ ನಿಷ್ಠುರ ನಿಯಮಗಳಿಂದ ವಿಕೃತಗೊಳಿಸಲಾಗುತ್ತಿತ್ತು. ಹೆಣ್ಣಿನ ಸೌಂದರ್ಯ ಅಪಾಯಕಾರಿ, ತಮ್ಮ ಸೌಂದರ್ಯದಿಂದ ಪುರುಷರನ್ನು ಅಡ್ಡದಾರಿಗೆ ತಳ್ಳುವುದಲ್ಲದೆ ಅವರ ನೈತಿಕ ಅಧಃಪತನಕ್ಕೆ ಕಾರಣರಾಗುತ್ತಾರೆ; ನರಕಕ್ಕೆ ದಾರಿ ತೋರುವ ಸೈತಾನರಾಗುತ್ತಾರೆ ಎನ್ನುವ ಅಭಿಪ್ರಾಯಗಳ ಅಪಪ್ರಚಾರದಿಂದ ಹೆಣ್ಣುಗಳನ್ನು ಎಲ್ಲ ರೀತಿಯಿಂದಲೂ ನಿರ್ಬಂಧಿಸಿ ಮಾನವೀಯ ಹಕ್ಕುಗಳಿಂದ ವಂಚಿತರನ್ನಾಗಿ ಮಾಡಿ, ದುಡಿಮೆ ಮತ್ತು ಸಂತಾನೋತ್ಪತ್ತಿ ಕ್ರಿಯೆಯಲ್ಲಿ ಮಾತ್ರವೇ ಧಾರಾಳವಾಗಿ ದುಡಿಸಿಕೊಳ್ಳಲಾಗುತ್ತಿತ್ತು. ಮುಸುಕು, ಪರದೆಗಳಲ್ಲಿ, ಕೆಂಪು ಸೀರೆಯ ದೇಹಾವರಣದಲ್ಲಿ, ಬೋಳು ತಲೆಯ ವಿಕಾರದಲ್ಲಿ, ಹೊಗೆಗೂಡಿನಂತಹ ಅಡುಗೆ ಮನೆಯಲ್ಲಿ, ಉರಿವ ಬೆಂಕಿಯ ಕಾವಿನಲ್ಲಿ ಬೇಯುವುದರ ಹೊರತು ಅನ್ಯದಾರಿಗಳಿಲ್ಲದೆ ನಿಟ್ಟುಸಿರ ನೀರವತೆಯಲ್ಲಿ ಜೀವಂತ ಶವಗಳಾಗಿ ಬದುಕುತ್ತಿದ್ದ ಕಾಲಘಟ್ಟವೊಂದಿತ್ತು.

ಕಾಲಾಂತರದಲ್ಲಿ, ಕಾಲ ಕಾಲಕ್ಕೆ ಸಂಭವಿಸುವ ಪಲ್ಲಟಗಳಿಂದ, ರಾಜಕೀಯ, ಸಾಮಾಜಿಕ, ಧಾರ್ಮಿಕ ಚಳುವಳಿ, ಕ್ರಾಂತಿಗಳಿಂದಾಗಿ, ಬೆಳೆಯುತ್ತಿದ್ದ ಶೈಕ್ಷಣಿಕ, ಬೌದ್ಧಿಕ, ವೈಚಾರಿಕ ಸಾಮಾಜಿಕ ಪ್ರಗತಿಪರ ಚಿಂತನೆಗಳಿಂದಾಗಿ, ಹೆಣ್ಣು-ಗಂಡುಗಳ ನಡುವಿನ ಅಸಮಾನತೆ, ಹೆಣ್ಣಿನ ಶೋಷಣೆ, ಅವಳ ಮೂಲಭೂತ ಹಕ್ಕುಗಳ ನಿರಾಕರಣೆಯ

ವಿರುದ್ಧ ನಡೆದ ಪ್ರತಿಭಟನೆ, ಕ್ರಾಂತಿಗಳಿಂದಾಗಿ, ಇಂದಿನ ಹೆಣ್ಣು ಮಕ್ಕಳಿಗೆ ಸಾಕಷ್ಟು ಅವಕಾಶಗಳು ಸಿಕ್ಕಿವೆ. ಅವಳ ಬಗೆಗಿದ್ದ ನಿಲುವುಗಳಲ್ಲಿ ಬದಲಾವಣೆ ಆಗಿದೆ. ತಾನು ಬದುಕಬೇಕೆಂದು ಬಯಸಿದ ರೀತಿಯಲ್ಲಿ ಬದುಕಲು ಅವಕಾಶವಿದೆ. ತನ್ನ ದೇಹದ ಮೇಲಿನ ಪೂರ್ಣ ಹಕ್ಕನ್ನು ಅವಳು ಸಾಧಿಸಿಕೊಂಡಿದ್ದಾಳೆ. ಹೆಣ್ಣಿಗೆ ತನ್ನ ಸೌಂದರ್ಯವನ್ನೇ ಬಂಡವಾಳವಾಗಿಸಿಕೊಂಡು ವಾಣಿಜ್ಯೀಕರಣಕ್ಕೆ ಒಡ್ಡಿಕೊಳ್ಳುವ ಸ್ವಾತಂತ್ರ್ಯವಿದೆ. ಸೌಂದರ್ಯಕ್ಕೆ ಎಂದೂ ಇಲ್ಲದ ಪ್ರಾಶಸ್ತ್ಯ ದೊರೆತಿದೆ. ಇದರಿಂದಾಗಿ ಇವತ್ತು ದೇಹದ ಬಗ್ಗೆ ಎಂದೂ ಇಲ್ಲದ ಅಕ್ಕರೆ, ಕಾಳಜಿಗಳು ಹೆಚ್ಚಾಗುತ್ತಿವೆ. ಹೆಣ್ಣು ಹೆಣ್ಣಾಗಿ ಪುರುಷನನ್ನು ಆಕರ್ಷಿಸುವುದು ಒಂದು ರೀತಿಯಾದರೆ, ಸಹಜವಾಗಿಯೇ ಇರುವ ಸೌಂದರ್ಯವನ್ನು ಸೌಂದರ್ಯವರ್ಧಕಗಳಿಂದ ಮತ್ತು ಕೋಟ್ಯನುಕೋಟಿ ಹಣವನ್ನು ಖರ್ಚು ಮಾಡಿ ಸ್ಪರ್ಧಾತ್ಮಕ ನೆಲೆಯಲ್ಲಿ ವೈವಿಧ್ಯಮಯ ವಿನ್ಯಾಸಗಳಿಂದ ಕೂಡಿದೆ ಉಡುಪುಗಳಿಂದ, ಆಭರಣಗಳಿಂದ ಸ್ತ್ರೀಪುರುಷರೆಲ್ಲರನ್ನೂ ಜಗತ್ತಿನಲ್ಲಿ ಬೆರಗಿನಿಂದ ಬೆಚ್ಚಿಬೀಳುವಂತೆ ಮಾಡುತ್ತಿರುವ ಚಲನಚಿತ್ರ ಜಗತ್ತಿನ ನಟಿಯರು, ಜಾಹೀರಾತು ಮಾಡೆಲ್‌ಗಳು ಔದ್ಯಮಿಕ ಕ್ಷೇತ್ರಗಳಲ್ಲಿ ವಾಣಿಜ್ಯ ಮಳಿಗೆಗಳಲ್ಲಿನ ರಿಸೆಪ್ಷನಿಷ್ಟುಗಳು ಮೊದಲಾದವರು ಹೇರಳವಾಗಿ ಕಾಣಸಿಗುತ್ತಾರೆ. ಇದೆಲ್ಲ ಕೇವಲ ಹೆಣ್ಣುಮಕ್ಕಳ ಜಗತ್ತಿಗೆ ಮಾತ್ರ ಸೇರಿದ ಸಂಗತಿಯಾಗಿ ಉಳಿದಿಲ್ಲ. ಹೆಣ್ಣಾಗಲೀ ಗಂಡಾಗಲೀ ತಾನು ಸುಂದರವಾಗಿ ಕಾಣಬೇಕೆಂಬ ಪ್ರಜ್ಞೆ ಎಲ್ಲರಲ್ಲಿಯೂ ಮನೆ ಮಾಡಿದೆ. ಆದ್ದರಿಂದ ಇತ್ತೀಚಿನ ದಿನಗಳಲ್ಲಿ, ಹೆಣ್ಣು ಮಕ್ಕಳಲ್ಲಿ ಕಾಣುವಷ್ಟೇ ತೀವ್ರವಾಗಿ ಗಂಡುಮಕ್ಕಳಲ್ಲಿಯೂ ಸೌಂದರ್ಯವರ್ಧನೆಯ ಚಟುವಟಿಕೆಗಳು ಕಾಣುತ್ತಿವೆ. ಕೇಶಾಲಂಕಾರ, ಮುಖಾಲಂಕಾರ, ವಸ್ತ್ರಾಲಂಕಾರ ವಿಷಯದಲ್ಲಿ ಪರಿಣತರಾದವರು ಅತ್ಯಂತ ಲಾಭದಾಯಕ ಉದ್ದಿಮೆಯೆಂದರಿತು ಬ್ಯೂಟಿ ಸಲೂನುಗಳ ಹೆಸರಿನಲ್ಲಿ ಅಂಗಡಿಗಳನ್ನು ಬಹಳ ಸಮರ್ಥವಾಗಿ ನಡೆಸುತ್ತಿದ್ದಾರೆ.

ದೇಹದ ಬಗ್ಗೆ ಮೊದಲಿನ ಮಡಿವಂತಿಕೆಯಿಲ್ಲ. ತನ್ನ ದೇಹ ತನ್ನ ಹಕ್ಕು ಎನ್ನುವ ಸ್ತ್ರೀವಾದ ಚಿಂತನೆಯ ಘೋಷಣೆಯ ಹಿನ್ನೆಲೆಯಲ್ಲಿ ದಿಟ್ಟ ಮತ್ತು ಸ್ವತಂತ್ರ ಮನೋಧರ್ಮದ ಹೆಣ್ಣುಮಕ್ಕಳು ಇಡೀ ದೇಹ ಅಡಿಯಿಂದ ಮುಡಿವರೆಗೆ ಹೇಗಿರಬೇಕು. ಹೇಗೆ ಸುಂದರವಾಗಿ ಕಾಣಿಸುವಂತೆ ಮಾಡಬೇಕು, ದೇಹದ ತೂಕ, ಬಣ್ಣ, ಕಾಲು, ಕಟಿ, ಉದರ, ವಕ್ಷ, ಕಂಠ, ಕಣ್ಣು, ಹುಬ್ಬು, ತುಟಿ ಇತ್ಯಾದಿ ದೇಹ ಭಾಗಗಳ ಬಗ್ಗೆ ತುಂಬಾ ಕಾಳಜಿ ವಹಿಸುತ್ತಾರೆ. ಹೆಣ್ಣುಮಕ್ಕಳು ಇಂದು ಮನೆಗೆ ಮಾತ್ರ ಸೀಮಿತವಾಗಿಲ್ಲ. ಸಾರ್ವಜನಿಕ ಕ್ಷೇತ್ರಗಳಲ್ಲಿ, ದೊಡ್ಡ ಉದ್ದಿಮೆಗಳಲ್ಲಿ, ಕಛೇರಿಗಳಲ್ಲಿ ದುಡಿಯುವುದರ ಮೂಲಕ ಆರ್ಥಿಕ ಸ್ವಾವಲಂಬಿಗಳಾಗಿದ್ದಾರೆ. ತಮ್ಮ ಕೆಲಸದ ಪರಿಸರದಲ್ಲಿ ನಾಜೂಕಾಗಿ, ಶಿಷ್ಟವಾಗಿ, ಸುಂದರವಾಗಿ ಕಾಣಿಸಿಕೊಳ್ಳುವ ಅಗತ್ಯವನ್ನು, ಪರಿಸರದ ನಿರೀಕ್ಷೆಗಳನ್ನು ಮನಗಂಡು ಪ್ರಸಾಧನ ಸಾಮಗ್ರಿಗಳಿಗೆ ಮುಗಿಬೀಳುವುದರಿಂದ ಈ ಸಾಮಗ್ರಿಗಳ ಉದ್ದಿಮೆ ಇಂದು ಎಲ್ಲಕ್ಕಿಂತ ಲಾಭದಾಯಕವಾಗಿ ಪರಿವರ್ತಿತವಾಗಿದೆ. ಸಾವಿರಾರು ಬ್ರಾಂಡ್‌ಗಳ ಕ್ರೀಮುಗಳು, ಪೌಡರ್‌ಗಳು, ಶ್ಯಾಂಪುಗಳು, ರಿಂಕಲ್ ಫ್ರೀ ಕ್ರೀಮುಗಳು, ಲಿಪ್‌ಸ್ಟಿಕ್‌ಗಳು, ಐಷೇಡ್‌ಗಳು, ನೈಲ್ ಪಾಲಿಷ್‌ಗಳು, ದೇಹದ ಚರ್ಮವನ್ನು ಕಾಂತಿಯುಕ್ತವಾಗಿ, ನುಣುಪಾಗಿರಿಸಲು

ಅತ್ಯಂತ ಆಧುನಿಕ ತಂತ್ರಜ್ಞಾನದ ರೇಜರ್‌ಗಳು, ಇತ್ತೀಚೆಗೆ ಕೇವಲ ಕ್ರೀಮಿನಿಂದಲೇ ಕೂದಲನ್ನು ಸವರಿ ತೆಗೆಯುವಂತಹ ವಿಭಿನ್ನ ಬ್ರಾಂಡಿನ ಕ್ರೀಮುಗಳು ಮಾರುಕಟ್ಟೆಯಲ್ಲಿ ಲಭ್ಯವಾಗಿದೆ. ಈ ಎಲ್ಲ ಪ್ರಸಾಧನಗಳು ಕೇವಲ ಹೆಂಗಸರಿಗೆ ಮಾತ್ರವೆ ಅಲ್ಲದೆ ಪುರುಷರಿಗೂ ಲಭ್ಯವಾಗುವಂತಿವೆ. ಈ ಪ್ರಸಾಧನಗಳು, ವಿವಿಧ ವಿನ್ಯಾಸದ ವಸ್ತ್ರಾಭರಣಗಳು ಎಷ್ಟರಮಟ್ಟಿಗೆ ಅವರನ್ನು ಪರಿವರ್ತಿಸುತ್ತದೆಯೆಂದರೆ, ಗುರುತಿಸುವುದಕ್ಕೂ ಆಗದಷ್ಟು ಮೂಲ ಸ್ವರೂಪವನ್ನು ಮರೆಮಾಚಿಬಿಡುತ್ತದೆ.

ಇಷ್ಟೊಂದು ಕಾಳಜಿಯೊಂದಿಗೆ ಕಾಪಾಡಿಕೊಳ್ಳುವ, ರೂಪಾಂತರಿಸಿಕೊಳ್ಳುವ ಅಗತ್ಯ, ಎಷ್ಟರಮಟ್ಟಿಗೆ, ಯಾರಿಗೆ ಇದೆ ಎನ್ನುವ ಪ್ರಶ್ನೆಗೆ ಉತ್ತರ ಸ್ವಲ್ಪ ಕಷ್ಟ. ಚಲನಚಿತ್ರ ಕಲಾವಿದರಿಗೆ, ರಂಗಕಲಾವಿದರಿಗೆ, ಮಾಧ್ಯಮ ಅದರಲ್ಲಿಯೂ ದೃಶ್ಯ ಮಾಧ್ಯಮದಲ್ಲಿರುವವರಿಗೆ ಮೇಕಪ್ ಅನಿವಾರ್ಯ. ನೋಡುವವರ ಕಣ್ಣಿಗೆ ಹಿತವಾಗಿ, ಆಕರ್ಷಕವಾಗಿ ಕಾಣಿಸಿಕೊಳ್ಳುವುದು ಅಗತ್ಯವೂ ಆಗಿದೆ ಮತ್ತು ನೋಡುಗರ ನಿರೀಕ್ಷೆಯೂ ಆಗಿರುತ್ತದೆ.

ಚಲನಚಿತ್ರ ನಟನಟಿಯರ ಬಗ್ಗೆ ಒಂದು ಇಮೇಜ್ ಇರುತ್ತದೆ. ಅದನ್ನು ಕಾಪಾಡಿಕೊಳ್ಳುವುದಕ್ಕಾಗಿ, ಎಷ್ಟೇ ವಯಸ್ಸಾಗಿದ್ದರೂ, ವಯಸ್ಸಿನಿಂದ ವೃದ್ಧರೆನಿಸಿಕೊಂಡವರೂ, ನೆರೆತ ಕೂದಲು, ಮುಖ, ಮೈಮೇಲಿನ ಸುಕ್ಕುಗಳಿಂದ ವಿಕೃತವಾಗಿ ಕಾಣಿಸಿಕೊಳ್ಳುವುದನ್ನು ಅಪೇಕ್ಷಿಸುವುದಿಲ್ಲ. ಆದ್ದರಿಂದಲೇ ಯಾವುದೇ ಸಂದರ್ಭದಲ್ಲಿಯೂ ಮೇಕಪ್ ಮುಖವಾಡವಿಲ್ಲದೆ ಹೊರಗೆ ಬರುವುದಿಲ್ಲ.

ಹೀಗೆ ವಿಶೇಷ ವ್ಯಕ್ತಿಗಳಿಂದ ಹಿಡಿದು ಸಾಮಾನ್ಯರವರೆಗೆ, ಪ್ರತಿಯೊಬ್ಬರಲ್ಲಿಯೂ ಸುಂದರವಾಗಿ ಕಾಣಿಸಿಕೊಳ್ಳಬೇಕೆಂಬ ಅಂತಹ ಪ್ರವೃತ್ತಿ ಇದ್ದೇ ಇದೆ.

ದೇಹವನ್ನು, ದೇಹಭಾಗವಾದ ಚಹರೆಯನ್ನು, ಸೌಂದರ್ಯವರ್ಧಕ ಅಥವಾ ಪ್ರಸಾಧನಗಳಿಂದ, ವೈವಿಧ್ಯಮಯ ವಿನ್ಯಾಸದ ಉಡುಪುಗಳಿಂದ, ನೋಡುವವರು ಕರುಬುವಂತೆ, ಬೆರಗಾಗುವಂತೆ ಮಾಡಿಕೊಳ್ಳುವುದು ಒಂದು ನೆಲೆಯಾದರೆ ಆಧುನಿಕ ಆಧುನಿಕೋತ್ತರ ಕಾಲದಲ್ಲಿ, ಜಾಗತಿಕ ಮತ್ತು ಜಾಗತೀಕರಣ ಪ್ರಭಾವಗಳಿಂದ, ಸಾಂಸ್ಕೃತಿಕ ಪಲ್ಲಟಗಳಿಂದ, ಬದಲಾಗುತ್ತಿರುವ ವಿಚಾರಗಳಿಂದ ಬದುಕನ್ನು, ಬದುಕಿನ ಶೈಲಿಯನ್ನು ರೂಪಿಸಿಕೊಳ್ಳುವುದರಲ್ಲಿ ಮತ್ತು ಇದರ ಸಂಬಂಧವಾಗಿ ದೇಹವನ್ನು ಬಳಸಿಕೊಳ್ಳುವ ರೀತಿ ಸಂಪ್ರದಾಯಸ್ಥ ಮನಸ್ಸುಗಳಿಗೆ ಆಘಾತವೆನಿಸುವಂತಾಗುತ್ತಿದೆ. ಸುಂದರ ದೇಹಗಳು ವ್ಯಾಪಾರೀಕರಣಗೊಳ್ಳುತ್ತಿವೆ. ಸ್ಪರ್ಧೆಗಳಲ್ಲಿ, ಜಾಹಿರಾತುಗಳಲ್ಲಿ, ದೇಹವನ್ನು ಸರಕಾಗಿಸಿಯೋ, ಇಲ್ಲವೆ, ಅಸಭ್ಯ, ಅಶ್ಲೀಲ ಎನ್ನುವ ಪ್ರಜ್ಞೆಯನ್ನು ಒತ್ತರಿಸಿ ನಗ್ನವಾಗಿಸಿಕೊಂಡು ಪ್ರದರ್ಶನಕ್ಕೆ ಮುಂದಾಗಿ ಕೋಟಿ ಕೋಟಿ ಹಣಕ್ಕಾಗಿ ಜೊಲ್ಲು ಸುರಿಸಿಕೊಂಡು ಅಣಿಗೊಳ್ಳುತ್ತಿರುವ ಒಂದು ವರ್ಗದ ಹೆಣ್ಣು ಗಂಡುಗಳ ಧೋರಣೆ ಒಮ್ಮೊಮ್ಮೆ ಅವರ ಮಾನಸಿಕ ವಿಕೃತಿಯೆಂಬ ಅನುಮಾನಕ್ಕೆ ದಾರಿ ಮಾಡುತ್ತಿದೆ ಎನ್ನುವುದಂತೂ ಸತ್ಯ. ದೇಹದ ಮೇಲೆ ಕನಿಷ್ಠ ಬಟ್ಟೆಯೊಂದಿಗೆ ಓಡಾಡುವ ಹೆಣ್ಣುಮಕ್ಕಳು, ಜಾಹೀರಾತುಗಳಲ್ಲಿ ಯಾವುದೇ ಭಾವ

ಭಂಗಿಯಲ್ಲಿ ಫೋಸು ಕೊಡಲು ಸಿದ್ಧರಾಗುತ್ತಿರುವ ಹೆಣ್ಣುಮಕ್ಕಳು, ನಮ್ಮ ಬಲದಾದ ಸಂಸ್ಕೃತಿಯ ಬಿಂಬಗಳಾಗಿದ್ದಾರೆ. ಮೈತುಂಬಾ ಸೀರೆಯುಟ್ಟು, ಹಣೆ ತುಂಬ ಕುಂಕುಮವಿಟ್ಟು, ಸೆರಗಿನಿಂದ ಎದೆ ಭಾಗವನ್ನೂ ಮುಚ್ಚಿಕೊಂಡೂ ಸಂಕೋಚದಿಂದ ಮುದುಡಿ ಹೋಗುವ ಗೌರಮ್ಮಗಳು ಕಾಣಸಿಗುವುದು ಯಾವುದೋ ಕಾಲದಲ್ಲಿ ಬದುಕಿದ್ದು ಕಣ್ಮರೆಯಾದ ಪ್ರಾಣಿಗಳ ಪಳಿಯುಳಿಕೆಗಳನ್ನು ಶೋಧಿಸುವಂತಾಗಿದೆ.

ಹೆಣ್ಣು, ಗಂಡುಗಳ ದೇಹಸೌಂದರ್ಯದ ಬಗೆಗಿನ ಕಾಳಜಿಗಳು ಏನೇ ಇರಲಿ, ಹೆಣ್ಣಿನ ದೇಹ, ದೇಹ ಸೌಂದರ್ಯ, ಅವಳ ಹಾವಭಾವಗಳು, ಮೋಹಕ ಭಂಗಿಗಳು, ವಿಶ್ವಾದ್ಯಂತ ಕವಿ, ಕಲಾವಿದರ, ಶಿಲ್ಪಿಗಳ ಕಡೆಗೆ ದೇವಿ ಆರಾಧಕರ, ಸೃಜನಶೀಲ ಪ್ರತಿಭೆಯನ್ನು ಕೆರಳಿಸಿರುವುದಂತೂ ನಿಜವಾಗಿದೆ. ಈ ಎಲ್ಲಾ ಸೃಜನಶೀಲ ಸಾಹಿತ್ಯ ಕಲಾಪ್ರಕಾರಗಳಲ್ಲಿ ಹೆಣ್ಣೇ ಪ್ರಧಾನವಸ್ತು. ಗಂಡು ಸೌಂದರ್ಯ ವರ್ಣನೆಗೆ ಸೀಮಿತತೆ ಇದೆ. ಪೌರುಷದ ಅಭಿವ್ಯಕ್ತಿಗಳಾದ ದೃಢಕಾಯ. ವಿಶಾಲವಕ್ಷ, ವಿಶಾಲ ಬಾಹುಗಳು, ಕೆತ್ತಿದ ಮೀಸೆ, ಇತ್ಯಾದಿಗಳಿಗಷ್ಟೆ ಸೀಮಿತ. ಒಟ್ಟಾರೆ ಸೌಂದರ್ಯವನ್ನು ಬಣ್ಣಿಸಲು, ಮನ್ಮಥನೆಂಬ ಹೋಲಿಕೆಯೊಂದನ್ನು ಕೊಟ್ಟುಬಿಟ್ಟರೆ ಮುಗಿಯಿತು.

ಕನ್ನಡ ಕಾವ್ಯಗಳಲ್ಲಂತೂ ಹೆಣ್ಣನ್ನು ನಖಶಿಖಾಂತ ವರ್ಣಿಸಲಾಗಿದೆ. ಕಣ್ಣು, ಕಿವಿ, ಮೂಗು, ಬಾಯಿ, ಹಲ್ಲು, ತುಟಿ, ಗಲ್ಲ, ಕಂಠ, ಸ್ತನ, ಕಟಿ, ತೊಡೆ, ನಿತಂಬ, ಪಾದ– ಹೀಗೆ ಒಂದೊಂದು ಅಂಗವನ್ನೂ ಹೋಲಿಕೆಗಳೊಂದಿಗೆ ರೂಪಕಗಳೊಂದಿಗೆ, ಬಾಯಿ ಚಪ್ಪರಿಸುವಂತೆ ತಮ್ಮೆಲ್ಲ ಪ್ರತಿಭೆಯನ್ನು ಧಾರೆಯೆರೆದು ವರ್ಣಿಸಿದ್ದಾರೆ.

ಇನ್ನು ದೇವಿ ಆರಾಧಕರು, ಮತ ಪ್ರವರ್ತಕರು, ಮತ ಸಿದ್ಧಾಂತಿಗಳು ತಮ್ಮ ಆರಾಧ್ಯ ದೇವಿಯರನ್ನು ಕುರಿತು ಹೂಡಿದ ಸ್ತೋತ್ರಗಳಲ್ಲಿ ಅವರ ಅಂಗಾಂಗಗಳ ಸೌಂದರ್ಯವನ್ನು ಅದ್ಭುತವಾದ ರೀತಿಯಲ್ಲಿ ಭಕ್ತಿಯ ಉನ್ಮಾದದ ಅಥವಾ ಅತಿರೇಕದ ಸ್ಥಿತಿಯಲ್ಲಿ ವರ್ಣಿಸಿದ್ದಾರೆ. ಹೆಣ್ಣಿನ ವರ್ಣನೆಯಲ್ಲಿ ಹೆಣ್ಣಿನ ಚಿತ್ರಣದಲ್ಲಿ ಯಾವುದೇ ಸಂಕೋಚವಿಲ್ಲ, ಕೀಳುಭಾವನೆಗಳಿಲ್ಲ. ಕವಿಗಳು ಸೌಂದರ್ಯಾಭಿಭೂತ ಸ್ಥಿತಿಯಲ್ಲಿ ಹೆಣ್ಣನ್ನು ವರ್ಣಿಸಿದರೆ, ಆಧ್ಯಾತ್ಮಿಕರು, ಆರಾಧಕರು, ಭಕ್ತಿ ತನ್ಮಯತೆಯಲ್ಲಿ ವರ್ಣಿಸುತ್ತಾರೆ. ಆರಾಧ್ಯ ದೇವತೆಯನ್ನು ಮಾತೃಸ್ಥಾನದಲ್ಲಿರಿಸಿ. ತಮ್ಮ ಭಕ್ತಿ ಶ್ರದ್ಧೆಯನ್ನು ನಿವೇದಿಸಿ ಆಕೆಯ ಅನುಗ್ರಹಣಕ್ಕಾಗಿ ಪ್ರಾರ್ಥಿಸುತ್ತಾರೆ.

ನಮ್ಮ ಭಾರತೀಯ ಅದರಲ್ಲೂ ದಕ್ಷಿಣ ಭಾರತದ ದೇವಾಲಯಗಳಲ್ಲಂತೂ ಸ್ತ್ರೀಶಿಲ್ಪಗಳಂತೂ, ಶಿಲ್ಪಶಾಸ್ತ್ರದಲ್ಲಿ ವಿವರಿಸಿರುವ ಅಂಗಾಂಗ ಪ್ರಮಾಣಕ್ಕೆ ಅನುಗುಣವಾಗಿ ಎತ್ತರ ಗಾತ್ರಗಳೊಂದಿಗೆ ಅತ್ಯಂತ ಕುಶಲತೆಯಿಂದ, ವಿವಿಧ ಭಾವ ಸ್ಥಿತಿಗಳನ್ನು ಅದರಲ್ಲಿಯೂ ಶೃಂಗಾರ ಅವ್ಯಕ್ತಿಯೊಂದಿಗೆ ಅತ್ಯಂತ ನೈಜತೆಯೊಂದಿಗೆ ಮೂಡಿ ನಿಂತಿರುತ್ತವೆ. ಗರ್ಭಗುಡಿಯ ದೇವರಿಗಿಂತಲೂ ದೇವಾಲಯ ಪ್ರಾಂಗಣದ ಹೊರಗಿನ ಜಾಗದಲ್ಲಿ ನೋಡುಗರ ಬೆರಗನ್ನು ಕೆರಳಿಸುವಂತಿರುತ್ತವೆ. ಆದರೆ ಒಳಹೋಗುತ್ತಿದ್ದಂತೆ ಲೌಕಿಕಾನುಭೂತಿಯಿಂದ ಮುಕ್ತವಾಗಿ ಮನಸ್ಸು ಸಾತ್ವಿಕಭಾವವಾದ ಭಕ್ತಿಗೆ ಸಂಪೂರ್ಣವಾಗಿ

ತೆತ್ತುಕೊಳ್ಳುತ್ತದೆ. ನಮ್ಮ ದೇವಾಲಯಗಳಲ್ಲಿನ ಶಿಲ್ಪಗಳೆಲ್ಲವೂ ಕೆಲವನ್ನು ಹೊರತುಪಡಿಸಿ, ಶೃಂಗಾರ ಶಿಲ್ಪಗಳೇ. ಶೃಂಗಾರ ರಸದಂತರ್ಗತ ಚಿತ್ತವೃತ್ತಿಗಳಾದ, ಸಿಟ್ಟು ಸೆಡವು ನೋವು ಸಂಕಟ, ವಿರಹ, ಮಿಲನ ಇತ್ಯಾದಿ ಇತ್ಯಾದಿಗಳೆಲ್ಲವೂ ಸಂಭೋಗ, ವಿಪ್ರಲಂಭ ಎಂಬೆರಡು ಬಗೆಯ ಶೃಂಗಾರದಲ್ಲಿ ಸೇರಿ ಹೋಗಿವೆ. ಹೆಸರಿಗೆ ರಸ ಪ್ರಭೇದಗಳು ಒಂಬತ್ತು ಇದ್ದರೂ ಗಂಡು ಹೆಣ್ಣು ತತ್ವಗಳನ್ನು ಒಳಗೊಳ್ಳುವ ರಸ ಪ್ರಕ್ರಿಯೆಯಾದ್ದರಿಂದಲೇ ಶೃಂಗಾರರಸವನ್ನು ರಾಜರಸವೆಂದೂ, ಪರಮಶ್ರೇಷ್ಠವೆಂದೂ, ಅತ್ಯಂತ ಜನಪ್ರಿಯವೆಂದೂ ಗುರುತಿಸಲಾಗಿದೆ. ಹೆಣ್ಣು-ಗಂಡು ಕೂಡುವ, ಅಗಲುವ ಸ್ಥಿತಿಗಳಲ್ಲಿ ಅವರಿಬ್ಬರ ಮನಸ್ಸುಗಳಲ್ಲಿ ನಡೆಯುವ ರಾಗಭಾವಗಳ ಸಂಘರ್ಷ ಸಂತೋಷಗಳು ಅನಾವರಣಗೊಳ್ಳುತ್ತವೆ. ಕವಿತಗಳಂತೂ ಶೃಂಗಾರರಸ ವರ್ಣನೆಯಲ್ಲಿ ಸಂಪೂರ್ಣ ತನ್ಮಯರಾಗಿಬಿಡುತ್ತಾರೆ.

ಇನ್ನು ವರ್ಣಚಿತ್ರ ಕಲೆಯಲ್ಲಿಯೂ ಹೆಣ್ಣಿನ ಬಿಂಬಗಳೇ ಪ್ರಧಾನ, ವಿಭಿನ್ನ ವರ್ಣಗಳ ಸಂಯೋಜನೆಯ ಮೂಲಕ ಹೆಣ್ಣಿನ ವಿವಿಧ ಭಾವ ಭಂಗಿಗಳನ್ನು ಅಭಿವ್ಯಕ್ತಿಸುತ್ತಾರೆ. ವಿಶ್ವಪ್ರಸಿದ್ಧ ಕಲಾವಿದ ಲಿಯೋನಾರ್ಡೋಡ ವಿಂಚಿಯ ಮೊನಾಲಿಸಾ, ಭಾರತದ ಮಹಾನ್ ಕಲಾವಿದ ರಾಜಾ ರವಿವರ್ಮನ ಶಕುಂತಲಾ, ರಾಧಾ, ವಿರಹಾಕುಲೆ ಮೊದಲಾದ ಸ್ತ್ರೀ ಕೇಂದ್ರಿತ ವರ್ಣಚಿತ್ರಗಳು ಅಮರ ಕೃತಿಗಳೆಂದು ಗುರುತಿಸಿಕೊಂಡಿವೆ. ಹೆಣ್ಣಿಲ್ಲದೆ ಕಲಾಜಗತ್ತಿಲ್ಲ, ಸಾಹಿತ್ಯ ಜಗತ್ತಿಲ್ಲ. ಮನುಕುಲದ ಹುಟ್ಟಿಗೆ, ಮುಂದುವರಿಕೆಗೂ ಅವಳೇ ಕಾರಣ. ಕೇವಲ ಪುರುಷ ಜಗತ್ತನ್ನು ಕಲ್ಪಿಸಿಕೊಳ್ಳುವುದೂ ಸಾಧ್ಯವಿಲ್ಲ. ಭೂಮಿಯನ್ನು ತಾಯಿಯೆಂದು, ಪ್ರಕೃತಿಯನ್ನು ಹೆಣ್ಣೆಂದು ಪರಿಭಾವಿಸಲಾಗಿದೆ. ಸ್ತ್ರೀತತ್ವವೇ ಪರಮಾರ್ಥ.

ಆದರೆ ಅದೇಕೋ ಏನೋ ವಿಶ್ವಸೃಷ್ಟಿ ಮೂಲವಾದ ಹೆಣ್ಣನ್ನು ಪುರುಷ ಜಗತ್ತು ಪುರುಷ ಸಮಾಜ, ಶೋಷಣೆ ಮಾಡುತ್ತ ತಮ್ಮ ವಂಶಾಭಿವೃದ್ಧಿಗೆ, ಕಾಮತೃಪ್ತಿಗೆ, ಅವಳ ದೇಹದ ಮೇಲೆ ಹಕ್ಕು ಸಾಧಿಸುತ್ತಾ ಅದರಾಚೆಗೆ ಅವಳ ಅಸ್ತಿತ್ವವನ್ನೇ ನಗಣ್ಯಗೊಳಿಸುತ್ತಾ ಹಂಗಿನ ಕೂಳಿಗೆ ಒಳಗಾಗಿಸುತ್ತಾ ಮಾನಸಿಕವಾಗಿ, ಬೌದ್ಧಿಕವಾಗಿ ಕುಬ್ಜಗೊಳಿಸುತ್ತಾ ತೀರಾ ಇತ್ತೀಚಿನವರೆಗೂ ಪುರುಷಶಾಹಿ ಸಂಕೋಲೆಗಳಲ್ಲಿ ಬಂಧಿಸಿ ಇರಿಸುತ್ತಾ ಬಂದಿತ್ತು. ಎಲ್ಲ ವಲಯಗಳಲ್ಲಿಯೂ ನಗಣ್ಯಗೊಳಿಸುತ್ತಾ ಅವಳ ಅಸ್ತಿತ್ವವನ್ನೇ ಹೊಸಕಿ ಹಾಕಿತ್ತು. ಆದರೆ ಶತಶತಮಾನದಿಂದ ನಡೆದು ಬಂದ ಈ ಸ್ಥಿತಿಯಿಂದ ಹೊರಬರಲು ಜಾಗತಿಕ ನೆಲೆಯಲ್ಲಿ ನೂರಕ್ಕೂ ಹೆಚ್ಚು ವರ್ಷಗಳಿಂದ ಹೊಸದಾಗಿ ಮೂಡಿಸಿಕೊಂಡ ಅಸ್ತಿತ್ವ ಮತ್ತು ಸ್ವಾತಂತ್ರ್ಯ ಪ್ರಜ್ಞೆಯಿಂದ ಹೋರಾಟ ನಡೆಸಿ, ಪುರುಷ ಸಮಾಜದ ಸಂಕೋಲೆಗಳಿಂದ ಹೊರಬಂದು ದೈತ್ಯ ಶಕ್ತಿಯಿಂದ ಬೆಳೆಯುವ ಅವಕಾಶವನ್ನು ಬೆಳೆಸಿಕೊಂಡಿದ್ದಾಳೆ. ಶಿಕ್ಷಣ, ಆರ್ಥಿಕ ಸ್ವಾವಲಂಬನೆ ಹೋರಾಟದ ಕೆಚ್ಚು, ಜಾಗತಿಕ ಆಗುಹೋಗುಗಳ ಅರಿವುಗಳಿಂದ ವಂಚಿತ ಹಕ್ಕುಗಳಿಗಾಗಿ ಅಧಿಕಾರ ಸ್ಥಾನಗಳಿಗಾಗಿ, ಕಾನೂನಾತ್ಮಕವಾಗಿ ಸಂವಿಧಾನಾತ್ಮಕವಾಗಿ ಹೋರಾಡಿ ಸಾಕಷ್ಟು ಮಟ್ಟಿಗೆ ಸಫಲತೆಯನ್ನು ಕಂಡಿದ್ದಾಳೆ. ಇದೇ ನೆಲೆಯಲ್ಲಿ ಗಂಡಿನ ಆಯ್ಕೆಯ ಹಕ್ಕು, ತನ್ನ ದೇಹ ತನ್ನ ಹಕ್ಕು ಎನ್ನುವುದನ್ನು

ಘೋಷಣಾತ್ಮಕವಾಗಿ ಜಗತ್ತಿನ ಮುಂದೆ ತಾನು ಬದುಕುತ್ತಿರುವ ಸಮಾಜದ ಮುಂದೆ ಸಾಬೀತುಪಡಿಸುತ್ತಿದ್ದಾಳೆ. ತನ್ನ ದೇಹವನ್ನು ಬಂಡವಾಳವಾಗಿಸಿ, ದೊಡ್ಡ ಮೊತ್ತಗಳ ಸಂಭಾವನೆ ಗಿಟ್ಟಿಸಿಕೊಳ್ಳುತ್ತಿದ್ದಾಳೆ. ಅರೆಬೆತ್ತಲೆ, ಪೂರ್ಣ ಬೆತ್ತಲೆ, ಆಂಶಿಕ ಬೆತ್ತಲೆತನವನ್ನು ಯಾವುದೇ ಮುಜುಗರಗಳಿಲ್ಲದೆ, ನಿಸ್ಸಂಕೋಚವಾಗಿ ಪ್ರದರ್ಶಿಸಿ ಅಪಾರ ಜನಪ್ರಿಯತೆ ಮತ್ತು ಅಪಾರ ಮೊತ್ತದ ಸಂಭಾವನೆಯೊಂದಿಗೆ ಬೇಡಿಕೆಯನ್ನು ಹೆಚ್ಚಿಸಿಕೊಳ್ಳುತ್ತಿದ್ದಾಳೆ. ಇದೇ ಸ್ಥಿತಿ ಗಂಡು ಸಮುದಾಯದಲ್ಲಿ ಕಾಣಿಸಿಕೊಳ್ಳುತ್ತಿದ್ದರೂ ಹೆಣ್ಣಿಗೆ ಇರುವ ಬೇಡಿಕೆಯ ಪ್ರಮಾಣ ಸಾಧ್ಯವಾಗುತ್ತಿಲ್ಲ.

ಹೆಣ್ಣೆಂದರೇನೇ ಒಂದು ಬಗೆಯ ರೋಮಾಂಚನ! ಅವಳ ಮೈಮಾಟಗಳು ಜಗತ್ತನ್ನು ಅದರಲ್ಲೂ ಪುರುಷ ಜಗತ್ತನ್ನು ಸೆಳೆದುಕೊಳ್ಳುವಲ್ಲಿ, ಸೋಲೆಂಬುದೇ ಸಾಧ್ಯವಿಲ್ಲ. ವಿಶ್ವಸೃಷ್ಟಿಕರ್ತ ಬ್ರಹ್ಮ ಮೊದಲು ಅರ್ಧನಾರೀಶ್ವರನಂತೆ ಒಂದು ಭಾಗವನ್ನು ಹೆಣ್ಣಾಗಿಯೂ ಮತ್ತೊಂದು ಭಾಗವನ್ನು ಗಂಡಾಗಿಯೂ ಸೃಷ್ಟಿಸಿದನಂತೆ. ತಾನೇ ಸೃಷ್ಟಿಸಿದ ದೇಹದರ್ಧದ ಹೆಣ್ಣನ್ನು ಕಂಡು ಸ್ತಂಭಿಸಿಹೋಗಿ, ಪೂರ್ಣಗೊಳಿಸಿ ತಾನೇ ವಿವಾಹವಾದಂತೆ. ಈ ಪುರಾಣ ಕಥೆಯ ಹಿಂದಿನ ಉದ್ದೇಶ ಇಷ್ಟೇ, ಹೆಣ್ಣು ಯಾವುದೇ ಸ್ಥಿತಿಯಲ್ಲಿದ್ದರೂ ಪುರುಷ ಬಯಸುವುದು ದೇಹವನ್ನು. ಅದರ ನಂತರವೇ ಅದರ ನೈತಿಕತೆಯ ಮತ್ತು ಪಾಪವೊ ಪುಣ್ಯವೊ ಎಂಬುದರ ಚಿಂತೆ. ಪವಾಡದಂತೆ ಕಾಣಿಸಿಕೊಳ್ಳುತ್ತಿರುವ ಹೆಣ್ಣು ಇದೇ ಕಾರಣಕ್ಕಾಗಿ ಇತ್ತೀಚೆಗೆ ಹಲವು ರೀತಿಯಲ್ಲಿ ಶೋಷಣೆಗೆ ವೈವಾಹಿಕ ಜೀವನದಲ್ಲಿನ ಕಿರುಕುಳ, ಹಿಂಸೆಗೆ, ವಿವಾಹೇತರ ಸಂಬಂಧದ ಆರೋಪ, ಅನುಮಾನಗಳಿಗೆ ಗುರಿಯಾಗಿ ಆತ್ಮಹತ್ಯೆ ಕೊಲೆಗಳಂತಹ ಶಿಕ್ಷೆಗೆ ಗುರಿಯಾಗುತ್ತಿದ್ದಾಳೆ. ಹೋರಾಟದ ಮೂಲಕ ಎಷ್ಟೇ ಸ್ವತಂತ್ರಳೆಂದುಕೊಂಡರೂ ಒಬ್ಬಂಟಿಯಾಗಿ ನಿರ್ಜನ ಪ್ರದೇಶಗಳಲ್ಲಿ ರಾತ್ರಿಗಳಲ್ಲಿ ವಿಕೃತಕಾಮಿ ಪುರುಷರಿಂದ ಲೈಂಗಿಕ ಅತ್ಯಾಚಾರಗಳಿಗೆ ಬಲಿಯಾಗುತ್ತಿರುವ ಘಟನೆಗಳು ಲೆಕ್ಕಕ್ಕೂ ಸಿಗದಷ್ಟು ಪ್ರಮಾಣದಲ್ಲಿ ನಡೆಯುತ್ತಿವೆ. ಎಂತಹ ಭಯಂಕರ, ಭೀಭತ್ಸ ಸ್ಥಿತಿಯನ್ನು ಲೈಂಗಿಕ ಅತ್ಯಾಚಾರಗಳು ತಲುಪಿವೆ ಎಂದರೆ ಸಾಮಾಜಿಕ ಸಂಬಂಧಗಳಾಗಲೀ ರಕ್ತ ಸಂಬಂಧಗಳಾಗಲೀ ಸ್ನೇಹ ಸಂಬಂಧಗಳಾಗಲೀ ವಯಸಿನ ಅಂತರವಾಗಲೀ ಯಾವುದೂ ಲೆಕ್ಕಕ್ಕೆ ಬಾರದೆ ಹೋಗಿದೆ. ತಾಯಿ, ತಂಗಿ, ಅಕ್ಕ, ಕಡೆಗೆ ಮಗಳು, ಗೆಳತಿ, ಅಪ್ರಾಪ್ತ ವಯಸ್ಸಿನ ಹೆಣ್ಣು ಮಕ್ಕಳೆಂದಾಗಲೀ, ಎಳೆ ಕೂಸುಗಳೆಂದಾಗಲಿ ಪರಿಗಣಿಸದೆ ವಿಕೃತಕಾಮ ಪಿಪಾಸುಗಳಾಗಿ ಲೈಂಗಿಕ ದೌರ್ಜನ್ಯ ನಡೆಸುವುದನ್ನು ಅಲ್ಲದೆ ಅಪರಾಧದ ಕುರುಹುಗಳೂ ದಕ್ಕದಂತೆ ಕೊಲ್ಲುವ ಸುಡುವ ರಾಕ್ಷಸೀ ಪ್ರವೃತ್ತಿಗೊಳಗಾಗಿ ಪಾಪಪ್ರಜ್ಞೆಯೇ ಇಲ್ಲದಂತೆ ಓಡಾಡುವ ಪುರುಷರನ್ನು ಮನುಷ್ಯರೆನ್ನಬಹುದೇ ಎನ್ನುವ ಸಂದೇಹ ಬಾರದೆ ಇರದು.

ದೇಹ ಪುರಾಣಕ್ಕೆ ಕೊನೆಯೇ ಇಲ್ಲದಂತೆ ಪುರಾಣಗಳನ್ನು, ಸಮಾಜಶಾಸ್ತ್ರವನ್ನು ಮತ್ತು ರಾಜಕೀಯ ಇತಿಹಾಸವನ್ನು ಶೋಧಿಸುತ್ತಾ ಹೋದಲ್ಲಿ ಸ್ತ್ರೀದೇಹ, ಸೌಂದರ್ಯಗಳಿಂದಾಗಿ ಏನೆಲ್ಲಾ ಅನಾಹುತಗಳು ಸಂಭವಿಸಿವೆ ಎನ್ನುವುದೂ, ಸ್ತ್ರೀ ದೇಹ ಸೌಂದರ್ಯದ ಭದ್ರತೆ ಯಾವ ರೀತಿಯದು ಎಂಬುದೂ ವರ್ತಮಾನದ ಸಂದರ್ಭದಲ್ಲಿನ ಪರಿಸ್ಥಿತಿ ಹೇಗಿದೆ ಎಂಬುದೂ ಸಾಕಷ್ಟು ಮಟ್ಟಿಗೆ ಸ್ಪಷ್ಟವಾಗುವುದು.

ಹಾಗಾಗಿ ದೇಹಚಿಂತನೆಯೂ ಒಂದು ಉದ್ಗ್ರಂಥವಾಗಿ ರೂಪುಗೊಳ್ಳುವ ಸಾಧ್ಯತೆಗಳು ನಮ್ಮ ಮುಂದೆ ಸ್ಪಷ್ಟ ಗೋಚರವಾಗುತ್ತಿವೆ. ಇದೇ ಕಾರಣಕ್ಕಾಗಿಯೇ ಬಹುಶಃ ಸಿಮೋನ್ ದ ಬೋವಾ ಹೆಣ್ಣಿಗಿರುವ ಜೈವಿಕ ಭಿನ್ನತೆಯೇ ಅವಳಿಗೊಂದು ಶಾಪ ಎಂದು ಹೇಳಿರಬೇಕು. ಬಂಡವಾಳಶಾಹಿ ಪುರೋಹಿತಶಾಹಿ ಇರುವಂತೆ ಪುರುಷಶಾಹಿ ಹೆಸರಿನಲ್ಲಿ, ಯಾಜಮಾನ್ಯ ಸಂಸ್ಕೃತಿಯಲ್ಲಿ ಹೆಣ್ಣಿನ ಶೋಷಣೆ ನಿರಂತರವಾಗಿ ನಡೆಯುತ್ತಿದೆ. ಶೋಷಣೆ ಎನ್ನುವುದಕ್ಕೆ ಮೊದಲಿದೆಯೇ ಹೊರತಾಗಿ ಕೊನೆಯೆಂಬುದು ಇಲ್ಲವೇ ಇಲ್ಲ. ಜಾತಿ, ವರ್ಗ, ಲಿಂಗ ಅಸಮಾನತೆ ಅಥವಾ ಭಿನ್ನತೆಯಿಂದಾಗಿ, ದುರ್ಬಲತೆಯಿಂದಾಗಿ ದೌರ್ಜನ್ಯ, ದಬ್ಬಾಳಿಕೆ ಶೋಷಣೆ ಮುಂದುವರೆಯುತ್ತಲೇ ಇದೆ, ಆದರೆ ಅದು ಭಿನ್ನ ಭಿನ್ನ ಕಾಲಘಟ್ಟಗಳಲ್ಲಿ, ಪರಿಸರದಲ್ಲಿ, ಬೇರೆ ಬೇರೆ ರೀತಿಯಲ್ಲಿ ಕಾಣಿಸಿಕೊಳ್ಳುತ್ತಿದೆ. ಕಾರಂತರು ತಮ್ಮ ಗೀತನಾಟಕಗಳಲ್ಲಿ ಒಂದಾದ 'ಸುಲಿಗೆಗೆ ಇಲ್ಲವು ಸಾವು' ಎನ್ನುವ ಕೃತಿಯಲ್ಲಿ ಯುಗ ಯುಗಗಳು ಸರಿದರೂ ಮೂಲಭೂತವಾಗಿ ಮನುಷ್ಯನಲ್ಲಿ ಇರಬಹುದಾದ ಶೋಷಕ ಪ್ರವೃತ್ತಿಯು ಮುಗಿತಾಯವಿಲ್ಲದೆ ಮುಂದುವರೆಯುತ್ತಲೇ ಇದೆ ಎನ್ನುವ ಮಾತನ್ನು ಹೆಣ್ಣಿನ ದೈಹಿಕ ಶೋಷಣೆಯ ನಿರಂತರತೆಗೆ ಅನ್ವಯಿಸಬಹುದು. ಹೆಣ್ಣಿನ ದೇಹಸೌಂದರ್ಯಗಳು ಅವಳಿಗೆ ನೈಸರ್ಗಿಕವಾಗಿ, ಜೈವಿಕವಾಗಿ ದತ್ತವಾದ ಅದ್ಭುತ ವರವಾದರೂ ಅದು ಪುರುಷನ ಅಹಂಕಾರ, ಪುರುಷನೆಂಬ ಹೆಗ್ಗಳಿಕೆ, ಜೊತೆಗೆ ಅವನಲ್ಲಿ ಸುಪ್ತವಾದ ವಿಕೃತಕಾಮ ಪ್ರವೃತ್ತಿ ಹೆಣ್ಣಿನ ಬದುಕನ್ನು ಅಭದ್ರವಾಗಿಸಿದೆ, ಅಸಹಾಯಕವಾಗಿದೆ.



# ಅದ್ದೇ ವಿಶ್ವನಾಥಪುರದ ಪ್ರಾಚೀನ ವೀರಗಲ್ಲುಗಳು

◆

ಡಾ. ಮುತ್ತುರಾಜು

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ರಾಜಾನುಕುಂಟೆ ಸಮೀಪದ ಅದ್ದೇ ವಿಶ್ವನಾಥಪುರವು ಪ್ರಾಚೀನ ಗ್ರಾಮಗಳಲ್ಲಿ ಒಂದು. ಇಲ್ಲಿನ ನಾಗರಕಟ್ಟೆಯ ಮೇಲೆ ಇರುವ ಐದು ಅಡಿ ಎತ್ತರದ ನಾಗರಕಲ್ಲು ಮತ್ತು ಗಣಪತಿ ಮೂರ್ತಿಗಳಿಂದಾಗಿ ಇಲ್ಲಿ ಪ್ರಾಚೀನ ಕಾಲದಿಂದಲೂ ಸಾಮಾಜಿಕ, ಧಾರ್ಮಿಕ, ರಾಜಕೀಯ ಚಟುವಟಿಕೆಗಳು ನಡೆದುಕೊಂಡು ಬಂದಿದೆ ಎಂದು ನಿರ್ಧರಿಸಲು ಆಧಾರಗಳಾಗಿವೆ.

ಇಲ್ಲಿಂದ ಸುಮಾರು ಒಂದು ಮೈಲಿ ದೂರದಲ್ಲಿರುವ ವಜ್ರಕಾಯ ಬ್ಲಾಸೂಮ್ ವಸತಿ ಸಮುಚ್ಚಯದ ಮುಂಬದಿಯಲ್ಲಿ ಪ್ರಾಚೀನ ಕಲ್ಲುಗಳ ಗುಂಪೊಂದು ಬಿದ್ದಿದೆ. ಅವುಗಳಲ್ಲಿ ಎರಡು ಕಲ್ಲುಗಳಲ್ಲಿ ವೀರಗಲ್ಲುಗಳನ್ನು ಬಿಡಿಸಲಾಗಿದೆ.

ಮೇಲುನೋಟಕ್ಕೆ ಇವುಗಳು ಕೇವಲವಾದ ಬಿಡಿ ಬಿಡಿ ವೀರರುಳ್ಳ ವೀರಗಲ್ಲುಗಳಾಗಿ ಕಂಡುಬಂದರೂ ಇವುಗಳ ಹಿಂದೆ ಘಟಿಸಿರುವ ಘಟನೆಗಳು, ವೀರತನ ಮತ್ತು ತ್ಯಾಗದ ದೃಷ್ಟಿಯಿಂದ ಇವು ಅತಿ ಮುಖ್ಯವೆನಿಸುತ್ತವೆ. ಅಲ್ಲದೇ ಇತಿಹಾಸ ದಾಖಲೆಯ ಕಾರಣದಿಂದಾಗಿ ಇವು ಪ್ರಾಮುಖ್ಯವನ್ನು ಪಡೆದಿವೆ.

ನಾಲ್ಕು ಅಡಿ ಎತ್ತರ ಮತ್ತು ಅಷ್ಟೇ ಅಗಲದ, ಕಾಲು ಅಡಿ ದಪ್ಪವಾದ ಸ್ಥಳೀಯ ಗ್ರಾನೈಟ್‌ನಲ್ಲಿ ಮೂಡಿಸಲಾಗಿರುವ ವೀರಗಲ್ಲೂ ಒಂದು ಬಹುತೇಕವಾಗಿ ನೆಲದಲ್ಲಿ ಹುದುಗಿಹೋಗಿದ್ದು ವೀರನೊಬ್ಬನು ನಿಂತಿರುವ ಚಿತ್ರಣ ಮಾತ್ರ ಕಾಣುತ್ತಿದೆ. ಈ ವೀರನು ತನ್ನ ಬಲದ ಕೈಯಿಂದ ಖಡ್ಗವನ್ನು ಎತ್ತಿಹಿಡಿದಿದ್ದಾನೆ. ಶಿರದಲ್ಲಿ ಶಿರೋಮುಡಿ ಇದ್ದು ಕರ್ಣಕುಂಡಲಗಳು ಮತ್ತು ಎದೆಯಲ್ಲಿ ಮಣಿಮಾಲೆಗಳಿವೆ. ಇವನ ವದನದಲ್ಲಿ ಪ್ರಶಾಂತ ಭಾವವಿದೆ. ಈತನ ನಡುವಿನ ಭಾಗವು ಭೂಮಿಯಲ್ಲಿ ಅಡಗಿರುವುದರಿಂದ ಅಲ್ಲದೇ ಮುಂಭಾಗದಲ್ಲಿ ಚಪ್ಪಡಿಕಲ್ಲುಗಳು ಅಡಗಿರುವುದರಿಂದ ಹೆಚ್ಚಿನ ವಿವರ ಮತ್ತು ವಿಷಯಗಳ ಲಭ್ಯತೆ ಇಲ್ಲ.




**ಪ್ರಾಚೀನ ವೀರಗಲ್ಲುಗಳು, ಅದ್ದೇ ವಿಶ್ವನಾಥಪುರ, ಕಾಲ ಕ್ರಿ.ಶ. ೧೫ನೇ ಶತಮಾನ**

ಈ ಪ್ರಾಚೀನ ವೀರಗಲ್ಲಿನ ವೀರನು ಯಾವುದೋ ಕಾರಣಕ್ಕಾಗಿ ತನ್ನ ಶತ್ರುಗಳೊಡನೆ ಹೋರಾಡಿ ಮಡಿದಿದ್ದಾನೆ. ಆ ಘಟನೆಯ ಸ್ಮಾರಕವಾಗಿ ಈ ಪ್ರಾಚೀನ ವೀರಗಲ್ಲು ಸ್ಮಾರಕ ನಿರ್ಮಾಣವಾಗಿದೆ. ಕ್ರಿ.ಶ. ಸುಮಾರು ೧೩ನೇ ಶತಮಾನಕ್ಕೆ ಈ ವೀರಗಲ್ಲು ಸೇರಿದುದಾಗಿದೆ.

ಇಲ್ಲಿಯೇ ಮುಂಭಾಗದಲ್ಲಿರುವ ಮತ್ತೊಂದು ವೀರಗಲ್ಲು ನಾಲ್ಕು ಅಡಿ ಎತ್ತರ ಮತ್ತು ಅಷ್ಟೇ ಅಗಲವನ್ನು ಹೊಂದಿದೆ. ಶಿಲೆಯನ್ನು ಹದ ಮಾಡಿಕೊಂಡು ಮಧ್ಯಭಾಗದಲ್ಲಿ ತ್ರಿಕೋನಾಕಾರದ ಸ್ಥಳದಲ್ಲಿ ವೀರನ ಚಿತ್ರಣವನ್ನು ಬಿಂಬಿಸಲಾಗಿದೆ.

ವೀರನು ವೀರಾವೇಶದಿಂದ ತನ್ನ ಎಡಗೈನ್ನು ಸೊಂಟದ ಮೇಲೆ ಮಡಚಿ ಇರಿಸಿಕೊಂಡಿದ್ದಾನೆ. ಎಡಗೈನ ತೋಳಿಗೆ ಬರುವಂತೆ ದುಂಡನೆಯ ಗಂಟನ್ನು ಕಟ್ಟಿಕೊಂಡಿದ್ದಾನೆ. ದಕ್ಷಿಣ ಭಾರತದ ಇತರ ವೀರಗಲ್ಲುಗಳಲ್ಲಿ ವಸ್ತ್ರದ ಗಂಟನ್ನು ಬಳಸಿ ಹಿಡಿದುಕೊಂಡಿರುವ ಚಿತ್ರಣಗಳು ಲಭ್ಯವಾಗಿವೆಯಾದುದರಿಂದ ಇದೂ ಸಹ ವಸ್ತ್ರದ ಗಂಟು ಆಗಿದೆ. ಬಲದ ಕೈನಲ್ಲಿ ಇಳಿಬಿಟ್ಟಂತೆ ಖಡ್ಗವನ್ನು ಹಿಡಿದಿದ್ದಾನೆ. ಶಿರದಲ್ಲಿ ಶಿರೋಮುಡಿ, ಭುಜದಲ್ಲಿ ಭುಜಕೀರ್ತಿಗಳಿವೆ. ಮುಂಗಾಲುವಿನಲ್ಲಿ ಹಿರಿದಾದ ಕಡಗಗಳಿವೆ. ಅಲ್ಲದೇ ಅಲಂಕಾರಯುಕ್ತ ಕಚ್ಚೆಯ ಉಡುಗೆ ಇವನಿಗಿದೆ. ಎಡಭಾಗಕ್ಕೆ ತಿರುಚಿರುವ ಪಾದಗಳಲ್ಲಿ ಬೆರಳುಗಳ ಚಿತ್ರಣ ಸ್ಪಷ್ಟವಾಗಿವೆ. ಈ ವೀರನನ್ನು ಪೂಜಿಸಲು ಮಾಲಾರ್ಪಣೆ ಮಾಡಲು ವೀರನ ಇಕ್ಕೆಲಗಳಲ್ಲಿ ಎರಡು ರಂಧ್ರಗಳನ್ನು ಮಾಡಲಾಗಿದೆ.

ಇಲ್ಲಿನ ವೀರನೂ ಸಹ ಯಾವುದೋ ಕಾರಣಕ್ಕಾಗಿ ತನ್ನ ಶತ್ರುಗಳ ಜೊತೆ ಖಡ್ಗದಿಂದ ಹೋರಾಡಿ ಮಡಿದಿದ್ದಾನೆ ಆ ನೆನಪಿಗಾಗಿ ಈ ಸ್ಮಾರಕ ನಿರ್ಮಾಣವಾಗಿದೆ.

ಕ್ರಿ.ಶ. ಸುಮಾರು ೧೫ನೆಯ ಶತಮಾನಕ್ಕೆ ಸೇರುವ ಈ ವೀರಗಲ್ಲು ಸಹ ಪ್ರಾಮುಖ್ಯತೆಯನ್ನು ಪಡೆದಿದೆ.

ಈ ಎರಡೂ ವೀರಗಲ್ಲುಗಳ ಪ್ರಾಚೀನತೆಯಿಂದಾಗಿ ಅದ್ದೇ ವಿಶ್ವನಾಥಪುರದ ಪ್ರಾಚೀನತೆಯೂ ಸಹ ಕ್ರಿ.ಶ. ಸು. ೧೦ನೆಯ ಶತಮಾನದ ಹಿಂದಕ್ಕೆ ಹೋದಂತಾಗಿದೆ. ಅಳಿವಿನ ಅಂಚಿನ ಈ ಸ್ಮಾರಕಗಳಿಗೆ ಸೂಕ್ತ ರಕ್ಷಣೆಯ ಅಗತ್ಯವಿದೆ.



# ‘ಪಾರ್ವತೀ ಪರಿಣಯ’–ಮೊದಲೆರೆಡು ಗರಿಗಳ ಶೋಧ



ಡಾ. ಕೆಳದಿ ವೆಂಕಟೇಶ್ ಜೋಯಿಸ್

೨೦೦೭ರಲ್ಲಿ ಕೆಳದಿ ಲಿಂಗಣ್ಣಕವಿಯ ಪಾರ್ವತೀ ಪರಿಣಯ ಕೃತಿಯೊಂದು ನನ್ನ ಸಂಪಾದಕತ್ವದಲ್ಲಿ ಪ್ರಕಟವಾಗಿದೆ. ಕೆಳದಿ ವಸ್ತುಸಂಗ್ರಹಾಲಯ ಮತ್ತು ಇತಿಹಾಸ ಸಂಶೋಧನಾ ಕೇಂದ್ರದಿಂದ ಪ್ರಕಟವಾದ ಈ ಕೃತಿಯ ಪ್ರಸ್ತಾವನೆಯಲ್ಲಿ ಇದೇ ಶೀರ್ಷಿಕೆಯ ೨೪೭ನೇ ಹಸ್ತಪ್ರತಿಯ ಪರಿಚಯದಲ್ಲಿ ಮೊದಲ ಎರಡು ಓಲೆಗರಿಗಳು ಹಾಗೂ ಮೊದಲನೆಯ ಆಶ್ವಾಸವಿಲ್ಲದಿರುವುದನ್ನು ಪ್ರಸ್ತಾಪಿಸಿದ್ದೆ. ಇತ್ತೀಚೆಗೆ ರಾಷ್ಟ್ರೀಯ ಹಸ್ತಪ್ರತಿ ಸಂಪನ್ಮೂಲ ಮತ್ತು ಸಂರಕ್ಷಣಾ ಕೇಂದ್ರದ ಸಹಕಾರದಿಂದ ಕೆಳದಿ ವಸ್ತು ಸಂಗ್ರಹಾಲಯದಲ್ಲಿನ ಹಸ್ತಪ್ರತಿ ಸಂರಕ್ಷಣೆ ಕೈಗೊಂಡ ಸಂದರ್ಭದಲ್ಲಿ ಹಸ್ತಪ್ರತಿ ೨೩೨ರ ಕಟ್ಟಿನಲ್ಲಿ ಈ ಕೃತಿಯ ಮೊದಲನೇ ಎರಡು ಓಲೆಗರಿಗಳು ಕಂಡುಬಂದಿವೆ. ಇದರಿಂದಾಗಿ ಅಪೂರ್ಣಗೊಂಡಿದ್ದ ಕೃತಿಯೊಂದು ಪೂರ್ಣಗೊಳ್ಳಲು ಸಹಕಾರಿಯಾಗಿದೆ. ವಿದ್ವಾಸರ ಗಮನಕ್ಕಾಗಿ ಅದನ್ನಿಲ್ಲಿ ಪ್ರಸ್ತುತಪಡಿಸಲಾಗಿದೆ.

ಓಲೆಗರಿ ಹಸ್ತಪ್ರತಿ ವಿವರ: ಸಂಖ್ಯೆ ೨೪೨ರ ಕಟ್ಟಿನಲ್ಲಿ ಲಭ್ಯವಿದ್ದ ಕೃತಿಗಳು ಇಂತಿವೆ. ಇವು ಈಗಾಗಲೇ ಪ್ರಕಟವಾಗಿವೆ. ಈಗ ದೊರೆತಿರುವ ಸಂಖ್ಯೆ ೨೩೨ರ ಕಟ್ಟಿನಲ್ಲಿ ದೊರೆತಿರುವ ೨ ಗರಿಯಲ್ಲಿ ಲಭ್ಯವಿರುವ ಮಾಹಿತಿ ಈವರೆಗೆ ಪ್ರಕಟವಾಗದೆ ಉಳಿದಿವೆ.

| ಗ್ರಂಥ ಸಂಖ್ಯೆ | ಗ್ರಂಥಗಳು | ಲಿಪಿ | ಭಾಷೆ | ಪ್ರಮಾಣ | ಸ್ಥಿತಿ | ವಿಶೇಷ ವಿಷಯ |
|---|---|---|---|---|---|---|
| ೦೧ | ಪಾರ್ವತೀವಲ್ಲಭ ಶತಕ | ಕ | ಕ | ೩೭.೫x೫.೫ ಸೆಂಮೀ | ಉತ್ತಮ | ಪ್ರಕಟವಾಗಿದೆ |
| ೦೨ | ಗಣಸಹಸ್ರನಾಮ | ಅದೇ | ಅದೇ | ೩೫.೫x೫.೩ ಸೆಂಮೀ | ಅದೇ | ಕೆಎಂಹೆಚ್ಆರ್‌ಬಿ ಸಾಲು ೧೩ ಓಲೆ ಪತ್ರ ೫ |
| ೦೩ | ನರಹರಿ ವಿಜಯ | ಅದೇ | ಅದೇ | ೩೪x೫.೩ ಸೆಂಮೀ | ಅಸಮಗ್ರ | ಅದೇ ಸಾಲು ೭ ಪತ್ರ ಸಂಖ್ಯೆ ೬ ಖಾಲಿಗರಿ ೧ |

೧೪ ಪಾರ್ವತೀ ಪರಿಣಯ ಅದೇ ಅದೇ ೨೮.೫x೫.೫ ಸೆಂಮೀ ಸಮಗ್ರ ಅಪ್ರಕಟಿತ, ಸಾಲು ೯, ಪತ್ರಸಂಖ್ಯೆ ೨

ಈ ಕಟ್ಟಿನ ಹಸ್ತಪ್ರತಿಗಳನ್ನು ಸಂರಕ್ಷಣೆಗೆ ಒಳಪಡಿಸುವ ಸಂದರ್ಭದಲ್ಲಿ ಈ ಎರಡು ಗರಿಗಳು ೨೮.೫ x೫.೫ ಸೆಂ.ಮೀ. ಪ್ರಮಾಣದಲ್ಲಿದ್ದು ಉಳಿದ ಪತ್ರಗಳ ಸಾಲಿಗೆ ಸೇರುತ್ತಿರಲಿಲ್ಲ. ಆದರೆ ತಾಳೆಯೋಲೆಯ ೨ನೇ ಪತ್ರದ ಮುಂಭಾಗದಲ್ಲಿನ ೫ನೇ ಸಾಲಿನಲ್ಲಿ "ಪಾರ್ವತೀ ಪರಿಣಯ ದೊಪ್ಪುವೀ ಕೃತಿಗೆ" ೬ನೇ ಸಾಲಿನಲ್ಲಿ "ಸುರವರ ಲಿಂಗಣಾಖ್ಯ ಬುಧ" ಈ ಅಂಶಗಳು ೨೦೦೭ರಲ್ಲಿ ಪ್ರಕಟವಾದ ನನ್ನ ಸಂಪಾದನೆಯಲ್ಲಿ ಪ್ರಸ್ತಾವನೆಯಲ್ಲಿ ನಿರೂಪಿಸಿದಂತೆ ನನ್ನ ನಂಬಿಕೆಯು ದೃಢೀಕರಣಗೊಂಡಿದೆ. ಇದು ಸಂರಕ್ಷಣೆಯ ಮಹತ್ವವನ್ನು ತೋರಿಸುತ್ತದೆ. ಕವಿ ಲಿಂಗಣಾಖ್ಯನು ಈ ಉಪೋದ್ಘಾತವನ್ನು ಈ ಕಟ್ಟಿನಲ್ಲಿಯೇ ಇರಿಸಿದ್ದು ಪಾರ್ವತೀ ಪರಿಣಯ ಕಟ್ಟಿಗೆ ಸೇರಿಸಲು ಏಕೆ ಕೈಬಿಟ್ಟಿದ್ದಾನೋ ತಿಳಿಯದು. ಬಹುಶಃ ಅನಂತರದ ಕಾಲಘಟ್ಟದಲ್ಲಿ ಈ ಎರಡು ಗರಿಗಳು ಹೀಗೆ ಬೇರೊಂದು ಕಟ್ಟಿನಲ್ಲಿ ಸೇರಿದ್ದರೂ ಆಶ್ಚರ್ಯವಿಲ್ಲ. ಈ ಗರಿಗಳು ತುಲನಾತ್ಮಕ ಅಧ್ಯಯನಕ್ಕೆ ಸಮಗ್ರ ಕೃತಿಯ ಭಾಗವೊಂದು ಲಭಿಸಿದುದು ಸಂಶೋಧನೆಗೆ ಸಹಕಾರಿಯಾದಂತಾಗಿದೆ.

**ಪಾರ್ವತೀ ಪರಿಣಯ ಕಾವ್ಯ**

**ಓಲೆಗರಿ** : ಪ್ರಮಾಣ: ಉದ್ದ ೨೮ x ೫.೭ ಸೆಂ.ಮೀ. : ಲಿಪಿ : ಕನ್ನಡ ; ಭಾಷೆ: ಕನ್ನಡ, ಓಲೆ ಸಂಖ್ಯೆ : ೨

ತ್ರುಟಿತ ಭಾಗಗಳು, ಹಾಗೂ ಹುಳು ತಿಂದ ಭಾಗಗಳು, ಹಸ್ತಪ್ರತಿ ಸಂಖ್ಯೆ : ೨೩೨ : ಸಾಲು ೯ ಪತ್ರ ಸಂಖ್ಯೆ ೩೧, ಇದರಲ್ಲಿ ಪಾರ್ವತೀವಲ್ಲಭ ಶತಕ ಗಣ ಸಹಸ್ರನಾಮ.

**ಓಲೆ ಸಂಖ್ಯೆ ೧ ಮುಂಭಾಗ**

ಸಾಲು ೧ ಶ್ರೀಗಣಾಧಿಪತಯೆ ನಮಃ ॥ ಪಾರ್ವತೀ ಪರಿಣಯ ಕಾವ್ಯಮಂ ಬರೆವುದಕ್ಕೆ ಶುಭಮಸ್ತು ॥

ನಿರ್ವಿಘ್ನಮಸ್ತು ॥ ವೃತ್ತ ॥ ಶ್ರೀಮದ್ಭೂಧರ ಸಾರ್ವಭೌಮ ತನಯಾಪಿ ಸಸ್ತ

೨ ನಾಲಂಕೃತೊ । ದ್ದಾಮಶ್ರೀಘು ಸ್ತುಣಾ (ಹರಿದಿದೆ) ತನಪ್ರವಿಲ ಸದ್ವಕ್ಷಸ್ಥಲಾರಾಜಿತಂ ॥

ಸೊವೊತ್ತಂಸನ ಪಾರಭೂ (ತಿ) (ರಿ) ಮಹಿಮಂ ತಾರುಣ್ಯರತ್ನಾಕರಂ ಪ್ರೇಮಂಬೆ

೩ ತ್ತೆ ಮಗೀಗೆ ಸಾಂಬಶಿವನತ್ಯಾನಂ (ಹರಿದಿದೆ) ವ ಸಂದೊಹಮಂ ॥ ೧ ॥
ಮೆರೆವ ವಿಶಾಖ ಮಂತ್ಮತೆಯುಮಾಗಿ ಫಲಪ್ರಜೆಯಪ್ಪ ಕಲ್ಲಳಿಂ ।
ಗೆರೆಯನಪುತ್ರಿಯೆಂದೆನಿಸಿ

೪ ಯುಂ ಕರುಣಾಸ್ಪದೆಯಸ್ಸಭಿ (ಓಲೆಗರಿ ತುಂಡಾಗಿದೆ) ಕಂ ।
ಗರಸಿಯು ಮಾಗಿಯುಂ ನಿಖಿಲ ಭಾಗ್ಯಸುಖಂಗಳನಿತ್ತು ಭಕ್ತರಂ।
ಪೊರೆವ ಮಹತ್ವವಾಂತ್ತ ಶಿವೆಯಾಗೆ

೫ ಸಮಸ್ತ ಮನೊಭಿವಾಂಛ್ಬೆಯ (ಓಲೆತುಂಡಾಗಿದೆ) ॥ ೨ ॥
ಕಂದವಾರಣಮುಖಂಗೆ ವಿಘ್ನನಿ ।ವಾರಣ ನಿಪುಣಂಗೆ ನಿಗಮವಿನು-
ತಂಗೆ ಶುಭಾ ॥ ತಾರಂಗಂ ನಿಖಿಲಜಗ । ತ್ಕಾ

೬ ರಣನಿಪುಣಂಗೆ ಮೊದಲೊಕಾನ (ಓಲೆತುಂಡಾಗಿದೆ) ನಪ್ಪೆಂ ॥೨॥
ಚಾರುಪದಂ ನ್ಯಾಸಾಲಂ । ತಾರವಿಚಿತ್ರಾರ್ಥ ರಾಗರಸ ರಂಜನೆಯಿಂ॥
ಶಾರದೆ ನಲವಿಂಮಜ್ಜಿ। ಹ್ವಾರಂಗೆ

೭ ಸ್ಥಳದೊಳೊಲ್ದು ನರ್ತಿಪುದನಿರ ॥ ೪ ॥ ಮೂಲೋಕಂಗಳ
ನಲೆದುರೆ । ಘೀಳಿಡಿಸಿದ
ಶೂರಸಿಂಹ ಮುಖತಾರರಂ ॥ ಕಾಳಗದೆ ಗೆಲ್ದು ಸಕಲಸು । ರಾಳಿ

೮ ಯಸಲಹಿದ (ಫಹಾ) (ಓಲೆ ತುಂಡಾಗಿದೆ) ಸೋತು (ಲಿಪಿಯಿಲ್ಲ)
(ಓಲೆ ತುಂಡಾಗಿದೆ)

ಜಗಮಂ ॥ ೫ ॥ ವೃತ್ತ ॥ ಶರದಮ್ಮತಾಂಶು ಹತರಸ ದೃಶಪ್ರಭ
ನದ್ರಿವಿಭೆದನಾದಿನಿ । ರ್ಜರ
ನಿಕುರಂಬ ಸಂನುತಾ (ಓಲೆ ತುಂಡಾಗಿದೆ)

೮ ಶೆಷ ಮಹಾಪ್ರಮಥ (ಓಲೆ ತುಂಡಾಗಿದೆ) ಧಿನಾಥನ । ತ್ವುರುತರ
ಸತ್ಪ್ರಭಾವನಭವ ಪ್ರತಿಪಕ್ಷವನ್ಯತದಾವನೀ । ಶ್ವರನ ಪರಾವತಾರ
ನೊಲಿದೆಂಮುವನೋ (ಲು)ಗೆ
ನಂದಿಕೆಶ್ವರಂ ॥ ೬ ॥ (ಓಲೆ ತುಂಡಾಗಿದೆ)

ಹಿಂಭಾಗ

೧ ತ್ತುನಂದಿಕೆಶ್ವರನಂ ಪ್ರಾರ್ಥನಂ ಗೆದನತ್ತರಂ ॥ ೭ ॥ ಭಾಸುರ ವಾಲ್ಮೀಕಿಯುಮಂ।
ವ್ಯಾಸನುಮಂ ಕಾಳಿದಾಸನುಮನುರು ಕವಿತಾ ॥ ಗ್ರೆಸರ ದಂಡಿಯುಮಂ ನೆನೆ।
ದೀಸುಮನಃ (ಓಲೆ ತುಂಡಾಗಿದೆ)

೨ ವಿರಚಿಸುವೇಂ ॥ ೮ ॥ (ಓಲೆ ತುಂಡಾಗಿದೆ) (ಜಾ) ಮರಸನುಮ ಸತ್ಕವಿ । ಭೀಮನುಮಂ ರಾಘವಾಂಕನಂ ಹಂಪೆಯನಿ । ಸ್ಸೀಮ ಹರಿದೇವನಂ ನೆನೆ । ದೀಮಂಜುಲಕೃತಿಯನೊರವೆನತಿಮುದದಿಂದಂ ॥ ೯ ॥ (ಓಲೆ ತುಂಡಾಗಿದೆ)

೩ ಂತ್ತುಪುರಾತನ ಕವೀಂದ್ರ (ಓಲೆ ತುಂಡಾಗಿದೆ)ರಂ ಬಲಗೊಂಡೊ (ಓಲೆತುಂಡಾಗಿದೆ) (ಡ) ನೆ । ಸ್ಕಾಂದಾದಿ ಪುರಾಣಂಗಳೋಳ್ಪೇಳ್ದ ಗಿರಿಜಾ ವಿವಾಹೊತ್ಸವ ಮಹಾಪುಣ್ಯ ಕಥಾಪ್ರಸಂಗಮಂ ಸೂಕ್ಷ್ಮರೂ (ಓಲೆ ತುಂಡಾಗಿದೆ)

೪ ದಿಂ ಕ್ರೊಡೀಕರಿಸಿ ಪಾರ್ವತೀಪರಿಣಯಮೆಂದೀಕೃತಿಗೆ ನಾಮಾಂಕಿತಂಗೈದು ॥ ೧೦ ॥ ಕಂದ ಪವಣಿನಲೇ ಸತ್ಕೃತಿಯಂ । ಭುವನ ಜನರ್ತಿಳಿವಮಾ

೫ ಳ್ಕೆಯಿಂ ಸಂಸ್ಕೃತ ತ । ದ್ಭವ ಕರ್ನಾಟಕ ಭಾಷಾ । ವಿವರಣೆಯಿಂ ವಸ್ತುಕೃತ ಮಾರ್ಗದೊಳುಸುರ್ವೆಂ ॥ ೧೧ ॥ ಶ್ರೀಮತ್ಕವಿತಾಂಭೂನಿಧಿ । ಸೋಮನು

೬ ಗುಣೈಕಥಾಮಶಿನಿಸ್ಸೀಮಭರ್ೂಮಹಿಕರ್ಲಾ (ವಿಪುದ್ಮ) (ಬಿ) ರಾಮರ್ವಿದ್ವಲ್ಲ ಲಾಮರೆಸಿವೀ ಕೃತಿಯಂ ॥ ೧೨ ॥ ಕಸಮಿತೆತಳದದನು

೭ ಕಿಸೆ । ವಿಸರೆ ಸಕ್ಕರೆಯವೊಪ್ಪು (ಓಲೆ ತುಂಡಾಗಿದೆ) ಕೃತಿಯೊಳ್ಬಾವಿಸಿಕೊಂತುಗಳರ ಸೈತುಗೊ । ಳಿಸಿ ಗುಣಮಂ ಮೆರೆದು ಲಾಲಿಪುದು ಸುಜನರ್ಕಳ್ ॥ ೧೨ ॥

೮ ವೃತ್ತ ॥ (ನೀ) ರಕ್ಷಿಣ ವಿಭೆದಮಂ ಪರಿಕಿಸಲ್ಕಾಯಂ (ಓಲೆ ತುಂಡಾಗಿದೆ) ಬಲ್ಲಂದದಿಂ ಕ್ರೂರಾಸೃತ್ಪ ಜಳೂಕಮೆತ್ತಮ (ತ್ರಿ)ಗುಂ ಪ್ರೊದ್ಯದ್ರಸಾಸಾರಮಂ ॥ ಬೀರುತ್ತಿರ್ಪಮನೋಜ್ಞತಾ

೯ ನ್ಯದೊಳಮಂಚತ್ಸದ್ಗುಣವ್ರಾತಮಂ ಥೇದರ್ಬಿಲ್ಲವಾಲನ್ಯ ರೆನತಿವರೆಗ್ಗರ್ದುರ್ಗುಣ ಗ್ರಾಹಿಗಳ್ ॥ ೧೪ ॥ ಕಂ ॥ ಪರಿಹಾಸಕನಿಲ್ಲದ ಸಭೆಯುರುವಿಕೃತಿಯ ದಿಟ್ಟೆಬೊಂ

**ಉಲ್ಲೇಖದ ೨ನೇ ಪತ್ರದ ಮುಂಭಾಗ**

೧ ಬೆಯಲ್ಲದಚಿತ್ರಂ । ನೆರೆಕೊಂಗಿಯಿಲ್ಲದಾಟಂ । ಮೆರಗು (ರು) ತುಕವಿಯ ಕುತರ್ಕಮಿಲ್ಲದೆ ಕಾವ್ಯಂ ॥ ೧೫ ॥ ಅದರಿಂ ಖೂಳರ್ಮರ್ಗುಣ । ಸದನರ್ಪಳಿಯಲ್ಕೆ ಕೊರತೆಯೇ

೨ ಂ ಸೂರಿಗಳೂ । ಪ್ಪಿದೊಡದೆಸಾಲ್ಲುಂ (ಓಲೆ ತುಂಡಾಗಿದೆ) ಯಿಗಾ । ಗದೋದೇನುಳಿದರ್ಗೆ ಸೇವ್ಯಮಾಗದೆದುಗ್ಧಂ ॥ ೧೬ ॥ ಕಾಳಿದಾಸಾದಿ ಕೃತಿಗಳ। ನೇಳಿಪರೆಸಿಕುಕವಿ

೩ ನಿಕರಮುಳಿದರಕೃತಿಗೇ ॥ ಳ್ದೇ (ಓಲೆ ತುಂಡಾಗಿದೆ) ಸದಿರ್ಪರೆ ಮದಶುಂ । ದಾಲಿಂಪೋಪದೆಯೊಳೊದರ್ಮಾಡೇಂ ಜಂಪುಕಗಳ್ ॥ ೧೭ ॥ ಬಗೆಯಲ್ಸರ್

೪ ಜ್ಞಂಮೂಜಗದೊಳ್ ಶಿವನಲ್ಲಡಿಲ್ಲವದು ಕಾರಣದಿಂ ॥ ಸುಗುಣ ವೀಕ್ರತಿಯೊಳಂತ । ಪ್ಪುಗಳಿರೆ ಮನಮೊಲ್ದು ತಿದ್ದಿಮೆರೆವುದುಗು

೫ ಣಮಂ ॥ ೧೮ ॥ ವೃತ್ತ ॥ ಪತಿಕಿ (ಓಲೆ ತುಂಡಾಗಿದೆ) ಡೀಲ ಸತ್ಕೃತಿ ಯ ನಾಮಮದಾವುದೆನಲ್ಕೆ ಪಾರ್ವತೀ । ಪರಿಣಯ ಮೊಪ್ಪುವೀ ಕೃತಿಗೆ ನಾ

೬ ಯಕನಾರೆನೆ ವಿಶ್ವಮೆಲ್ಲಮಂಪೊರೆವ ಮಹೆಶನೀಕೃತಿಯು ನಾಲಿಸೆ ಪೇಳ್ದಾವನಾರೆನಲ್ಕೆಭೂ । ಸುರವರ ಲಿಂಗಣಾಖ್ಯ ಬುಧ (ಓಲೆ ತುಂಡಾಗಿದೆ)

೭ ದೆನೆ ಮೆಚ್ಚದರಾರ್ಥ ತಿತ್ರಿಯೊಳ್ ॥ ೧೦ ॥ ಕಂದ ॥ ಯಿದು ಸಕಲ ಮಂಗಲಾಸ್ಪದಮಿದು ಸರ್ವಾಭೀಷ್ಟ ಸಿದ್ಧಿಕಾರಣ ಮಹುದಿಂ । ತ್ತಿದು ಪರಮ (ಓಲೆ ತುಂಡಾಗಿದೆ)

**ಹಿಂಭಾಗ**

೧ ಸಾಧನ । ಮಿದು ಸರ್ವೋತ್ಕೃಷ್ಟ ಮೆನಿಪುದವನೀತಳದೊಳ್ ॥ ೨೦ ॥ ಮೆರೆವೀ ಸತ್ಕೃತಿಯಂ ಮಿಗೆ । ಬರೆದೋದುವ ಪೇಳ್ವಕೇಳ್ವಸುಜನರ್ಗನಿಶಂ ॥ (ಕರಾ) (ಓಲೆ ತುಂಡಾಗಿದೆ)

೨ ಛ್ಟಿತಾರ್ಥೋ । ತ್ಕರೆಗಳನೊಸೆದಿತ್ತು ಮುದದೆಪೊರೆವನು ಮೆಶಂ ॥ ೨೧ ॥ ಗದ್ಯ ॥ (ಮುಂದೆ ಖಾಲಿ ಇದೆ)

■

# ಈ ಸಂಚಿಕೆಯ ಲೇಖಕರು


* **ಡಾ. ಎಂ.ಜಿ. ವಾರಿ,** ಚಾಲುಕ್ಯ ನಗರ, ೫ನೇ ತಿರುವು, ಬಾದಾಮಿ–೫೮೭೨೦೧, ಜಿ. ಬಾಗಲಕೋಟೆ, ದೂ : ೯೮೪೪೬೬೨೪೮೯
* **ಬಸವರಾಜ ಕೋಡಗುಂಟಿ,** ಕರ್ನಾಟಕ ಕೇಂದ್ರೀಯ ವಿಶ್ವವಿದ್ಯಾಲಯ, ಕಡಗಂಚಿ, ಕಲಬುರಗಿ–೫೮೩೩೬೭, ದೂ: ೯೯೧೬೦೫೩೦೫೭
* **ಡಾ. ಕೃಷ್ಣ ಕೊಲ್ಹಾರಕುಲಕರ್ಣಿ,** 'ಮಹಿಪತಿ', # ೬೩೩, ಕೀರ್ತಿನಗರ, ಮೊ. ೯೩೪೨೦೧೮೭೦.
* **ಡಾ. ವಿ.ಎಸ್. ಬಡಿಗೇರ,** ಪ್ರಾಧ್ಯಾಪಕರು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ–೫೮೩೨೭೬, ಹೊಸಪೇಟೆ ತಾಲ್ಲೂಕು, ಬಳ್ಳಾರಿ ಜಿಲ್ಲೆ. ದೂ: ೯೪೪೮೮೪೫೭೮೯
* **ಡಾ. ಆರ್. ಲಕ್ಷ್ಮೀನಾರಾಯಣ,** # ೧೨, ಶ್ರೀನಿಕೇತನ, ೨ನೆಯ ಕ್ರಾಸ್, ಶಿವಾನಂದನಗರ, ಮೂಡಲಪಾಳ್ಯ, ಬೆಂಗಳೂರು–೫೬೦೦೭೨. ದೂ: ೯೪೮೯೦೨೮೯೬
* **ಕೆ. ಸುಂದರ ರಾಜ್,** # ೩೨೭, 'ಕೃಷ್ಣಾ', ೪ನೇ ಮೇನ್, ೯ನೇ ಕ್ರಾಸ್, ಆವಲಹಳ್ಳಿ ಬಿ.ಡಿ.ಎ. ಬಡಾವಣೆ (ಗಿರಿನಗರ), ಬನಶಂಕರಿ ೩ನೇ ಹಂತ, ಬೆಂಗಳೂರು–೫೬೦೦೮೫.
ದೂ: ೯೬೮೬೭೪೧೯೫೮
* **ಡಾ. ವೀರಣ್ಣ ದಂಡೆ,** ವಿಶ್ರಾಂತ ಪ್ರಾಧ್ಯಾಪಕರು, **ಡಾ. ಜಯಶ್ರೀ ದಂಡೆ,** ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಸಂಸ್ಥೆ, ಗುಲಬರ್ಗಾ ವಿಶ್ವವಿದ್ಯಾಲಯ, ಕಲಬುರಗಿ–೫೮೫೧೦೬, ದೂ: ೯೬೮೬೭೪೧೯೫೮
ದೂ: ೯೪೪೮೭೭೮೯೯೧
* **ಡಾ. ಬಿ. ನಂಜುಂಡಸ್ವಾಮಿ,** ಪಂಡಿತ್ ತಾರಾನಾಥ್ ಆಯುರ್ವೇದ ಚಿಕಿತ್ಸಾಲಯ, ತುಮಕೂರು ಷಾಪಿಂಗ್ ಕಾಂಪ್ಲೆಕ್ಸ್, ಬಿ.ಹೆಚ್. ರಸ್ತೆ, ತುಮಕೂರು–೫೭೨೧೦೨. ದೂ: ೯೮೮೯೯೬೮೯೬
* **ಎಚ್. ಶಶಿಕಲಾ,** ಸಹಾಯಕ ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಕೇಂದ್ರ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.
* **ಡಾ. ವಿಜಯಾ ಸುಬ್ಬರಾಜ್,** # ೫೧, 'ಹಂಸಿ', 'ನೇ 'ಎ' ಕ್ರಾಸ್, ೩೫ನೇ ಮೈನ್, ಬನಗಿರಿ ನಗರ, ಬನಶಂಕರಿ ೩ನೇ ಹಂತ, ಬೆಂಗಳೂರು–೫೬೦೦೮೫.
* **ಡಾ. ಮುತ್ತುರಾಜು,** # ೩೩೩, ೪೦ ಅಡಿ ಮುಖ್ಯರಸ್ತೆ, ಕುಮಾರಸ್ವಾಮಿ ಬಡಾವಣೆ, ೨ನೇ ಹಂತ, ದೂ: ೯೮೪೫೭೭೯೬೫೦
* **ಡಾ. ಕೆಳದಿ ವೆಂಕಟೇಶ್ ಜೋಯಿಸ್,** ಕೆಳದಿ–೫೭೭೪೦೧, ಸಾಗರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. ದೂರವಾಣಿ : ೯೪೪೮೮೩೭೩೯.

# ಬಿ.ಎಂ.ಶ್ರೀ. ಪ್ರತಿಷ್ಠಾನ

'ಕನ್ನಡದ ಕಣ್ವ' ಆಚಾರ್ಯ ಬಿ.ಎಂ.ಶ್ರೀಕಂಠಯ್ಯನವರು ಹೊಸಗನ್ನಡದ ಯುಗಪುರುಷರು; ಇಂತಹ ಆಚಾರ್ಯಪುರುಷರ ಹೆಸರಿನ ಈ ಸಂಸ್ಥೆ ಸೃಜನ ಮತ್ತು ಸಂಶೋಧನ ಎರಡೂ ಸಾಹಿತ್ಯ ಕ್ಷೇತ್ರಗಳಲ್ಲಿ ದುಡಿಯುತ್ತಿದೆ. ಒಂದು, ಪ್ರಾಚೀನ ಸಾಹಿತ್ಯದ ಪರಿಷ್ಕರಣ; ಇನ್ನೊಂದು, ಆಧುನಿಕ ಸಾಹಿತ್ಯದ ಪುರಸ್ಕರಣ. ಈ ಸಂಸ್ಥೆಯನ್ನು 1979ರಲ್ಲಿ ಪ್ರೊ. ಎಂ.ವಿ. ಸೀತಾರಾಮಯ್ಯನವರು ಸ್ಥಾಪಿಸಿದ್ದು, ಇದು ಯಶಸ್ವೀ ಮೂವತ್ತನಾಲ್ಕು ವರ್ಷಗಳನ್ನು ಪೂರೈಸಿ 2004ರಲ್ಲಿ ರಜತೋತ್ಸವವನ್ನು ಆಚರಿಸಿದೆ.

ಈಗಾಗಲೇ ಈ ಸಂಸ್ಥೆಯು ರಾಷ್ಟ್ರಮಟ್ಟದಲ್ಲಿ ಹೆಸರು ಮಾಡಿದೆ. ಕರ್ನಾಟಕದಲ್ಲಿ ಸಂಶೋಧನೆ ಮತ್ತು ಪಾಂಡಿತ್ಯ ಸಂವರ್ಧನೆಗಳಿಗೆ ಮೀಸಲಾದ ಪ್ರತಿಷ್ಠಿತ ಸಂಶೋಧನಾ ಕೇಂದ್ರವಾಗಿದೆ. ಈವರೆಗೆ ಸುಮಾರು 185 ಗ್ರಂಥಗಳನ್ನು ಹೊರತಂದಿದೆ. ಸಂಶೋಧನ ಕಾರ್ಯಕ್ಕೆ ಅನುಕೂಲವಾಗುವಂತೆ ಹದಿನೈದು ಸಾವಿರಕ್ಕೂ ಅಧಿಕ ಅಮೂಲ್ಯ ಗ್ರಂಥಗಳ ಆಕರಗ್ರಂಥಾಲಯವನ್ನೂ ಸುಮಾರು ಒಂದು ಸಾವಿರಕ್ಕೂ ಅಧಿಕ ಪ್ರಾಚೀನ ಓಲೆಗರಿ ಗ್ರಂಥಗಳ ಹಸ್ತಪ್ರತಿ ಭಂಡಾರವನ್ನೂ ಹೊಂದಿರುವ ಪ್ರತಿಷ್ಠಾನ, ಸದಸ್ಯರು, ಉದಾರ ದಾನಿಗಳು ಮತ್ತು ಅಭಿಮಾನಿಗಳಿಂದಲೇ ಬೆಳೆಯುತ್ತಿದೆ.

## ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ

ಹಂಪಿ ಕನ್ನಡ ವಿಶ್ವವಿದ್ಯಾನಿಲಯದಿಂದ ಮಾನ್ಯತೆ ಪಡೆದಿರುವ ಸ್ನಾತಕೋತ್ತರ ಸಂಶೋಧನ ಕೇಂದ್ರವಾಗಿರುವ ಪ್ರತಿಷ್ಠಾನದಲ್ಲಿ ಗಣ್ಯ ವಿದ್ವಾಂಸರ ಮಾರ್ಗದರ್ಶನದಲ್ಲಿ ಅನೇಕರು ಪಿಎಚ್.ಡಿ. ಪದವಿ ಮತ್ತು ಎಂ.ಫಿಲ್. ಪದವಿ ಪಡೆದಿರುತ್ತಾರೆ. ನುರಿತ ಮಾರ್ಗದರ್ಶಕರ ಸಹಕಾರದಿಂದ ಈ ಅಧ್ಯಯನ ಕೇಂದ್ರವನ್ನು ನಡೆಸಲಾಗುತ್ತಿದೆ.

## ರಾಷ್ಟ್ರೀಯ ಹಸ್ತಪ್ರತಿ ಮಿಷನ್‌ನ ಮಾನ್ಯತೆಯ ಕೇಂದ್ರ

ರಾಷ್ಟ್ರೀಯ ಹಸ್ತಪ್ರತಿ ಮಿಷನ್‌ನಿಂದ ಮಾನ್ಯತೆ ಪಡೆದಿರುವ ಪ್ರತಿಷ್ಠಾನವು ರಾಷ್ಟ್ರದ ಪ್ರತಿಷ್ಠಿತ ಹಸ್ತಪ್ರತಿ ಅಧ್ಯಯನ ಕೇಂದ್ರವಾಗಿದ್ದು ಅಮೂಲ್ಯ ಓಲೆಗರಿ ಗ್ರಂಥಗಳು, ಕಾಗದಪತ್ರಗಳು, ನಮ್ಮ ತಲೆಮಾರಿನ ಸಾಹಿತಿ-ಗಣ್ಯರ ಪತ್ರಗಳು ಮತ್ತು ಹಸ್ತಪ್ರತಿಗಳನ್ನು ಸಂರಕ್ಷಿಸುತ್ತ ನಾಡಿನ ಆಸ್ತಿಯನ್ನು ಉಳಿಸಲು ಶ್ರಮಿಸುತ್ತಿರುವ ಸೇವಾಸಂಸ್ಥೆಯಾಗಿದೆ.

## ಬಿ.ಎಂ.ಶ್ರೀ. ಕಲಾಭವನ

ಮೂರು ಮಹಡಿಗಳ ಭವ್ಯ ಬಿ.ಎಂ.ಶ್ರೀ. ಕಲಾಭವನವನ್ನು ಸಂಸದರ ನಿಧಿ ಮತ್ತು ದಾನಿಗಳ ನೆರವಿನಿಂದ ಕಟ್ಟಲಾಗಿದೆ. 'ಎಂ.ವಿ.ಸೀ. ಸಭಾಂಗಣ', ಗ್ರಂಥಾಲಯ, ವಸ್ತು-ಹಸ್ತಪ್ರತಿ ಸಂಗ್ರಹಾಲಯ, ಉಪನ್ಯಾಸ ಕೊಠಡಿಗಳು ನಿರ್ಮಾಣವಾಗಿವೆ.

## ಚಟುವಟಿಕೆಗಳು

'ಕರ್ನಾಟಕ ಲೋಚನ' ವಿದ್ವತ್ ಪತ್ರಿಕೆ ಹಾಗೂ 'ಹೊಂಗನಸು' ವಾರ್ತಾಪತ್ರದ ಪ್ರಕಟಣೆ, ಸಹೃದಯ ಗೋಷ್ಠಿಯ ಆಯೋಜನೆ, ಹಸ್ತಪ್ರತಿ ಶಾಸ್ತ್ರ ಮತ್ತು ಹಸ್ತಪ್ರತಿ ಅಧ್ಯಯನ ತರಗತಿಗಳು, ಹಸ್ತಪ್ರತಿ ಸಮಾವೇಶ, 'ಸಿರಿಕಂಟ' ವಿದ್ಯಾರ್ಥಿಗೋಷ್ಠಿ, ಹಳಗನ್ನಡ ಕಾವ್ಯಾಭ್ಯಾಸ ಶಿಬಿರ ಮೊದಲಾದುವು ಪ್ರತಿಷ್ಠಾನದ ಮುಖ್ಯ ಚಟುವಟಿಕೆಗಳಾಗಿವೆ.